ಸಂಪುಟ ೪ ಸಂಚಿಕೆ ೧ ಜುಲೈ ೨೦೦೨

# ಮಹಿಳಾ ಅಧ್ಯಯನ

## ದಕ್ಷಿಣಾಯನ ಸಂಚಿಕೆ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಮಹಿಳಾ ಅಧ್ಯಯನ

(ದಕ್ಷಿಣಾಯನ ಸಂಚಿಕೆ)

ಸಂಪಾದಕರು

ಡಾ. ಎಚ್.ಎಸ್. ಶ್ರೀಮತಿ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

**MAHILA ADHYAYANA** (Half Yearly) Vol. 4-1
Ed. by Dr. Sreemathi
***Published by***
Publication Division, Prasaranga
Kannada University, Hampi
Vidyaranya - 583 276

ಪುಟ : vi + ೧೬೦





ಪ್ರಕಾಶಕರು
ಪ್ರಕಟಣ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ–೫೮೩ ೨೭೬

ಬಿಡಿ ಪ್ರತಿ : ರೂ. ೨೫.೦೦
ವಾರ್ಷಿಕ ಚಂದಾ : ರೂ. ೫೦.೦೦

ಮುಖಪುಟ ವಿನ್ಯಾಸ
ಕೆ. ಕೆ. ಮಕಾಳಿ

ಕಲೆ : ಪಂಡಿತ್, ಕೊಲ್ಕೊತ

ಛಾಯಾಚಿತ್ರ : ಶ್ರೀ ಬಾರಾವಲಿ, ಬಾದಾಮಿ

ಅಕ್ಷರ ಸಂಯೋಜನೆ
ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್
ಕಮಲಾಪುರ



ಮುದ್ರಣ
ತ್ವರಿತ ಮುದ್ರಣ ಆಫ್‌ಸೆಟ್ ಪ್ರಿಂಟರ್ಸ್
ಗದಗ

# ನಿಮ್ಮೊಂದಿಗೆ

ನಮ್ಮ ಕನ್ನಡ ವಿಶ್ವವಿದ್ಯಾಲಯದ ದಶಮಾನೋತ್ಸವ ವಿಶೇಷಾಂಕವಾಗಿ ರೂಪುಗೊಂಡ ನಮ್ಮ ಮಹಿಳಾ ಅಧ್ಯಯನ ಪತ್ರಿಕೆಯ ಸಂಚಿಕೆಗೆ ಬಂದ ಪ್ರೋತ್ಸಾಹಕ ಪ್ರತಿಕ್ರಿಯೆಗಳಿಂದ ತುಂಬಾ ಸಂತೋಷವೆನಿಸಿದೆ. ಪತ್ರಿಕೆಯ ರೀತಿನೀತಿ ಒಲವು ನಿಲವುಗಳು ಕ್ಷೇತ್ರದ ಆಸಕ್ತರಿಗೆ, ಅಭಿಮಾನಿಗಳಿಗೆ ಹಾಗೂ ವಿದ್ವಾಂಸರಿಗೆ ಮೆಚ್ಚುಗೆಯಾಗುತ್ತಿದೆ ಎಂಬುದು ಪತ್ರಿಕೆಗೆ ದೊರಕಿದ ದೊಡ್ಡ ಸರ್ಟಿಫಿಕೇಟ್ ಎಂದುಕೊಳ್ಳುತ್ತೇನೆ.

ಈ ಮಧ್ಯೆ ನಮ್ಮ ಮಹಿಳಾ ಅಧ್ಯಯನ ವಿಭಾಗವು ಬಹಳ ಸಣ್ಣ ಪ್ರಮಾಣದಲ್ಲಿ ಎರಡು ದಿನಗಳ ಮಟ್ಟಿಗೆ ಒಂದು ಲೇಖಕಿಯರ ಕಮ್ಮಟವನ್ನು ಆಯೋಜಿಸಿತ್ತು. ವಾಸ್ತವದಲ್ಲಿ ಈ ಕಾರ್ಯಕ್ರಮ ವರ್ಷಾವಧಿಯಲ್ಲಿ ನಾವು ನಡೆಸಬೇಕಿದ್ದ ಶೈಕ್ಷಣಿಕ ಚಟುವಟಿಕೆಗಳ ಒಂದು ಭಾಗ ಅಷ್ಟೇ. ಆದರೆ ಇದು ಕೇವಲ ಕರ್ತವ್ಯದ ಭಾಗವಾಗಿ ಯಾಂತ್ರಿಕವಾಗಿ ನಡೆದು ಹೋಗಲಿಲ್ಲ ಎಂಬುದು ಒಂದು ವಿಶೇಷ. ಕರ್ನಾಟಕದ ವಿವಿಧ ಭಾಗಗಳಿಂದ ಪ್ರಾತಿನಿಧಿಕವಾಗಿ ಹಲವು ಲೇಖಕಿಯರು ನಮ್ಮ ಈ ಕಮ್ಮಟದಲ್ಲಿ ಭಾಗವಹಿಸಲು ಬಂದಿದ್ದರು. ಯಾವ ಹಮ್ಮು ಬಿಮ್ಮುಗಳ ಭಾರವಿಲ್ಲದೆ ಎಲ್ಲ ಹಿರಿಯ ಕಿರಿಯ ಲೇಖಕಿಯರೂ ಮುಕ್ತ ಚರ್ಚೆಯಲ್ಲಿ ಭಾಗವಹಿಸಿದ ರೀತಿಯಿಂದಾಗಿಯಷ್ಟೇ ಈ ಕಮ್ಮಟ ಅಷ್ಟೊಂದು ವಿಶೇಷವೆನಿಸಲು ಸಾಧ್ಯವಾದದ್ದು. ಅವರನ್ನು ಕೇಳಿದರೆ ನಮ್ಮ ಮಹಿಳಾ ಅಧ್ಯಯನ ವಿಭಾಗವು ಎಲ್ಲರನ್ನೂ ಒಂದೆಡೆ ಕಲೆಹಾಕಿ ಕಾರ್ಯಕ್ರಮವನ್ನು ಆಯೋಜಿಸಿದ ವಿಧಾನದಲ್ಲೇ ಒಂದು ಬಗೆಯ ಆತ್ಮೀಯತೆ ಇದ್ದಿತಾಗಿ ಪ್ರತಿಯೊಬ್ಬರೂ ಮುಕ್ತ ಮನಸ್ಸಿನಿಂದ ತೊಡಗಿಕೊಳ್ಳಲು ಸಾಧ್ಯವಾಯಿತು ಎಂದರು. ಈ ಮಾತನ್ನು ನಮಗೆ ಸಂದ ಹೊಗಳಿಕೆ ಎಂಬ ಜಂಭದಲ್ಲಿ ಹೇಳುತ್ತಿಲ್ಲ. ಬದಲಿಗೆ ಒಂದು ಮುಖ್ಯವಾದ ಸಂಗತಿಯನ್ನು ಪ್ರಸ್ತಾಪಿಸಲು ಹೇಳುತ್ತಿದ್ದೇನೆ. ವಾಸ್ತವದಲ್ಲಿ ಈ ಕಾರ್ಯಕ್ರಮಕ್ಕಾಗಿ ನಮಗೆ ದೊರೆತದ್ದು ಅಲ್ಪ ಪ್ರಮಾಣದ ಹಣಕಾಸಿನ ನೆರವು. ಅದ್ದೂರಿಯ ಸಮಾರಂಭ ಎಂದುಕೊಂಡರೆ ಒಂದು ಉಪನ್ಯಾಸವನ್ನಷ್ಟೇ ಏರ್ಪಡಿಸಲು ಸಾಕಾಗುವಷ್ಟು. ನಮಗೆ ಅದ್ದೂರಿಯ ಸಮಾರಂಭದ ಅಗತ್ಯ ಕಾಣಲಿಲ್ಲ. ಬದಲಿಗೆ ಇನ್ನಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಜನ ಒಟ್ಟು ಸೇರಿ ಉಪಯುಕ್ತವಾದ ಚರ್ಚೆ, ಸಂವಾದಗಳಂತಹುದು ನಡೆದು ಇನ್ನಷ್ಟು ಉತ್ತಮ ಪರಿಣಾಮವನ್ನು ನಿರೀಕ್ಷಿಸಬಹುದಾದ ಕಾರ್ಯಕ್ರಮ ನಡೆಯಲಿ ಎಂಬ ಆಸೆ. ಕಾಸು ಖರ್ಚಿಲ್ಲದ ನಿರಾಡಂಬರದ ಕಾರ್ಯಕ್ರಮದಲ್ಲಿ ಭಾಗವಹಿಸಲು ಆಸಕ್ತರು ದೊರೆತಾರೆಯೇ ಎಂಬ ಅನುಮಾನಕ್ಕೆ ಅವಕಾಶವೇ ಆಗಲಿಲ್ಲ. ಇಂದು ಲೇಖಕಿಯರು ಹತ್ತು ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಮಹಿಳೆಯರು ಎಂಬ ಕಾರಣಕ್ಕಾಗಿಯೇ ಅವರ ಸೃಜನಶೀಲತೆಯು ವಿಚಿತ್ರದ ಸವಾಲುಗಳಿಗೆ ಉತ್ತರಿಸಬೇಕಾದ ಒತ್ತಡದಲ್ಲಿ ಸಿಲುಕಿದಂತೆಯೂ ಇದೆ. ಇದನ್ನು ಕುರಿತಂತೆ ಲೇಖಕಿಯರು ಒಟ್ಟುಗೂಡಿ ಚರ್ಚಿಸಬೇಕಾದ

ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಒಂದು ಪುಟ್ಟ ಪ್ರಾತಿನಿಧಿಕ ಗುಂಪನ್ನು ಕಲೆಹಾಕಲಾಯಿತು. ಆಸೆಯೇನೋ ಬೆಟ್ಟದಷ್ಟಿದ್ದರೂ ಹಿಂದೆ ಹೇಳಿದ ಕಾರಣಕ್ಕಾಗಿ ಹೆಚ್ಚು ಜನರನ್ನು ಸೇರಿಸುವುದಾಗಲಿಲ್ಲ. ಆದರೆ ಈ ಕಾರ್ಯಕ್ರಮವನ್ನು ದೊಡ್ಡಪ್ರಮಾಣದಲ್ಲಿ ವಿಸ್ತರಿಸಿ ನಡೆಸಬೇಕೆಂಬ ಉದ್ದೇಶ ಹಾಗೂ ಆಸೆ ಮಾತ್ರ ಇನ್ನೂ ಇದೆ. ಈಗ ನಡೆಸಿದ ಕಮ್ಮಟದಲ್ಲಿ ಮುಖ್ಯವಾದ ಕೆಲವು ಪ್ರಶ್ನೆಗಳನ್ನು ಚರ್ಚಿಸಲು ಸಾಧ್ಯವಾಯಿತು. ಇವೆಲ್ಲದರ ಫಲಿತವನ್ನು ಸದ್ಯದಲ್ಲೇ ಪುಸ್ತಕ ರೂಪದಲ್ಲಿ ತರುವ ಸಿದ್ಧತೆ ಆರಂಭವಾಗಿದೆ. ಚರ್ಚೆಯ ಫಲಿತವಾಗಿ ಬಂದ ಒಂದು ನಿರ್ಣಯವನ್ನು ಈಗಲೇ ಹಂಚಿಕೊಳ್ಳುವ ತವಕ ನನಗೆ. ಅದೆಂದರೆ, ಮಹಿಳೆಯರ ಸೃಜನಶೀಲತೆಯು ಕೆಲವೊಮ್ಮೆ ಅನವಶ್ಯಕವಾದ, ಸಾಹಿತ್ಯೇತರವಾದ ಕಾರಣಗಳಿಗಾಗಿ ಹುಟ್ಟಿಕೊಳ್ಳುವ ಪ್ರಶ್ನೆಗಳನ್ನು ಬಿಡಿಸಬೇಕೆಂಬ ಒತ್ತಡಕ್ಕೆ ಸಿಲುಕುತ್ತಿದೆ. ಇಲ್ಲಿಯೂ ಕೂಡ ಲಿಂಗ ತಾರತಮ್ಯದ ಕಾರಣಗಳು ನುಸುಳುತ್ತಿವೆ ಎಂದರೆ ವಿನಾಕಾರಣದ ಆಕ್ಷೇಪಗಳನ್ನು ಎತ್ತುತ್ತಿದ್ದೇವೆ ಎನಿಸಬಹುದು. ಆದರೆ ಈ ರಾಜಕಾರಣ ಕೆಲಸ ಮಾಡುತ್ತಿದೆ ಎಂಬುದನ್ನು ಸಾಬೀತುಗೊಳಿಸುವುದು ತೀರಾ ಕಷ್ಟದ ಕೆಲಸವಲ್ಲ. ನಮ್ಮ ಮುಖ್ಯ ನಿಲುವು ಈ ಸಂದರ್ಭದಲ್ಲಿ ಯಾವುದಾಗಿರಬೇಕು ಎಂಬುದು ನಾವು ಕೇಳಿಕೊಳ್ಳಬೇಕಾಗಿದೆ. ಇದನ್ನು ಗಟ್ಟಿಗೊಳಿಸುವುದಾಗದಿದ್ದರೆ ಲೇಖಕಿಯರ ಬರಹಗಳು ತಮ್ಮ ಗುರಿ ಸಾಧನೆಗಳನ್ನು ಗುರುತಿಸಿಕೊಳ್ಳುವುದೇ ಸಮಸ್ಯೆಯಾಗಿಬಿಡಬಹುದು. ಅನಗತ್ಯದ ಯಾವುದೋ ಪ್ರಶ್ನೆಗಳನ್ನು ಉತ್ತರಿಸುತ್ತಾ ಕೂರುವುದರಲ್ಲಿ, ಸೃಜನಶೀಲತೆಯು ಆಯಾಸಗೊಂಡರೆ ದಿಕ್ಕು ತಪ್ಪಿದಂತಾದೀತು. ಇದು ನಮ್ಮೆಲ್ಲರನ್ನೂ ಒಳಗೊಳ್ಳುವ ದೊಡ್ಡ ಚರ್ಚೆ. ಪರಸ್ಪರ ಸೋದರಿತ್ವ, ವಿನಿಮಯ, ಅನುಸಂಧಾನ, ನಂಬಿಕೆಗಳನ್ನು ಬಿಂಬಿಸುವ ಸಂಬಂಧಗಳಲ್ಲಿ ಲೇಖಕಿಯರು ಒಗ್ಗೂಡಿ ನಿಂತಾಗ ಮಾತ್ರವೇ ಅನಗತ್ಯದ ಒತ್ತಡಗಳನ್ನು ಪಕ್ಕಕ್ಕೆ ಸರಿಸಿ ಸೃಜನಶೀಲತೆಯನ್ನು ಪೋಷಿಸುವುದು ಸಾಧ್ಯವಾದೀತು ಎಂಬುದು ಎಲ್ಲರ ಅಭಿಪ್ರಾಯವಾಗಿತ್ತು. ಇಂತಹ ಹಲವು ಚರ್ಚೆಗಳನ್ನು ನಾವಿಂದು ಬೆಳೆಸಬೇಕೆಂದೆ ಮಹಿಳಾ ಅಧ್ಯಯನ ಪತ್ರಿಕೆಯು ಇಂತಹ ಚರ್ಚೆಗಳಿಗೆ ಮುಖ್ಯ ವೇದಿಕೆಯಾಗಿ ಒದಗಿಬರಲೆಂದು ನಡೆಸುತ್ತಿರುವ ಪ್ರಯತ್ನಕ್ಕೆ ಆಸಕ್ತರು ಬೆಂಬಲ ನೀಡುತ್ತಿದ್ದಾರೆಂಬುದನ್ನು ಕೃತಜ್ಞತೆಯಿಂದ ನೆನೆಯುತ್ತೇನೆ.

ಈ ಬಾರಿಯ ಸಂಚಿಕೆಯನ್ನು ಸಿದ್ಧಪಡಿಸುವಲ್ಲಿ ನಮಗೆ ಎಂದಿನಂತೆ ಉತ್ಸಾಹವನ್ನು ತುಂಬಿರುವ ನಮ್ಮ ಮಾನ್ಯ ಕುಲಪತಿಗಳಿಗೆ, ಸಲಹಾ ಮಂಡಳಿಯ ಸದಸ್ಯರಾದ ಡಾ. ವಿಜಯಾ ಹಾಗೂ ಡಾ. ಮಲ್ಲಿಕಾ ಘಂಟಿಯವರಿಗೆ ಪ್ರೀತಿಯಿಂದ ವಂದಿಸುತ್ತೇನೆ. ಸಹೋದ್ಯೋಗಿ ಗೆಳತಿ ಡಾ. ಉಷಾ ಅವರು ನೀಡಿದ ನೆರವಿಗೆ ಆಭಾರಿಯಾಗಿದ್ದೇನೆ. ಇಲ್ಲಿನ ಲೇಖನಗಳನ್ನು ಸಿದ್ಧಪಡಿಸಿಕೊಟ್ಟ ಎಲ್ಲ ವಿದ್ವಾಂಸರಿಗೂ ಕೃತಜ್ಞತೆಗಳು. ಹಾಗೆಯೇ ಡಿ.ಟಿ.ಪಿ. ಮಾಡಿದ ಶ್ರೀ ಸಾವಳಗಿ ಶಿವಲಿಂಗೇಶ್ವರ ಗ್ರಾಫಿಕ್ಸ್ ಅವರಿಗೂ, ನಮ್ಮ ಪ್ರಸಾರಂಗದ ಎಲ್ಲ ವಿಭಾಗಗಳ ಮುಖ್ಯಸ್ಥರು ಹಾಗೂ ಅವರ ಸಿಬ್ಬಂದಿಗೂ ಕೂಡ ನನ್ನ ವಂದನೆಗಳು ಸಲ್ಲುತ್ತವೆ. ಪತ್ರಿಕೆಯು ಸುಂದರವಾಗಿ ರೂಪುಗೊಂಡು ನಿಮ್ಮ ಕೈಸೇರುತ್ತಿರುವ ಈ ಸಂದರ್ಭದಲ್ಲಿ ಓದುಗರಾದ ನೀವೇ ನಮ್ಮ ಇಷ್ಟೆಲ್ಲ ಪರಿಶ್ರಮಕ್ಕೂ ಮೂಲ ಪ್ರೇರಣೆ ಎಂಬುದನ್ನು ಮತ್ತೊಮ್ಮೆ ಸ್ಮರಿಸುತ್ತೇನೆ.

**ಡಾ. ಎಚ್.ಎಸ್. ಶ್ರೀಮತಿ**

# ಪರಿವಿಡಿ

# ಮಹಿಳೆಯರ ಸ್ವಾವಲಂಬನೆಗೆ ಸಹಕಾರ ಕ್ಷೇತ್ರದಲ್ಲಿ ಶ್ರಮಿಸಿದ ಶ್ರೀಮತಿ ನಾಗರತ್ನರಾವ್ ಅವರೊಂದಿಗೆ ಒಂದಿಷ್ಟು ಮಾತುಕತೆ

**ಸಂದರ್ಶಕಿ : ವೈ.ಎಸ್.ಜ್ಯೋತಿ ಶಶಿಕುಮಾರ**

ಶ್ರೀಮತಿ ಎಸ್.ಕೆ. ನಾಗರತ್ನರಾವ್ ಮಹಿಳಾ ಸಂಘಟಕರು, ಪ್ರತಿಷ್ಠಿತವಾಗಿ ಗೌರವಾನ್ವಿತ ರೀತಿಯಲ್ಲಿ ಮಹಿಳೆಯರ ಆರ್ಥಿಕ ದಾಸ್ಯವನ್ನು ಕಳೆಯುವ ಬಗ್ಗೆ ಅವರು ತುಂಬಾ ಚಿಂತನೆ ನಡೆಸಿದ್ದಾರೆ. ಮಹಿಳೆ ವೈಯಕ್ತಿಕವಾಗಿ ಹಾಗೂ ಸಾಮಾಜಿಕ ಪ್ರಯತ್ನಗಳ ಮೂಲಕ ತನ್ನ ಅಸ್ತಿತ್ವದ ನೆಲೆ ಹಾಗೂ ಬೆಲೆಯನ್ನು ಕಂಡುಕೊಳ್ಳುವುದು ಸಾಧ್ಯವೆಂಬುದನ್ನು ಸತ್ಯವಾಗಿಸಿದ್ದಾರೆ. ನಾಗರತ್ನರಾವ್ ಸಹಕಾರ ಸಂಘಗಳ ಮಹಾಮಂಡಲದಲ್ಲಿ ಕ್ಷೇತ್ರ ಮಹಿಳಾ ಶಿಕ್ಷಣಾಧಿಕಾರಿಯಾಗಿ ಧೀರ್ಘ ಸೇವೆ ಸಲ್ಲಿಸಿ ಸಹಜವಾಗಿಯೇ ಮಹಿಳೆಯರ ಉತ್ಕರ್ಷದ ಬಗ್ಗೆ ಆಪಾರ ಕಳಕಳಿ ಹೊಂದಿದ್ದಾರೆ. 'ಮಹಿಳಾ ಸಹಕಾರಿ' ಎಂದೊಡನೆ ನೆನಪಾಗುವ ಮೊಟ್ಟಮೊದಲ ಮಹಿಳೆಯಾಗಿ ಈಗಲೂ ಉತ್ಸಾಹದಿಂದ, ಇತರರಿಗೆ ಪ್ರೇರಕಶಕ್ತಿಯಾಗಿರುವ ಶ್ರೀಮತಿ ನಾಗರತ್ನರಾವ್ ಬೆಂಗಳೂರಿನ ಮಲ್ಲೇಶ್ವರಂ ನಿವಾಸಿ. ಇತ್ತೀಚೆಗೆ ನಾನು ಅವರನ್ನು ಭೇಟಿ ಮಾಡಿದಾಗ ಅವರು ತಮ್ಮದೇ ಲಹರಿಯಲ್ಲಿ ತಮ್ಮ ಅನುಭವಗಳನ್ನು ಹೀಗೆ ನನ್ನ ಮುಂದೆ ತೆರೆದಿಟ್ಟರು.

**ಜ್ಯೋತಿ :** ಮಹಿಳಾ ಸಹಕಾರ ಸಂಘ ಅಥವಾ ಮಹಿಳಾ ಸಹಕಾರಿಗಳು ಎಂದಕೂಡಲೇ ನಿಮ್ಮ ಹೆಸರು ಮೊಟ್ಟಮೊದಲು ಕೇಳಿಬರುತ್ತೆ. ಅಷ್ಟು ಚಿರಪರಿಚಿತರಾದ ಅಥವಾ ಜನಪ್ರಿಯರಾದ ನೀವು ಈ ಸಹಕಾರ ಕ್ಷೇತ್ರಕ್ಕೆ ಪ್ರವೇಶ ಮಾಡಿದ್ದು ಹೇಗೆ?

**ನಾ.ರಾವ್ :** ನಾನು ಮೊದಲು ಸಿಂಡಿಕೇಟ್ ಬ್ಯಾಂಕ್‌ನಲ್ಲಿ ಕೆಲಸ ಮಾಡಿಕೊಂಡಿದ್ದೆ ಕ್ಲಾರ್ಕ್ ಅಂತ ಹೇಳ್ಬಿಟ್ಟು. ನನಗೆ ಅಂಥದೇನು ಡೆಸ್ಕವರ್ಕ್ ಇಷ್ಟ ಆಗ್ತಿರಲಿಲ್ಲ. ಅವಾಗ ನಾನೇನು ಮಾಡ್ದೆ ಅಂದ್ರೆ ನನಗೊಬ್ಬಳು ಸ್ನೇಹಿತೆ ಇದ್ದಳು. ಅವಳು ಗ್ರಾಹಕರ ಸಹಕಾರಿ ಮಹಾಮಂಡಳದಲ್ಲಿ ಇದ್ದಳು. ಅಂದರೆ Consumer Cooperative federationನಲ್ಲಿ. invoice ಹಾಕೋದು ಅದೂ ಇದು ಕೆಲಸ ಮಾಡ್ತಾ ಇದ್ದಳು. ನಾನು ಅವಳು ಬಹಳಾ ಕ್ಲೋಸು. ಅವಳು 'ನಾನು ಈ ಕೆಲಸ ಬಿಡ್ತಾ ಇದೀನಿ ನೀನು ಬೇಕಾದರೆ ಇಲ್ಲಿ ಕೂತ್ಕೊ' ಅಂದ್ಲು. ಅಲ್ಲೂ ಹೋದೆ. ಅಲ್ಲೂ ನನಗೆ ಇಷ್ಟ ಆಗಲಿಲ್ಲ. ಏನೋ ಒಂದು ರಸೀತಿ

ಹಾಕೋದಂತೆ, ಇನ್ ವಾಯ್ಸ್ ಹಾಕೋದಂತೆ. ಅಲ್ಲಿಂದ ಅವಳು ಡೆಲ್ಲಿಗೆ ತರಬೇತಿಗೆ ಹೋದಾಗ ಯಾರನ್ನೋ ಮೀಟ್ ಮಾಡಿದಳು. ಅವಳಿಗೆ ಮದುವೆ ಆಯ್ತು. ಡೆಲ್ಲಿಗೆ ಬಾ ಅಂದ್ಲು. ಆ ಕೆಲಸ ನನಗೆ ಆಕರ್ಷಣೀಯವಾಗಿ ಕಾಣಿಸ್ತು. ಅವಳು ಆ ಕೆಲಸ ಬಿಡೋವಾಗ ನನಗೆ ಕೊಡಿಸಿದಳು. ಅಲ್ಲಿಗೆ ಹೋದೆ ಅದು A Sort of Social Work ಥರ ಕಾಣಿಸಿತ್ತು. ನಾನು ಕಾಲೇಜಿನಲ್ಲಿ ಇದ್ದಾಗಲೂ ಕರ್ನಾಟಕ ಸಂಘದ Secretaryಆಗಿದ್ದೆ.

**ಜ್ಯೋತಿ :** ನನಗೆ ನೆನಪಿದೆ. ನೀವು ಶಕುಂತಲಾಖತ್ರಿ ಇಬ್ಬರೂ Election ಗೆ ನಿಂತಿದ್ರಿ, ನಾನು ಪಿ.ಯು.ಸಿ ಲಿದ್ದೆ.

**ನಾ.ರಾವ್ :** ಹೌದು, ಹೌದು (ನಗು..) ಎನ್.ಸಿ.ಸಿ ನಲ್ಲೆ ಅಂಡರ್ ಆಫೀಸರ್ ಆಗಿದ್ದೆ. ಅವಾಗೆಲ್ಲ ನಮಗೆ ಈ ಹಳ್ಳಿಗಳಲ್ಲೆಲ್ಲ ಕೆಲಸ ಮಾಡೋದು ಇಷ್ಟ ಅಗ್ತಿತ್ತು. ನನಗೆ ಆಗಿನಿಂದಲೂ ಈ ಹೆಣ್ಣು ಮಕ್ಕಳ ಕಷ್ಟದ ಬಗ್ಗೆ, ಅಂದರೆ ಅವಳ್ಯಾರೋ ಕಷ್ಟದಲ್ಲಿ ಕೆರೇಲೆ ಬಿದ್ದಳು. ಸುಟ್ಕೊಂಡಿದ್ದಾಳೆ ಅಂತ ಕೇಳಿ ಅವರಿಗೋಸ್ಕರ ಕೆಲಸ ಮಾಡೋಣಾಂತ ನನ್ನ ಮನಸ್ಸಿನಲ್ಲಿತು. ನಮ್ಮ ಮನೆಗಳಲ್ಲಿ ನಾನು ಬಿಟ್ಟು ಯಾರೂ ಕೆಲಸಕ್ಕೆ ಹೋಗಿರಲಿಲ್ಲ. ನಾನು ಕೆಲಸಕ್ಕೆ ಹೋದಾಗಲೂ ನನ್ನ ಅಣ್ಣಂದಿರು ತುಂಬಾ ವಿರೋಧ ಮಾಡಿದ್ರು ಕೆಲಸಕ್ಕೆ ಹೋಗಕೂಡದು ನಮ್ಮದೆಲ್ಲ ಪ್ರೆಸ್ಟೀಜು ಅದೂ ಇದೂ ಅಂತ ಎಲ್ಲ ಹೇಳಿದರು. ಆದರೂ ನಮ್ಮ ತಾಯೀದು ಒಂದು ಚೂರು ಎನ್‌ಕರೇಜಮೆಂಟ್ ಇತ್ತು. ನಾನು ಹೋದೆ ಈ ಕೆಲಸ ನನಗೆ ಖುಷಿ ತಂತು. ಅಮೇಲೆ ಹೆಂಗಸರ ಮಹಿಳಾ ಸಮಾಜಗಳಂತೆ, ಮಹಿಳಾ ಸಹಕಾರ ಸಂಘಗಳಂತೆ, ಗೃಹಿಣಿಯರ ಗುಂಪುಗಳಿಗೆ ಹೋಗಿ, ಅಗತಾನೆ ದೆಹಲಿಗೆ ನಮ್ಮನ್ನೆಲ್ಲ ಸೇರಿದ ತಕ್ಷಣ ಬೇಸಿಕ್ ಟ್ರೈನಿಂಗ್‌ಗೆ ಅಂತ ಕಳಿಸಿದ್ರು. ಅಲ್ಲಿಂದ



ಕಲಿತುಕೊಂಡು ಬಂದು ಇವರಿಗೆಲ್ಲ ಸಹಕಾರ ಸಂಘದ ಬಗ್ಗೆ ತರಬೇತಿ ಕೊಡ್ತಾ ಬಂದೆ. ೩ ದಿನದ ಕ್ಲಾಸಿನ ತರಬೇತಿ, ೭ದಿನದ, ೫ದಿನದ ತರಬೇತಿ ಮಾಡಿದ್ರೆ, ಒಂದು ದಿನ ಅವರನ್ನೆಲ್ಲ ಹೊರಗಡೆ ಕರೆದು ಕೊಂಡು ಹೋಗಿ ಬಂದು ಇದನ್ನೆಲ್ಲ ಮಾಡ್ತ ಗ್ರಾಜುಯಲ್ ಆಗಿ ನನಗೆ ಗ್ರಿಪ್ ಬಂತು. ಬಿಗಿನಿಂಗ್ ನಲ್ಲಿ ಗ್ರಿಪ್ ಬಂದಿದ್ದರಿಂದ ಮೊಟ್ಟ ಮೊದಲನೇದಾಗಿ ಬಾಗಲೂರು ಲೇಔಟ್, ಲಿಂಗರಾಜ ಪುರದ ಬಾಗಲೂರಿನಲ್ಲಿ ಒಂದು ಸಂಘ ಮಾಡಿದೆ. ಅಲ್ಲಿ ನನಗೆ ಒಬ್ಬ ಒಳ್ಳೆ

ಆರ್ಗನೈಸರ್ ಸಿಕ್ಕದ್ದರು. ಜಯಲಕ್ಷ್ಮೀ ಅಂತ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿದ್ದಳು. ತುಂಬಾ ಚೆನ್ನಾಗಿ ಕೆಲಸ ಮಾಡ್ತಿದ್ದಳು. ಆಕೇನೂ ಒಬ್ಬಳೇ, ಸಿಂಗಲ್ ಲೇಡಿ. ಅವಳು ತುಂಬ ಕಷ್ಟಪಟ್ಟು ಕೆಲಸ ಮಾಡೋಳು. ಅವಳನ್ನು ಹಿಡಿದುಕೊಂಡು ಒಂದು ಸೊಸೈಟಿ ಮಾಡಿದೆ. ಆ ಸೊಸೈಟಿನ ಕೆನರಾಬ್ಯಾಂಕ್ ಜೊತೆ ಇನ್‌ವಾಲ್ವ್ ಮಾಡಿದೆ. ಅಲ್ಲಿ ಸೋಷಿಯಲ್ ಆಕ್ಷನ್ ಚಾನೆಲ್ ಇತ್ತು. ಅಲ್ಲಿ ಒಬ್ಬರು ಕಾಮತ್ ಅಂತ ಇದ್ದರು. ನಂಥರಾನೇ ಕಷ್ಟಪಟ್ಟು ಕೆಲಸ ಮಾಡೋರು ಪಾಪ. ಅವರನ್ನು ಹಿಡಿದು ಸ್ಮಾಲ್ ಸೇವಿಂಗ್ಸ್ ಅಂತ ಆದೂ ಇದೂ ಮಾಡ್ದೆ. ಅಲ್ಲಿ ಹೆಂಗಸರಿಗೆ ತುಂಬಾ ಕಷ್ಟ ಇತ್ತು. ಲಿಂಗರಾಜಪುರದಲ್ಲಿ ಗಂಡಸರು ಕುಡಿಯೋದು ಹೆಂಗಸರಿಗೆ ಹೊಡೆಯೋದು ಜಾಸ್ತಿ. ಹೀಗಾಗಿ ಆ ಹೆಂಗಸರನ್ನು ಜಯಲಕ್ಷ್ಮಿ ಮತ್ತು ಕಾಮತ್ ಸಹಾಯದಿಂದ ಆರ್ಗನೈಸ್ ಮಾಡಿ ಆ ಹೆಂಗಸರಿಗೊಂದು ಕೊ-ಅಪರೇಟಿವ್ ಸೊಸೈಟಿ ಮಾಡಿಕೊಟ್ಟೆ. ಈ ಜಯಲಕ್ಷ್ಮಿ ಕೆನರಾ ಬ್ಯಾಂಕನ್ನು ಭದ್ರವಾಗಿ ಹಿಡಿದುಕೊಂಡು ಅವರಿಂದ ಎನ್‌ವೆಲಪ್ ಮಾಡಿಸೋದಂತೆ ಅದಂತೆ ಇದಂತೆ ಮಾಡಿಸೋದಕ್ಕೆ ಶುರುಮಾಡಿದ್ಲು. ಅಲ್ಲಿ ಒಬ್ಬರು ಪಾದ್ರಿ ಇದ್ದರು. ಅವರು ನಮಗಾಗಿ ಸಣ್ಣದಾಗಿ ಮಿಷನರಿಯಿಂದ ಸ್ವಲ್ಪ ಫಂಡ್ ಕೊಡೋಕೆ ಶುರುಮಾಡಿದರು. ಹೀಗಾಗಿ, ಹೆಣ್ಣು ಮಕ್ಕಳನ್ನೆಲ್ಲ ಚೆನ್ನಾಗಿ ಆರ್ಗನೈಸ್ ಮಾಡಿ, ಇವತ್ತು ಒಬ್ಬ ಹೆಂಗಸು ದಿನಕ್ಕೆ ಒಂದು ಸಾವಿರ ರೂಪಾಯಿವರೆಗೆ ಆರ್ನ್ ಮಾಡ್ತಾಳೆ. ಇವತ್ತಿಗೂ ಆ ಸೊಸೈಟಿ ಇದೆ. ಇನ್ ಫ್ಯಾಕ್ಟ್ ಆ ಜಯಲಕ್ಷ್ಮೀ ಅನ್ನೋಳಿಗೆ ಈಗ ತುಂಬಾ ವಯಸ್ಸಾಗಿ ಹೋಗಿದೆ. ನನ್ನನ್ನು ಸಂಘ ತೊಗೋ ಅಂತ ಹೇಳ್ತಾ ಇದ್ದಾಳೆ. ನಾನಿಲ್ಲಿದ್ದುಕೊಂಡು ಲಿಂಗರಾಜಪುರಕ್ಕೆ ಹೋಗಿ ಅಷ್ಟುದೂರ ಹೋಗಿ ಸಿನ್ಸಿಯರ್ ಆಗಿ ಕೆಲಸ ಮಾಡೋಕೆ ಸಾಧ್ಯನಾ ಅಂತ ನಾನು ನೋಡ್ತಾ ಇದೀನಿ. ಅವಳೂ ತುಂಬಾ ಚೆನ್ನಾಗಿ ಸಂಘುವನ್ನು ಬೆಳೆಸಿದಾಳೆ. ಅವರಿಗೆ ಮನೆ ಕೊಡಿಸಿದ್ದಾಳೆ. ಇನ್ ಕಮ್ ಜನರೇಟಿಂಗ್ ಪ್ರಾಜೆಕ್ಟ್ಸ್ ಮಾಡಿದ್ದಾಳೆ. ಟೈಲರಿಂಗ್ ಇದೆ. ಎಕ್ಸ್‌ಪೋರ್ಟ ಗಾರ್ಮೆಂಟ್ಸ್ ಮಾಡ್ತಾಳೆ, ಕಾಂಡಿಮೆಂಟ್ಸ್ ಮಾಡ್ತಾಳೆ, ಎನ್‌ವೆಲಪ್ಸ್ ಮಾಡಿಸಿ ಕೆನರಾಬ್ಯಾಂಕಿಗೆ ಕೊಡ್ತಾಳೆ. ಅವರನ್ನೆಲ್ಲ ಲೀಡರ್ಸ್ ಮಾಡಿದ್ದಾಳೆ. ಇವತ್ತಿನ ದಿನ ಜಯಲಕ್ಷ್ಮಿ ಇಲ್ಲದಿದ್ದರೂ ಸಂಘುವನ್ನು ನಡೆಸಿಕೊಂಡು ಹೋಗೋ ಶಕ್ತಿಯನ್ನು ಆ ಹೆಣ್ಣು ಮಕ್ಕಳಿಗೆ ಕೊಟ್ಟಿದ್ದಾಳೆ. ಅವಳು ನನಗೆ ತುಂಬಾ ಪ್ರೋತ್ಸಾಹ ಕೊಟ್ಟಳೂ. ಆವಳೂ ಕೂಡ ತುಂಬ ನೊಂದ ಹೆಂಗಸು. ಹೀಗೆ ಇಲಾಖೆಯಿಂದ ಸರಿಯಾಗಿ ಸಹಕಾರ ಕೊಡಲಿಲ್ಲ ಅಂತ ನನ್ನನ್ನೂ ತುಂಬ ಬಯ್ಯೋಳು. ನಾನಿದನ್ನ ಟ್ರಸ್ಟ್ ಮಾಡಿಬಿಡ್ತೀನಿ ಅಂತ ಹೆದರಿಸೋಳು. "ಬೇಡಮ್ಮ ಇದು ನನ್ನ ಮಾಡೆಲ್ ಕೊ-ಆಪರೇಟಿವ್ ಸೊಸೈಟಿ". ಇದು ನನ್ನ ಕೆಲಸದ ಮೊಟ್ಟಮೊದಲ ಸಹಕಾರಿ ಸಂಘ. ಚೆನ್ನಾಗಿದೆ. ಇದನ್ನು ಡೌನ್ ಟ್ರಾಡೆನ್ ಹೆಂಗಸರಿಗೆ ರೀಹ್ಯಾಬಿಲಿಟೇಷನ್ ಥರ ನಾವು ಮಾಡಿದ್ದೇವೆ. ಇರಲಿ ಇದು ಮಾಡೆಲ್ ಆಗತ್ತೆ ಅಂತ ಹೇಳಿ ಕಷ್ಟದಿಂದ ಇವತ್ತಿಗೂ ಆ ಸಂಘುವನ್ನು ಉಳಿಸಿಕೊಂಡು ಬಂದಿದ್ದೇವೆ. ತುಂಬ ಚೆನ್ನಾಗಿ ನಡೀತಾ ಇದೆ.

ಯಾವುದೇ ತರಹದ ಇಲಾಖೆಯಿಂದ ಏನೂ ಸಹಾಯ ತೊಗೊಳ್ಳದೆ, ಅವರೂ ಇವರೂ ಅದರಲ್ಲೂ ಕೆನರಾಬ್ಯಾಂಕ್ ಮಾತ್ರ ತುಂಬ ಸಪೋರ್ಟ್ ಕೊಟ್ಟು, ಅದನ್ನು ನಡಿಸ್ತಾ ಇದೀವಿ. ನನಗೆ ಈ ತರಹ ಸೋಷಿಯಲ್ ವರ್ಕ್‌ನಲ್ಲಿ ಆಸಕ್ತಿ ಬಂದುಬಿಟ್ಟ ಮೇಲೆ ಎಷ್ಟೋ ಸಲ ನನ್ನ ಸಂಬಳ ಎಲ್ಲ ಅಲ್ಲೇ ಖರ್ಚಾಗಿ ಬಿಡ್ತಿತ್ತು. ನಾ ಹೆಚ್ಚಿಗೆ ಮನೆಗೆ ಆಗಲಿ ಮನೆಯೋರೇ ಆಗಲಿ ಯಾರೂ ನನ್ನ ಕೊಡೂಂತ ಕೇಳ್ತಿರಲಿಲ್ಲ. ನಾನು ಕಂಫರ್ಟ್‌ಬಲ್ ಆಗಿ ಹೋಗಿ ಕೆಲಸ ಮಾಡಿಕೊಂಡು ಬರೋದಕ್ಕೆ ಸಾಲುವಷ್ಟು ಕೈಗೆ ದುಡ್ಡು ಬರ್ತಾ ಇತ್ತು. ದುಡ್ಡಿಗಿಂತ ಹೆಚ್ಚಾಗಿ ನನಗೆ ಕೆಲಸ ಇಷ್ಟ ಆಗ್ತಿತ್ತು. ಆಗಲೇ ಹೇಳಿದ ಹಾಗೆ ಕಾಲೇಜ್ ಡೇಸ್ ನಿಂದಲೂ ಸೋಷಿಯಲ್ ವರ್ಕ್‌ನಲ್ಲಿ ನನಗೆ ಆಸಕ್ತಿ ಇದ್ದುದರಿಂದ ಈ ಕೆಲಸಾನ ನಾನು ಚೆನ್ನಾಗಿ ಹಿಡ್ಕೊಂಡು ಬಿಟ್ಟೆ. ಸೊ ಇದರಲ್ಲಿ ನಾನು ೧೯೬೬ಕ್ಕೆ ಹೋದೋಳು ೨೦೦೦ದವರೆಗೂ ಒಂದೇ ಸಮನೆ ಕೆಲಸ ಮಾಡಿದೆ. ೧೯೮೪ರ ತನಕ ಶಿಕ್ಷಕಿಯಾಗಿ ಫಿಕ್ಸ್‌ಡ್ ವರ್ಕ್ ಮಾಡಿದೆ. ೧೯೮೪ರಲ್ಲಿ ಬಿ.ಎಸ್.ವಿಶ್ವನಾಥನ್ ಅವರು ಚೇರ್‌ಮನ್ ಆಗಿದ್ದಾಗ ಮಹಿಳಾ ಅಧಿಕಾರಿ ಅಂತ ಹುದ್ದೆ ಕೊಟ್ಟರು. ಇಡೀ ಕರ್ನಾಟಕದ ಜ್ಯೂರಿಸ್‌ಡಿಕ್ಷನ್ ಇತ್ತು. ಎಲ್ಲ ಪೂರ್ತಿ ಕರ್ನಾಟಕದಲ್ಲಿ ಟ್ರಾವೆಲ್ ಮಾಡಿ ಮಹಿಳೆಯರನ್ನು ಹೆಚ್ಚು ಹೆಚ್ಚಾಗಿ ತೊಡಗಿಸಿಕೊಂಡೆವು. ಈಗ ೨೮ ಮಹಿಳಾ ಸಹಕಾರಿ ಬ್ಯಾಂಕ್ ಮಾಡಿದೀನಿ. ೨೦ ಜಿಲ್ಲಾ ವಿವಿಧೋದ್ದೇಶ ಸಹಕಾರಿ ಸಂಘ ಮಾಡಿದ್ದೀವಿ, ಹಾಲು ಸೊಸೈಟಿ, ಇತರೆ ಕ್ರೆಡಿಟ್ ಸೊಸೈಟಿ ಇವೆಲ್ಲ ಬೇಕಾದಷ್ಟು ಮಾಡಿದ್ದೀವಿ.

**ನಾನು :** ಒಬ್ಬ ಮಹಿಳೆಗೆ ಇದು ಅತಿ ದೊಡ್ಡ ಸಾಧನೆಯಂತಲೇ ಹೇಳಬಹುದು.

**ನಾ.ರಾವ್ :** ಸಾಧನೆ ಅಂದರೆ ನನ್ನೊಬ್ಬಳಿಗಿಂತ, ಜನರ ಸಹಾಯ ಚೆನ್ನಾಗಿತ್ತು. ನಾನು ಏನಾದರೂ ಹೋಗಿ ಹೇಳಿದರೆ ಆವರಿಗೆ ಕೇಳಿ ಆಸಕ್ತಿಬರುವಷ್ಟು ತರಬೇತಿ ಕೊಡ್ತಿದ್ದೆ. ಅದು ಕೊಟ್ಟ ಮೇಲೆ ಬಿಗಿನಿಂಗ್ ನಲ್ಲೆಲ್ಲ ದುಬಾಷಿ ಅವರು ಇದ್ದಾಗ ನನ್ನ ಕೆಲಸ ನೋಡಿ ಸ್ಟೈಪೆಂಡ್ ಅಂತ introduce ಮಾಡಿದ್ದರು. ಒಂದೊಂದು ಹೆಂಗಸಿಗೆ ಹತ್ತತ್ತು ರೂಪಾಯಿ ಸ್ಟೈಪೆಂಡ್ ಕೊಡೋಣ ಎಷ್ಟು ಚೆನ್ನಾಗಿ ಕೆಲಸ ಆಗ್ತಾ ಇದೆ ಅಂದ್ರು. ನಾನು ಅವರನ್ನ ಕಾರಿನಲ್ಲೆ ಕರೆದುಕೊಂಡು ಹೋಗಿರಲಿಲ್ಲ. ನಾನು ಹೇಗೆ ಹೋಗ್ತಿದ್ದೆವೋ ಹಾಗೆಯೇ ಕರ್ಕೊಂಡು ಹೋಗಿದ್ದೆ ದುಬಾಷಿನ. ಅಂದ್ರೆ ಇಲ್ಲಿಂದ ಸೋಲದೇವನಹಳ್ಳಿಗೆ ಬಸ್ಸಲ್ಲಿ ಕರ್ಕೊಂಡು ಹೋದೆ. ಅಲ್ಲಿ ಕೆಲಸ ಮಾಡಿಬಿಟ್ಟು ಹೆಸರಘಟ್ಟಕ್ಕೆ ಬರ್ತಾ ಇದ್ದೆ. ಆ ಗದ್ದೆಗಳ ಮಧ್ಯೆ ನಡೆದುಕೊಂಡು ಹೆಸರಘಟ್ಟ ಮುಗಿಸಿ ಚಿಕ್ಕ ಬಾಣಾವರಕ್ಕೆ ಬರ್ತಿದ್ದೆ, ಅದೇ ಗದ್ದೆಗಳ ಮಧ್ಯೆ ನಡೆದುಕೊಂಡು ಇನ್ನೂ ನಿಮಗೆ ಗೊತ್ತಿರಬಹುದು. ಶ್ರೀನಗರದಲ್ಲಿ ಬಿ.ಜಿ.ಕಮನಾಬಾಯಿ ಅಂತ ಇದ್ದಾರೆ. ಅವರು ಯಾವ ಭಾಷಣದಲ್ಲೂ ಇವತ್ತಿಗೂ ಹೇಳ್ತಾರೆ. 'ನಾಗರತ್ನ ೬೮ನೇ ಇಸವೀಲಿ ಚಿಕ್ಕೋಳಾಗಿದ್ದು ಮುಖ ಕೆಂಪಗೆ ಮಾಡ್ಕೊಂಡು ಮೂರಳ್ಳಿ ಸುತ್ತುತ್ತಾ ಇದ್ಲೂಂತ ಇವೊತ್ತಿಗೂ ಹೇಳ್ತಾರೆ. ಆ ದುಬಾಷಿನ ಹಾಗೆ ನಡೆಸಿದ್ದಕ್ಕೆ ಅವರಿಗೆ ತುಂಬ ಖುಷಿಯಾಯಿತು. ಅಗಲೇ ಸ್ವೀಡನ್‌ನಿಂದಾ ವಿಮೆನ್ಸ್ ಗಿಲ್ಡ್ ಅಂತ

ಬಂದಿದ್ದರು. ಅವರು ನಮಗೆ ವೆಹಿಕಲ್ ಕೂಡ ಕೊಟ್ಟಿದ್ದರು. ಆಮೇಲೆ ಆ ವೆಹಿಕಲ್ ದುರುಪಯೋಗವಾಗಿ ಅದನ್ನು ಮಾರೇಬಿಟ್ಟೆವು ಅಂದುಕೊಳ್ಳಿ. ಅದು ಬೇರೆ ವಿಷಯ, ಅಫಿಷಿಯಲ್ ನಲ್ಲಿ ಇರುತ್ತಲ್ಲ ರಾಜಕೀಯ. ಅಂತೂ ಹೀಗೆ ಕೆಲಸದ ಮೇಲೆ ನನಗೆ ಆಸಕ್ತಿ ಇದ್ದಿದ್ದರಿಂದ ಕೆಲಸ ಹೆಚ್ಚಿಗೆ ಮಾಡಿ ಇವತ್ತಿನ ದಿನ ನಾಗರತ್ನರಾವ್ ಅಂದರೆ ಮೊನ್ನೆ ಟಿ.ಸುನಂದಮ್ಮನ್ನ ಎಲ್ಲೋ ಕಂಡಾಗ 'ನೋಡು ನಾಗರತ್ನ ಮೊನ್ನೆ ಯಾರೋ ಸಹಕಾರ ಅಂದರು, ಸಹಕಾರ ಅಂದರೆ ನನಗೆ ಮೊಟ್ಟ ಮೊದಲು ಗೊತ್ತಾಗಿದ್ದು ನಾಗರತ್ನರಾವ್' ಅಂದರು. ಯಾರನ್ನ ಒಬ್ಬರನ್ನು ನಾನು ಇನ್ ವಾಲ್ವ್ ಮಾಡದೇ ಇಲ್ಲ ಸಾಹಿತಿಗಳನ್ನು ಇನ್‌ವಾಲ್ವ್ ಮಾಡಿದೀನಿ, ಪಾಲಿಟೀಷಿಯನ್‌ಗಳನ್ನು ಇನ್‌ವಾಲ್ವ್ ಮಾಡಿದೀನಿ, ಸಮಾಜ ಸೇವರಕರನ್ನು ಇನ್‌ವಾಲ್ವ್ ಮಾಡಿದೀನಿ ನಾನು ಕೆಲಸ ಮಾಡಿದಾಗ ನನಗೆ ಮೊದಲನೇ ಲೈನ್ ಸಿಕ್ಕಿತು. ಅಂದರೆ ಎಂ.ಆರ್.ಲಕ್ಷ್ಮಮ್ಮ, ಪಿ.ಆರ್.ಜಯಲಕ್ಷ್ಮಮ್ಮ, ಪ್ರಮೀಳ ದೇಶಪಾಂಡೆ, ಲೀಲಾದೇವಿ ಪ್ರಸಾದ, ಎ.ಪಂಕಜ ಇವರೆಲ್ಲರೂ ನನಗೆ ಸಹಕಾರ, ಉತ್ತೇಜನ ಕೊಟ್ಟರು. ಅವರಿಗೆಲ್ಲ ಒಳ್ಳೇ ಕೆಲಸ ಮಾಡಬೇಕು ಅನ್ನೊದೊಂದೇ ಗುರಿ ಇತ್ತು. ನನಗೆ ಏನು ಸಿಗತ್ತೆ ಈ ಸಂಸ್ಥೆಯಿಂದ ನನಗೆ ದುಡ್ಡು ದೊರೆಯುತ್ತೆ ಅನ್ನೋದು ಯಾರ ಮನಸ್ಸಿನಲ್ಲೂ ಇರಲಿಲ್ಲ. ಎಂ.ಆರ್.ಲಕ್ಷ್ಮಮ್ಮ ಅಂತೂ ಬೆಳಗ್ಗೆ ಐದೂವರೆಗೆ ನಮ್ಮ ಮನೆಗೆ ಬರೋರು. 'ನಾಗರತ್ನ ಏಳು, ಅಲ್ಲಿ ಜಿಲೇಬಿಗೆ ಕಲರ್' ಹಾಕ್ತಾರೆ ನೋಡಿ ನಿಲ್ಲಿಸೋಣ.' ಅಂತ ಹೀಗೆ ಬಂದು ನಮಗೆ ಕೆಲಸ ಮಾಡಿಸ್ತಾ ಇದ್ದರು. ಅಂಥವರ ಜೊತೆಗೆ ಕೆಲಸ ಮಾಡಿ ಮಾಡಿ ನಮಗೆ ಒಂಥರಾ ಅವರದೇ ನೇಚರ್ ಬಂದುಬಿಡ್ತು. ಉದಾಹರಣೆಗೆ ಯಶೋಧರಮ್ಮ ದಾಸಪ್ಪ ಇವರ ಜೊತೆಗೂ ಕೆಲಸ ಮಾಡಿದೆ. ಆಮೇಲೆ ಇವರಿಗೆಲ್ಲ ವಯಸಾಗ್ತಾ ಬಂದ ಹಾಗೆಲ್ಲ ನನಗೆ ಇನ್ನು ಒಂದು ಹತ್ತು ವರ್ಷ ಇದೇ ಅನ್ನುವಾಗ ಎರಡನೇ ಲೈನ್ ಮಾಡಬೇಕೂಂತ ಮನಸ್ಸಾಯಿತು. ಆದರೆ ಎರಡನೇ ಲೈನಿನಿಂದ ನನಗೆ ಅಷ್ಟು ಉತ್ತೇಜನ ಸಿಕ್ಕಲಿಲ್ಲ. ಅಂದರೆ ಅವರ ದಾರೀನೆ ಬೇರೆ ಇತ್ತು, ಅವರ ಆಸಕ್ತಿನೇ ಬೇರೆ ಇತ್ತು. ಅವರಿಗೆ ಸೇವೆಗಿಂತ ಬೇರೆ ಥರದ 'ಇದು' ಜಾಸ್ತಿ ಇತ್ತು. ಅಂದರೆ ಅಟ್ರ್ಯಾಕ್ಷನ್ಸ್ ಜಾಸ್ತಿ ಇತ್ತು. ಆದ್ದರಿಂದ ನಾನು ಅಂದ್ಕೊಂಡೆ, ನಾನೇನು ಕಟ್ಕೊಂಡು ಹೋಗಬೇಕಾಗಿಲ್ಲ, ನಾನಿರೋತನಕ ಈ ಒಂದು ಚಳುವಳಿ ಮಾಡಬೇಕೂ ಮಾಡ್ತೀನಿ. ಎಲ್ಲೀ ತನಕ ಈ ವಯಸ್ಸಾದವರು ನನ್ನ ಜೊತೆ ಬರಲಿಕ್ಕೆ ಸಾಧ್ಯವೋ ಅಲ್ಲಿ ತನಕ ಎಳೆದುಕೊಂಡು ಹೋಗ್ತೀನಿ. ಇದನ್ನು ಇವತ್ತಿಗೂ ನಾನು ರಿಟೈರ್ಡ್ ಆಗಿ ಎರಡು ವರ್ಷ ಆದ್ರೂ ಇನ್ನೂ ಬಿಟ್ಟಿಲ್ಲ. ಲೀಲಾವತಿ ಪ್ರಸಾದ ಅವರನ್ನು ಇನ್ನೂ ಬಿಟ್ಟಿಲ್ಲ. ಮಹಿಳಾ ಮಹಾಮಂಡಲದ ಅಧ್ಯಕ್ಷಣಿಯನ್ನಾಗಿ ಮಾಡಿಟ್ಟಿದೀನಿ. ಅವರು ಈ ಜನಗಳ ಜೊತೆ ಮಿಶ್ರವಾಗೋದು. ಈ ಗ್ರಾಸ್ ರೂಟ್ ಲೆವೆಲ್ ನ ಕೆಲಸ ಇದು ರಾಜಕೀಯದಲ್ಲಿ ಇದ್ದಾಗಲೂ ಅಷ್ಟೆ ಮಿನಿಸ್ಟರ್ ಆಗಿದ್ದಾಗಲೂ ಅಷ್ಟೆ, ಇಲ್ಲದಿದ್ದಾಗಲೂ ಅಷ್ಟೆ ಒಂದೇ ತರಹದ ವ್ಯಕ್ತಿ ಎಂದರೆ ಲೀಲಾವತಿ ಪ್ರಸಾದ ಅವರು. ನನಗೇನು ಅವರು ಏನೂ ಮಾಡಿಲ್ಲ ಒಂದು ಸೈಟ್ ಕೊಡಿಸಿಲ್ಲ. ಸಂಬಳ ಜಾಸ್ತಿಮಾಡಿಲ್ಲ. ನನ್ನ ಕೆಲಸ ನನಗೆ ಅವರ ಕೆಲಸ

ಅವರಿಗೆ. ಬಟ್ ಅವರನ್ನ ಕರ್ಕೊಂಡು ಹೋದರೆ ಯಾವ ತರಹದ ಕೆಲಸದಲ್ಲಿ ಅನುಕೂಲ ಆಗುತ್ತಿತ್ತೋ ಅದಕ್ಕೆ ಒಳ್ಳೆ ಉದಾಹರಣೆ. ಅಂದರೆ ಲೀಲಾದೇವಿ ಪ್ರಸಾದ್ ಹಾಗೆ ಇದೇ ಕಾರಣ ನಂಗೆ ಕೆಲಸದ ಮೇಲೆ ಆಸಕ್ತಿ ಇತ್ತು. ಇಂಥದ್ದೇ ಕೆಲಸ ಬೇಕಿತ್ತು ಅಂತ ಇತ್ತು. ಆ ಕೆಲಸ ನನಗೆ ಸಿಕ್ಕಿತು. ಅದರಿಂದ ಚೆನ್ನಾಗಿ ಕೆಲಸ ಮಾಡಲು ನನಗೆ ಸಾಧ್ಯವಾಯಿತು.

ಜ್ಯೋತಿ : ಅದೇ ನಿಮ್ಮ ಜನಪ್ರಿಯತೆಗೂ ಕಾರಣವಾಯಿತಲ್ಲವೇ.

ನಾ.ರಾವ್ : ಹೌದು ಹೌದು,

ಜ್ಯೋತಿ : ಮಹಿಳೆಯರು ಆರ್ಥಿಕವಾಗಿ ಸ್ವತಂತ್ರರಾದರೆ ಸಮಾಜ ಹಾಗೂ ಕುಟುಂಬದಲ್ಲಿ ಅವರ ಸ್ಥಾನಮಾನಗಳು ಬದಲಾಗಬಹುದೆ?

ನಾ.ರಾವ್ : ಖಂಡಿತ ನೂರಕ್ಕೆ ನೂರರಷ್ಟು ಸತ್ಯ ಈ ಮಾತು. ಒಂದು ಮನೇನಲ್ಲಿ ಪ್ರತಿ ಒಂದಕ್ಕೂ ಕೈ ಒಡ್ಡುತ್ತಾ ಇದ್ದರೆ ಅವಳ ಅಂತಸ್ತು ಅಷ್ಟರಲ್ಲೇ ಇರುತ್ತೆ. ಅದೇ ತಾನು ಕೆಲಸಕ್ಕೆ ಹೋಗಿ ಅಥವಾ ಮನೆಯಲ್ಲೆ ಕುಳಿತುಕೊಂಡು ತನಗೆ ತಿಳಿದಿರುವ ಒಂದು ಟ್ಯಾಲೆಂಟ್ ಅವಳು ಉಪಯೋಗಿಸಿಕೊಂಡು ಕೆಲಸ ಮಾಡಿಕೊಂಡು ಅದರಿಂದ ನಾಲ್ಕು ಕಾಸು ಮಾಡಿಕೊಂಡು ಅವಳ ಕೈಲಿದ್ರೆ ಖಂಡಿತ ಅವಳ ಗೌರವ ಹೆಚ್ಚಾಗತ್ತೆ. ಇದನ್ನು ನಾನು ನನ್ನ ಅನುಭವದಿಂದ ಹೇಳ್ತೀನಿ.

ಜ್ಯೋತಿ : ಗ್ರಾಮೀಣ ಹಾಗೂ ನಗರ ಜೀವನದಲ್ಲೆ ಮಹಿಳಾ ಸ್ವಯಂ ಉದ್ಯೋಗ ಸಂಸ್ಥೆ ಅಥವಾ ಮಹಿಳಾ ಸಹಕಾರ ಸಂಸ್ಥೆಗಳ ಸ್ಥಾಪನೆ ಹಾಗೂ ನಿರ್ವಹಣೆ ಬಗ್ಗೆ ಮಹಿಳೆಯರಿಗೆ ಹೇಗೆ ಅರಿವನ್ನು ಉಂಟುಮಾಡಬಹುದು ಅಥವಾ ಅವರಿಗೆ ಶಿಕ್ಷಣ ನೀಡಲು ಸಾಧ್ಯವೇ?

ನಾಗರತ್ನ : ಹೇಳಿದೆನಲ್ಲ ನಾನು ಕೆಲಸ ಮಾಡ್ತಾ ಇದ್ದದ್ದೇ ಒಂದು ಶಿಕ್ಷಣ ವಿಭಾಗದಲ್ಲಿ. ನಾನು ಮಹಿಳಾ ಶಿಕ್ಷಣಾಧಿಕಾರಿ. ಸಹಕಾರಿ ರಂಗದಲ್ಲಿ ಶಿಕ್ಷಣ ಕೊಡುವಾಗ ನಾನು ಒಂದು ಕ್ರಮವನ್ನು ಇಟ್ಕೊಂಡಿದ್ದೆ. ಏನಪ್ಪಾ ಅಂದರೆ ಸಿಂಗಲ್ ವಿಂಡೋ ಸಿಸ್ಟಮ್. ನಾನು ಸಹಕಾರಿ ತರಬೇತಿ ಒಂದು ಗ್ರಾಮಾಂತರ ಪ್ರದೇಶದಲ್ಲಿ ಹಾಕಿಕೊಂಡರೆ ಬರೀ ಸಹಕಾರಿಯನ್ನು ಹಾಕಕೊಳ್ಳುತ್ತಿರಲಿಲ್ಲ. ಸಹಕಾರಿ ಹಾಕ್ತಿದ್ದೆ. ಖಾದಿ ಗ್ರಾಮೋದ್ಯೋಗದ ವರನ್ನು ಕರೆದುಕೊಂಡು ಹೋಗ್ತಿದ್ದೆ. ವಿಮೆನ್ ಡೆವಲಪ್ ಮೆಂಟ್ ಕಾರ್ಪೊರೇಷನ್ ನವರನ್ನು ಕರ್ಕೊಂಡು ಹೋಗ್ತಿದ್ದೆ. ಮಹಿಳಾ ಮತ್ತು ಮಕ್ಕಳ ಇಲಾಖೆಯವರು, ಕೆನರಾ ಬ್ಯಾಂಕಿನವರನ್ನೂ ಕರೆದುಕೊಂಡು ಹೋಗ್ತಿದ್ದೆ. ಫ್ಯಾಮಿಲಿ ಪ್ಲಾನಿಂಗ್‌ನವರನ್ನು, ಡಾಕ್ಟರ್ ಗಳನ್ನು ಕರೆದುಕೊಂಡು ಹೋಗ್ತಿದ್ದೆ. ಎಲ್ಲಾ ತರದ್ದೂ ಎಲ್ಲಾ ರಂಗದವರಿಂದಲೂ ಅವರಿಗೆ ತರಬೇತಿ ಕೊಡಿಸುತ್ತಿದ್ದೆ. ಇವೆಲ್ಲಾ ರಂಗದವರನ್ನೂ ಹೇಳಿಸಿ ನಿಮಗೆ ಸ್ವಂತ ಕಾಲಮೇಲೆ ನಿಂತ್ಕೋಬೇಕೋ ಬೇಡವೊ ಎಂದು ಕೇಳಿ ಆವಾಗ ನನ್ನ ಸಹಕಾರಿ ರಂಗವನ್ನು ತರ್ತಾ ಇದ್ದೆ. ಸಹಕಾರ ಸಂಘವನ್ನು ಮಾಡ್ಕೋಳಿ ಇದರಿಂದ ಹಣದ ಉಪಯೋಗ ಕೂಡ ಸಿಗತ್ತೆ. ಮತ್ತು ಏನೊಂದು ನಿಮ್ಮ ಒಳಗಡೆ ಅಡಗಿದೆ ಆ ಕಲೇನ ಆಚೆ ತಂದು ನಿಮ್ಮನೇಲೆ

ಕುಳಿತು ನೀವು ಕೆಲಸ ಮಾಡಬಹುದು. ಅದು ಯಾವುದಾದರೂ ಆಗಿರಬಹುದು. ಶಿವಮೊಗ್ಗದ ಕಡೆ ಹೋದರೆ ನಿಮಗೆ ಗೊತ್ತಿರಬಹುದು. ಅಡಿಕೆ ಹಾಳೆಗಳಲ್ಲಿ ಹೂವು ದೊನ್ನೆ ಮಾಡೋದೂ, ಬೆಂಡಿನಿಂದ ಹೂವುಗಳನ್ನು ಮಾಡುವುದು, ಸ್ಯಾಂಡಲ್ ವುಡ್ ಇವುಗಳಲ್ಲಿ ಕೆಲಸಗಳನ್ನ, ಆ ಏರಿಯಾದಲ್ಲಿ ಮಾಡುವಂಥದನ್ನೇ ತೊಗೊಂಡು ಅವರಿಗೆ ಹೇಳಿಕೊಟ್ಟೆ ಅದರದ್ದೆ ಸಹಕಾರಿ ಸಂಘ ಮಾಡಿಕೊಟ್ಟು ಅವರಿಗೆ ಇನ್‌ಕಮ್ ಜನರೇಟಿಂಗ್ ಮಾಡಿಕೊಡ್ತಾ ಇದ್ದೆ. ಇದರಿಂದ ಅವರಿಗೆ ಸಹಕಾರಿ ಸಂಘದ ಬಗ್ಗೆ ಆಸಕ್ತಿ ಬರಬೇಕಾದರೆ ಎಲ್ಲಾ ರಂಗಾನೂ ತರ್ತಾ ಇದೆ. ಆ ರಂಗದ ಬಗ್ಗೆ ಸೊಸೈಟಿ ಮಾಡಿದರೆ ಹಣಕಾಸು ಸೌಲಭ್ಯ ಕೂಡ ನಾಳೆ ದೊರಕಲಿ ಅಂತ ವಿಮೆನ್ ಡೆವಲಪ್ ಮೆಂಟ್ ಮತ್ತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗಳನ್ನು ತರ್ತಾ ಇದ್ದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಇವತ್ತು ಬೇಕಾದಷ್ಟು ಹಣ ಇದೆ. ಈ ಮಹಿಳೆಯರಿಗೆ ತರಬೇತಿ ಕೊಡುವುದಕ್ಕೆ ಅಂತಲೇ ಇದೆ. ಟ್ರೈನಿಂಗ್ ಅಂಡ್ ಪ್ರೊಡಕ್ಷನ್ ಅಂತ ಕೊಡ್ತಾರೆ. ಅದರ ಹಣ ತೊಗೋಬಹುದು. ಈ ತರಹ ಸ್ವಶಕ್ತಿ, ಸೆಲ್ಫ್‌ಹೆಲ್ಪ್ ಗ್ರೂಪ್ ಈಗ ಶುರುವಾಗಿದೆ. ಅದರಿಂದ ತರಬೇತಿ ಅಂದರೆ ಎಲ್ಲವೂ ಸಿಂಗಲ್ ವಿಂಡೋ ಸಿಸ್ಟಮ್ ಮಾಡ್ತಾ ಇದ್ದೆ ನಾನು. ನಾನು ಹೇಳಿಬಿಡೋದು, ನಾನು ಹೇಳಿದ್ದಾದ ಮೇಲೆ ಇನ್ನೊಬ್ಬರು ಹೋಗೋದು ಮತ್ತೊಬ್ಬರು ಹೋಗೋದು ಹೀಗೆ ಮಾಡಿದರೆ ಗ್ರಾಮಾಂತರ ಪ್ರದೇಶದಲ್ಲಿ ಕನ್‌ಫ್ಯೂಸ್ ಆಗತ್ತೆ. ಹೆಣ್ಣು ಮಕ್ಕಳಿಗೆ, ನಾನು ಹೋದ ಮೇಲೆ ಫ್ಯಾಮಿಲಿ ಪ್ಲಾನಿಂಗ್ ನವರು ಹೋಗಬಹುದು. ಅದರ ಬದಲಾಗಿ ೭ ದಿನದ ಕಾರ್ಯಕ್ರಮ ಹಾಕಿಕೊಂಡರೆ ಹೆಚ್ಚಿಗೆ ಮೂರುದಿನ ನನ್ನ ಕಾರ್ಯಕ್ರಮ ಕೊ-ಅಪರೇಟಿವ್ ದು ಕೊಡ್ತಿದ್ದೆ. ಮಿಕ್ಕಿದ್ದಕ್ಕೆಲ್ಲ ಇವರನ್ನ ಇನ್ ವಾಲ್ವ್ ಮಾಡಿಕೊಳ್ತಾ ಇದ್ದೆ. ಆದ್ದರಿಂದ ಮಹಿಳೆಯರಿಗೆ ಎಲ್ಲ ತರಹದ ಶಿಕ್ಷಣವನ್ನೂ ಸಹಕಾರಿ ರಂಗದ ಮೂಲಕ ಕೊಟ್ಟು ಅವರನ್ನು ಎಳಕೊಂಡು ನನ್ನ ಕಡೆಗೆ ಸಹಕಾರಿ ಸಂಘದ ಕಡೆಗೆ ಕರೆದುಕೊಂಡು ಹೋಗ್ತಿದ್ದೆ.

**ಜ್ಯೋತಿ :** ಗ್ರಾಮಾಂತರ ಪ್ರದೇಶದ ಬಗ್ಗೆ ಹೇಳಿದಿರಿ - ನಗರ ಪ್ರದೇಶಗಳಲ್ಲಿ ಹೇಗೆ ಮಾಡ್ತಿದ್ರಿ?

**ನಾಗರತ್ನ :** ನಗರದಲ್ಲಿ ಏನಾಗ್ತಿತ್ತು ಅಂದರೆ ನಾವು ಹೆಚ್ಚು ಕಷ್ಟಪಡುವ ಗೋಜು ಇರ್ತಿರಲಿಲ್ಲ. ಅವರು ಬುದ್ಧಿವಂತರು. ಅವರಿಗೇನು ಬೇಕೋ ಆ ಬಗ್ಗೆ ಜಾಗೃತಿ ಮೂಡಿಸ್ತಾ ಇದ್ವಿ. ನೋಡೀಮ್ಮಾ ನಿಮಗೆ ಬೇಕಾಗಿದ್ದರೆ, ನೀವು ಮಾಡೋ ಹಾಗಿದ್ರೆ ನಾವು ನಿಮಗೆ ಸಹಾಯ ಮಾಡ್ತೀವಿ ಅಂತ. ಆ ತರಹ ಬೇಕಾದಷ್ಟು ಸಂಘಗಳನ್ನು ನಗರಗಳಲ್ಲಿ ಮಾಡಿದ್ದೀವಿ. ಹೆಚ್ಚಿಗೆ ನಾವು ಕೆಲಸ ಮಾಡ್ತಾ ಇದ್ದಿದ್ದು ಗ್ರಾಮಾಂತರದಲ್ಲಿ. ಅಲ್ಲಿನ ಮಹಿಳೆಯರಲ್ಲಿ ಹೆಚ್ಚಿನ ಜಾಗೃತಿ ಬೇಕಾಗ್ತಿತ್ತು. ಆರೋಗ್ಯ, ನ್ಯೂಟ್ರಿಷನ್ ಬಗ್ಗೆ ಬೇಕಾಗಿತ್ತು. ಪ್ರತಿಯೊಂದರ ಬಗ್ಗೆ ಬೇಕಾಗಿತ್ತು. ಅಲ್ಲಿ ಅವರದ್ದೇ ಆದ ಸಂಘ ಮಾಡ್ಲಿಕ್ಕೆ ಸಾಧ್ಯ ಇಲ್ಲದೇ ಇದ್ರೆ ಈ ರೈತರ ಸಂಘ ಇದ್ದರೆ ಅಲ್ಲೆ ಅವರನ್ನ ಸದಸ್ಯರನ್ನ ಮಾಡಿ

ಅಲ್ಲಿಂದ ಬೆನಿಫಿಟ್ ತೊಗೋಳ್ಳೋಕೆ ಸಹಾಯ ಮಾಡ್ತಿದ್ವಿ. ಯಾಕೇಂದ್ರೆ ಈ ಸಂಘಗಳಲ್ಲಿ ಎಸ್ಪೆಷಲಿ ಕೊ-ಅಪರೇಟಿವ್ ಸೊಸೈಟಿಗಳಲ್ಲಿ ಒಳ್ಳೆಯ ನಾಯಕತ್ವ ಬೇಕು. ಒಳ್ಳೆಯ ನಾಯಕ ಅಥವಾ ನಾಯಕಿ ಇದ್ದರೆ ಆ ಸಂಘ ಸಕ್ಸಸ್ ಆಗತ್ತೆ. ಇದು ಬಹಳ ಮುಖ್ಯ. ಅವರು ನಿಷ್ಠಾವಂತರಾಗಿರಬೇಕು. ಸಹಕಾರಿ ಸಂಘ ಇದು ಸಾರ್ವಜನಿಕರ ಸಂಘ ಇದರಲ್ಲಿ ಎಲ್ಲ ಸದಸ್ಯರಿಗೂ ಅನುಕೂಲ ಆಗಬೇಕು. "ಇವರೆಲ್ಲರ ಶ್ರಮವನ್ನು ನಾನು ತೆಗೆದುಕೊಳ್ಳಬೇಕು. ಇವರೆಲ್ಲರೂ ಸೇರಿ ನನ್ನನ್ನು ನಾಯಕನನ್ನಾಗಿ ಮಾಡಿದ್ದಾರೆ, ನನ್ನ ನಾಯಕತ್ವದಲ್ಲಿ ಇವರೆಲ್ಲರನ್ನೂ ನನ್ನ ಜೊತೆ ಮುಂದೆ ತೊಗೊಂಡು ಹೋಗಬೇಕೂಂತ" ಅವನಿಗೆ ಬಂತೋ ಅಂಥ ನಾಯಕ ಇವತ್ತಿನ ದಿನ ಸಹಕಾರಿ ಸಂಘದಲ್ಲಿ ಬರಬೇಕಾಗಿದೆ ಏನಾಗತ್ತೆ ನೋಡಿ, ಸಹಕಾರಿ ಸಂಘನೇ ಮೂಲ ಕಾರಣ ರಾಜಕೀಯಕ್ಕೆ ಬರೋದಿಕ್ಕೆ. ಯಾರೆ ಒಬ್ಬ ರಾಜಕೀಯ ವ್ಯಕ್ತಿಯನ್ನು ತೊಗೋಳಿ. ಅವನ ಹಿನ್ನೆಲೆ ಸಹಕಾರಿ ಚಳುವಳಿ. ಇದರಲ್ಲಿ ಏನಾಗತ್ತೆ ಅಂದರೆ ಜನರ ನೇರ ಸಂಪರ್ಕ ಇರತ್ತೆ. ಇವರ ಕೈನಿಂದ ಏನೂ ಕೊಡಲ್ಲ ಒಂದು ಪತ್ತಿನ ಸಹಕಾರಿ ಸಂಘ ತೊಗೋಳಿ. ಕ್ರೆಡಿಟ್ ಸೊಸೈಟಿ. ಅಲ್ಲಿಂದ ಸಾಲ ಕೊಡಿಸ್ತಾನೆ ಆದರೆ ಆ ಗ್ರಾಮಾಂತರದೋರಿಗೆ ಏನನ್ನಿಸತ್ತೆ ಅಂದರೆ ಅವರೇ ಕೊಟ್ಟರೂಂತ ಆಗತ್ತೆ. ನಾನೇ ದೇವರು. ನಾನು ಕೊಡ್ತಿಲ್ಲ ನನ್ನ ಕೈನಿಂದ ಸಾರ್ವಜನಿಕರ ದುಡ್ಡನ್ನು ಷೇರು ತರಹ ತಗೋತೀನಿ. ಅವರಿಗೆ ಕೊಡ್ತೀನಿ. ಪಾಪ ಜನರಿಗೆ ಅಷ್ಟು ಮಾಹಿತಿ ಇರಲ್ಲ. ನಾವು ಹೇಳಬೇಕು ಜನರಲ್ ಬಾಡೀಲಿ ಅವರಿಗೆ ಅದನ್ನೆಲ್ಲ ಹೇಳಿ ಅವರಿಗೆ ತರಬೇತಿ ಕೊಟ್ಟು ಪ್ರತಿಯೊಬ್ಬರಲ್ಲೂ ಜಾಗೃತಿ ಮೂಡಿಸಿ ಸಂಘ ಅವರದು ಅವರ ಕರ್ತವ್ಯ ಏನು ಅವರ ಹಕ್ಕು ಬಾಧ್ಯತೆಗಳೇನು ಅಂತ ತಿಳಿಸಿ ಸರಿಯಾದ ದಾರಿಯಲ್ಲಿ ಯಾರು ಅವರನ್ನು ಕರಕೊಂಡು ಹೋಗ್ತಾನೋ ಅವನೇ ಸರಿಯಾದ ನಾಯಕ. ಇಲ್ಲಿ ನಾನು ನಾಯಕ ಅಂತ ಅವರನ್ನ ಬಡಿದು ಬಡಿದು ಕೂಡಿಸಿದರೆ ಅವನು ಸಕ್ಸಸಫುಲ್ ಆಗಲ್ಲ. ಆ ಸಂಘನು ನಿಲ್ಲೋದಿಲ್ಲ.

**ಜ್ಯೋತಿ :** ಮಹಿಳೆಯರು ಆರ್ಥಿಕವಾಗಿ ಮುಂದುವರಿದಾಗ ಕುಟುಂಬ, ಸಮಾಜ, ಸರ್ಕಾರ ಎಲ್ಲಕ್ಕಿಂತ ಹೆಚ್ಚಾಗಿ ಸಹೋದ್ಯೋಗಿಗಳಿಂದ ಕಿರುಕುಳ, ಪೈಪೋಟಿ ಎದುರಾಗಬಹುದೇ?

**ನಾಗರತ್ನ :** ಬಹಳ ನನ್ನ ಅನುಭವದಲ್ಲಿ ತೆಗೆದುಕೊಂಡರೆ ಬೇಕಾದಷ್ಟಿದೆ. ಉದಾಹರಣೆಗೆ ಇಲ್ಲಿಂದ ಅಂತಾರಾಷ್ಟ್ರೀಯ ಮಟ್ಟದಲ್ಲೆ ಕೂಡ ನನ ಕಳಿಸಿಕೊಟ್ಟಿದ್ದಾರೆ. ಜಪಾನಿಗೆ ಹೋಗಿದ್ದೀನಿ. ನ್ಯಾಷನಲ್ ಕೊ ಅಪರೇಟಿವ್ ಯೂನಿಯನ್ ಆಫ್ ಇಂಡಿಯಾದಲ್ಲಿ ಶ್ರೀಮಾನ್ ಬಿ.ಎಸ್.ವಿಶ್ವನಾಥನ್ ಅವರು ಚೇರಮನ್ ರಾಗಿದ್ದಾಗ ಪ್ರತಿಯೊಬ್ಬರನ್ನೂ ರೆಕಗ್ನೈಸ್ ಮಾಡೋರು. ಯಾರು ಒಳ್ಳೆಯ ಕಾರ್ಯಕರ್ತರು ಅಂತ ಕೇಳಿ ಅವರನ್ನ ಹೊರದೇಶಗಳಿಗೂ ಕರ್ಕೊಂಡು ಹೋಗ್ತಿದ್ರು. ಎಲ್ಲೇ ಹೋಗಲಿ ಇಡೀ ಕರ್ನಾಟಕವಲ್ಲ, ಪೂನಾಗೆ ಹೋಗಲಿ ದೆಹಲಿಗೆ ಹೋಗಲಿ ಮತ್ತೊಂದು ಕಡೆಗೆ ಹೋಗಲಿ ಮಹಿಳಾ ಕಾರ್ಯಕ್ರಮ ಸಹಕಾರಿ ಅಂತ ಹೇಳಿದರೆ ನಾಗರತ್ನರಾವ್ ಅಂತ ಎಲ್ಲರಿಗೂ ಗೊತ್ತಿತ್ತು.

ಉದಾಹರಣೆಗೆ ಕೊ ಅಪರೇಟಿವ್ ಕಾಂಗ್ರೆಸ್‌ನಲ್ಲಿ ಬಂದ ದೊಡ್ಡ ದೊಡ್ಡ ವ್ಯಕ್ತಿಗಳಿಗಿಂತ ನನ್ನ ಪರಿಚಯವೇ ಹೆಚ್ಚಾಗಿದ್ದು ಎಲ್ಲರೂ ನನ್ನನ್ನು ಕರೆದು ಮಾತನಾಡ್ತಿರೋಷ್ಟು ಪರಿಚಯ ಇದರಿಂದ ನನಗೆ ಒಳ್ಳೇದೂ ಆಯಿತು ಕೆಟ್ಟದೂ ಆಯಿತು. ಒಳ್ಳೇದು ಹೇಗಾಯ್ತಪ್ಪ ಅಂದರೆ ತರುವಾಯ ಹೊರಗಡೆಗೆ ಹೋದಾಗ ನನ್ನ ಸ್ವಂತ ಟೂರ್‌ಗೆ ಹೋದಾಗ ನನಗೆ ಅನುಕೂಲ ಆಯ್ತು. ಆಫೀಸಿನಲ್ಲೆ ಹೊಟ್ಟೆ ಕಿಚ್ಚುಪಡುವಂಥ ಜನಗಳೂ ಇದ್ದರು. ನನ್ನ ಸಹೋದ್ಯೋಗಿಗಳಿಗೆಲ್ಲ ಬಹಳ ಹೊಟ್ಟೆಕಿಚ್ಚು ಇತ್ತು. ನನಗೆ ಆತ್ಮೀಯರಾಗಿರೋಂಥಾವರೂನು ಒಂಥರಾ ದೂರ ಆಗೋ ಹಾಗೆ ಆಯ್ತು. ಎಲ್ಲ ದೊಡ್ಡ ದೊಡ್ಡ ಮನುಷ್ಯರೆಲ್ಲ ಇದೆಲ್ಲ ಪ್ರೊಫೆಷನಲ್ ಜಲಸಿ ಅಮ್ಮ, ಇದೆಲ್ಲಾ ಕಡೆ ಇರತ್ತೆ, ನೀವು ಕೂಲ್ ಆಗಿ ತೊಗೋಳಮ್ಮ, ಅಂತ ಹೇಳಿದರು. ಕಡೇಕಡೇನಲ್ಲಿ ನನಗೆ ಬಹಳ ಬೇಜಾರೇ ಆಯ್ತು. ಆಫೀಸ್ ಆಟ್ಮಾಸಫಿಯರ್ ಇದು, ಪ್ರೊಫೆಷನಲ್ ಜಲಸಿ ಇನ್ ಫ್ಯಾಕ್ಟ್ ಮೇಲ್ಗಡೆ ಸೀಟ್ನಲ್ಲಿ ಕೂತಿರೋಂಥ ವ್ಯಕ್ತಿಗಳೂ ಕೂಡ ನನ್ನ ಕಾರ್ಯಕ್ರಮ ಮಾಡೋಕೆ ನನಗೆ ಉತ್ತೇಜನ ಕೊಡ್ತಾ ಇರಲಿಲ್ಲ. ಎಷ್ಟೋ ಸಲ ನನ್ನ ಕಾರ್ಯಕ್ರಮ ಪ್ರತಿ ವರ್ಷಾನು ಮಹಿಳೆಯರಿಗೆ ಇಂಥಿಂಥ ಕಾರ್ಯಕ್ರಮ ಹಾಕ್ಕೊಳ್ಳೇಬೇಕೂಂತ ಜಗಳ ಆಡಿ ಬಜೆಟ್ ಮಿಟಿಂಗ್ ನಲ್ಲೇ ಹಣ ತೊಗೊಂಡು ನಾನು ಮಾಡ್ತಾ ಇದ್ದೆ. 'ಸಾಕುರೀ ನೀವು ಏನು ಮಾಡೋದು ಮಹಿಳೆಯರನ್ನ ಉದ್ಧಾರ, ಸಾಕು ಬಿಡ್ರಿ' ಅಂತ ಅನ್ನೊಷ್ಟು, ಇದನ್ನ ಮಾಡಿದರೆ ಇವಳು ಪಾಪ್ಯುಲರ್ ಆಗ್ತಾಳಲ್ಲ ಅಂತ ನಾನೊಂದು ಕಾರ್ಯಕ್ರಮ ಮಾಡಿದರೆ ಯಾವುದೇ ಮಿನಿಸ್ಟರ್ ಹತ್ತಿರ ಹೋಗಲಿ, ಕಾರ್ಯಕ್ರಮಕ್ಕೆ ಬರೋಲ್ಲಾ ಅಂತ ಹೇಳ್ತಿರಲಿಲ್ಲ. ಅದು ಯಾವುದೇ ಪಾರ್ಟಿ ಆಗಿರಲಿ ಯಾರೇ ಸಹಕಾರ ಸಚಿವರಾಗಿರಲಿ ಪ್ರತಿಯೊಬ್ಬರೂ ಎಷ್ಟೋ ಸಲ ಅಸೆಂಬ್ಲಿ ಇದ್ದರೂನೂ ಬೇಗ ಇಟ್ಕೋಮ್ಮ ಕಾರ್ಯಕ್ರಮಾನ ಬಂದು ಮುಗಿಸಿಬಿಟ್ಟು ಹೋಗ್ತೀನಿ ಅನ್ನೋಷ್ಟು ಪರಿಚಯಾನ ನಾನು ಇಟ್ಕೊಂಡಿದ್ದೆ. ಅದು ನನ್ನ ಕೆಲಸದಿಂದ. ಹಾಗಾಗಿ, ಒಂಥರಾ ಹೊಟ್ಟೆಕಿಚ್ಚು ನನ್ನ ಸಹೋದ್ಯೋಗಿಗಳಿಗೆ ಬಂತು. ಅದರಿಂದಾಗಿ ಎಷ್ಟೋ ಸಲ ನಂಗೆ ಬಹಳ ಬೇಜಾರಾಗ್ತಾ ಇತ್ತು. ಯಾಕೆ ಮಾಡಬೇಕು ಬಿಡು ನನಗೇನು ರಿಟೈರ್ ಆದಮೇಲೆ ಕಿರೀಟ ಕೊಡ್ತಾರ, ಇವರು? ಬಿಸಾಕೋಣ ಎಲ್ಲರಂಗೇ ನಾನೂ ಇರೋಣ. ಎಲ್ಲರೂ ಪೆನ್‌ಷನ್ ತೋಗೋಳೋವಾಗ ನಾನ್ಯಾಕೆ ಕಷ್ಟಪಟ್ಟು ಕೆಲಸ ಮಾಡ್ಬೇಕು ಅನ್ನೋದೂನು ಎಷ್ಟೋ ಸಲ ಮನಸ್ಸಿನಲ್ಲಿ ಬರ್ತಾ ಇತ್ತು. ಇದು ಸಾಮಾನ್ಯವಾಗಿ ಎಲ್ಲ ರಂಗಗಳಲ್ಲೂ ಇದೆ. ಅದರಲ್ಲೂ ಒಬ್ಬ ಮಹಿಳೆ ಚೆನ್ನಾಗಿ ಕೆಲಸ ಮಾಡ್ತಾಳೆ. ಅವಳನ್ನ ಎಲ್ಲರೂ ರೆಕಗ್ನೈಸ್ ಮಾಡ್ತಾರೆ, ಅವಳು ಮೇಲೆ ಬರ್ತಾ ಇದ್ದಾಳೆ ಅಂದ್ರೆ ಗಂಡಸರಿಗೆ ಹೊಟ್ಟೆಕಿಚ್ಚು ಬಂದೇ ಬರುತ್ತೆ ಅಂತ ನನ್ನ ಮನಸ್ಸಿಗೆ ಬರತ್ತೆ. ಕೆಲವೊಮ್ಮೆ ಹೆಂಗಸರಿಗೂ ಬರುತ್ತೆ. ಇಬ್ಬರಿಗೂ ಬರತ್ತೆ. ಸರ್ಟನ್ಲಿ ಪ್ರೊಫೆಷನಲ್ ಜಲಸಿ ಅನ್ನೋದು ಎಲ್ಲರಿಗೂ ಬರತ್ತೆ. ಮುಂದೆ ಹೋಗುವವರ ಕಾಲೆಳೆಯುವುದು ಇದ್ದೇ ಇದೆ. ಅದನ್ನು ನಾನು ನನ್ನ ಸ್ನೇಹಿತರ ಹತ್ತಿರ ಚರ್ಚೆ ಮಾಡಿದಾಗಲೂ ಎಲ್ಲರೂ ಇದೇ ಅನುಭವಗಳನ್ನ ಹೇಳಿಕೊಂಡರು. ಸೊ ಆವಾಗ

ಇದು ನನಗೊಬ್ಬಳಿಗೇ ಅಲ್ಲ, ಎಲ್ಲರಿಗೂ ಇದೇ ಅಂತ ನಾನು ಸುಮ್ಮನಾಗ್ತಿದ್ದೆ.

**ಜ್ಯೋತಿ :** ಸಹಕಾರ ಕ್ಷೇತ್ರದಲ್ಲಿ ಮುಖ್ಯವಾಗಿ ಮಹಿಳೆಯರಿಗೆ ಎದುರಾಗುವಂಥ ಸಮಸ್ಯೆಗಳೇನು? ಅಂದರೆ ಮಾರುಕಟ್ಟೆ ಸಮಸ್ಯೆಯಾಗಿರಬಹುದು ಅಥವಾ ಇನ್ನೊಂದು ಸಹಕಾರ ಸಂಘದ ಜೊತೆಗಿನ ಸ್ಪರ್ಧೆ ಆಗಿರಬಹುದು ಅಥವಾ ನೀವು ಈಗತಾನೆ ಹೇಳಿದ ಹಾಗೆ ಪುರುಷರು ಹಾಗು ಮಹಿಳೆಯರ ನಡುವಣ ಪೈಪೋಟಿ ಆಗಿರಬಹುದು. ಇಂಥ ಸಮಸ್ಯೆಗಳಲ್ಲಿ ಯಾವುದು ಹೆಚ್ಚಾಗಿ ಎದುರಾಗುತ್ತದೆ?

**ನಾಗರತ್ನ :** ನೋಡಿ ನಾನು ಎರಡು ವರ್ಷಕ್ಕೊಂದು ಸಲ ಸಮ್ಮೇಳನ ಮಾಡ್ತಾ ಇದ್ದೆ. ಮಹಿಳೆಯರಿಗೆ ವೇದಿಕೆ ಕೊಟ್ಟು ಸಮಸ್ಯೆಗಳನ್ನ ಚರ್ಚೆ ಮಾಡೋಕೆ, ಈ ಸಮಸ್ಯೆಗಳಿಗೆ ಸರಿಯಾಗಿ ಉತ್ತರ ಕೊಡೋಕೆ ಸಂಬಂಧಪಟ್ಟ ಇಲಾಖೆಗಳನ್ನು ಕರೆಸ್ತಾ ಇದ್ದೆ. ಅವರ ಮುಖ್ಯವಾದ ಒಂದು ಸಮಸ್ಯೆ ಏನಪ್ಪಾ ಅಂದರೆ ಮಾರುಕಟ್ಟೆಯದು ಅಂತ ತುಂಬಾ ಜನ ಹೇಳೋದು. ಆ ಮಾರುಕಟ್ಟೆ ಸಮಸ್ಯೆಯನ್ನು ಹೇಗೆ ನಿವಾರಿಸಿಕೊಳ್ಳಬೇಕು ಅನ್ನೋದು ತುಂಬಾ ದಿನದಿಂದ ನನ್ನ ಮನಸ್ಸಿನಲ್ಲಿತ್ತು. ಆದರೆ ಜನತಾ ದಳದಲ್ಲಿದ್ದ ಸಹಕಾರ ಸಚಿವರು ನಮಗೆ ಒಂದು ಒಳ್ಳೆಯ ಮಾರುಕಟ್ಟೆ ಜಾಗವನ್ನು ಕೊಡಿಸಿದರು. ಈ ಇಂಡಿಪೆಂಡೆನ್ಸ್ ಡೇ ೫೦ ವರ್ಷದ್ದು ಬಂತಲ್ಲ ಆಗ. ಈ ವರ್ಷದ ಸಂದರ್ಭದಲ್ಲಿ ನಮ್ಮ ಮಹಿಳಾ ಸಹಕಾರಿಗಳಿಗೆ ಏನಾದರೂ ಕೊಡಿ ಅಂತ ಒಂದು ಮೀಟಿಂಗ್ ನಲ್ಲಿ ನಾವೆಲ್ಲ ಕೇಳಿಕೊಂಡೆವು. ನಮ್ಮ ಮಹಿಳಾ ಮಹಾಮಂಡಲದ ಅಧ್ಯಕ್ಷಿಣಿಯಾದ ಲೀಲಾದೇವಿಯವರೂ ಅಲ್ಲಿ ಮಿನಿಸ್ಟರ್ ಆಗಿದ್ದರು. ಆವಾಗ, ಅವರ ಮುಂದಾಳತ್ವ ತೊಗೊಂಡು ನಾವು ಏನಾದರೂ ಮಾಡಿ ನಮಗೊಂದು ಮಾರುಕಟ್ಟೆ ವ್ಯವಸ್ಥೆ ಮಾಡಿಕೊಡ್ಬೇಕು ಅಂತಕೇಳಿದ್ದೆವು. ಅವಾಗ ನಮ್ಮ ಜನತಾ ಬಜಾರ್ ಇದೆಯಲ್ಲ ಕೆ.ಜಿ.ರೋಡು ಅಲ್ಲೆ ಮೊದಲು ಅಪೆಕ್ಸ್ ಬ್ಯಾಂಕ್ ಇದ್ದದ್ದು ಖಾಲಿಯಾಗಿತ್ತು. ಅದನ್ನು ನಮಗೆ ಬಿಟ್ಟಿಯಾಗಿ ನಮ್ಮ ಮಹಿಳಾ ಉದ್ಯಮಿಗಳ ಸಹಕಾರಿ ಸಂಘಕ್ಕೆ ಹಾಗೂ ಮಹಿಳಾ ಮಹಾಮಂಡಲಕ್ಕೆಂದು ಜಾಗ ಕೊಟ್ಟರು. ಅದರಿಂದ ನಮಗೆ ಮಾರುಕಟ್ಟೆ ವ್ಯವಸ್ಥೆಗೆ ಅನುಕೂಲ ಆಯಿತು. ಅಲ್ಲೆ ನಾವು ಏನು ವ್ಯವಸ್ಥೆ ಮಾಡಿ ಕೊಟ್ಟಿದ್ದೀವಪ್ಪ ಅಂದರೆ ಮಹಿಳಾ ಉದ್ಯಮಿಗಳು, ಮಹಿಳಾ ಸಹಕಾರಿ ಸಂಘಗಳು, ಮಹಿಳಾ ಸಮಾಜಗಳು ಅಂದರೆ ಎನ್.ಜಿ.ಓಗಳು ಯಾರೇ ಯಾವುದೇ ಸಾಮಾನು ಉತ್ಪಾದನೆ ಮಾಡಿದರೂ ಅದನ್ನು ತಂದು ಅಲ್ಲೆ ಮಾರುಕಟ್ಟೆಗಿಡಬಹುದು. ನಮ್ಮ ಟರ್ಮ್ಸ್ ಮತ್ತು ಕಂಡೀಷನ್ಸ್ ಏನೆಂದರೆ, ಏನು ಇಲ್ಲ. ಅವರು ಏನು ಬೆಲೆ ಹಾಕಿರುತ್ತಾರೋ ಅದೇ ಬೆಲೆಗೆ ನಾವು ಮಾರಾಟ ಮಾಡ್ತೀವಿ. ೩ ಜನ ಸೇಲ್ಸ್ ಗರ್ಲ್‌ಗಳನ್ನು ಇಟ್ಟಿದೀವಿ. ಅವರು ನಮಗೆ ಶೇ.೧೦ ರಷ್ಟು ಸರ್ವೀಸ್ ಚಾರ್ಜು ಅಂತ ಕೊಡಬೇಕು. ಅದರಲ್ಲೆ ಶೇ.೫ ರಷ್ಟನ್ನು ನಾವು ಜನತಾ ಬಜಾರ್‌ಗೆ ಕೊಡ್ತೀವಿ. ಇನ್ನು ಶೇ.೫ರಷ್ಟನ್ನು ನಾವು ಇಟ್ಟುಕೊಳ್ತೀವಿ. ಅದರಿಂದ ಈ ಹೆಣ್ಣುಮಕ್ಕಳು ಯಾರು ಅಲ್ಲೆ ಕೆಲಸ ನೋಡಿಕೊಳ್ತಾರೋ ಅವರಿಗೆ ಸಂಬಳ ಮುಂತಾದ್ದನ್ನು ವ್ಯವಸ್ಥೆ

ಮಾಡ್ತೀವಿ. ಇದು ಅವರದೇ ಅಂಗಡಿ ಅನ್ನೋ ತರಹ ಅವರಿಗೆ ಒಂದೊಂದು ನಂಬರ್ ಕೊಟ್ಟಿದೀವಿ. ಒಂದೊಂದು ಕೌಂಟರ್ ಕೊಟ್ಟಿದೀವಿ. ಅವರು ಸಾಮಾನುಗಳನ್ನು ತಂದು ಇಡ್ತಾರೆ. ಪ್ರತಿ ತಿಂಗಳು ೧೫ನೇ ತಾರೀಖು, ೩೦ನೇ ತಾರೀಖು ಅವರ ಸಾಮಾನು ಮಾರಾಟವಾದುದನ್ನು ದುಡ್ಡನ್ನು ಅವರಿಗೆ ನಾವು ಕೊಟ್ಟುಬಿಡ್ತೀವಿ. ಒಬ್ಬೊಬ್ಬರೂ ಒಂದೊಂದು ಸಲಕ್ಕೆ ೩,೦೦೦ ೮,೦೦೦, ೨,೦೦೦ ಹೀಗೆ ಹಣ ತೆಗೆದುಕೊಂಡು ಹೋಗ್ತಾರೆ. ಅವರು ಬರ್ತಾರೆ, ಕೌಂಟರಿನಲ್ಲೆ ನೋಡ್ತಾರೆ, ಯಾವುದು ಜಾಸ್ತಿ ಸೇಲ್ ಆಗಿದೆಯೋ ಅದನ್ನು ತಿರುಗಾ ಇಡ್ತಾರೆ. ಯಾವುದು ಮಾರಾಟ ಆಗಿಲ್ಲವೋ ಅದನ್ನು ವಾಪಸ್ ತೊಗೊಂಡು ಹೋಗಿ ಬೇರೆ ಏನಾದರೂ ಮಾಡಿ ತಂದಿಡುತ್ತಾರೆ. ಈ ಥರ ಪ್ರತಿಯೊಂದು ಹ್ಯಾಂಡಿಕ್ರಾಫ್ಟ್ ಇದೆ, ಕಾಂಡಿಮೆಂಟ್ಸ್ ಇದೆ. ಕಾಸ್ಮೆಟಿಕ್ಸ್ ಇದೆ, ಕಾರ್ಪೆಟ್ಟು ಪ್ರತಿಯೊಂದು ವಸ್ತುಗಳನ್ನೂ ಅಲ್ಲೆ ಇಟ್ಟಿದ್ದಾರೆ.

**ಜ್ಯೋತಿ :** ಆದರೆ ಯಾರ ವಸ್ತು ಹೆಚ್ಚು ಮಾರಾಟ ಅಂತ ಹೇಗೆ ತಿಳಿಯುತ್ತೆ?

**ನಾಗರತ್ನ :** ಅದಕ್ಕೆ ನಾವೊಂದು ಸ್ಕೀಮ್ ಮಾಡಿದೀವಿ. ಎರಡೂ ಸಂಸ್ಥೆಗಳಿಗೆ ಅಲ್ಲೆ ಯಾಕೆ ಜಾಗ ಕೊಟ್ಟಿದ್ದಾರೆ ಅಂದರೆ ಮಹಿಳಾ ಉದ್ಯಮಿಗಳ ಸಹಕಾರ ಸಂಘಕ್ಕೆ ಮಹಿಳಾ ಉದ್ಯಮಿಗಳು ಮೊದಲು ಮೆಂಬರ್ ಆಗಬೇಕು. ಆ ಮೆಂಬರುಗಳಿಗೆ ಇಲ್ಲಿ ಹಣ ವ್ಯವಸ್ಥೆ ಮಾಡಿಕೊಡ್ತಿವಿ. ಇದರಿಂದ ಮಹಿಳಾ ಉದ್ಯಮಿಗಳ ಸಂಘ ಬೆಳೆಯೋದಕ್ಕೆ ಅನುಕೂಲ ಆಗತ್ತೆ. ಬೆಳೆದಾಗ ವರ್ಕಿಂಗ್ ಕ್ಯಾಪಿಟಲ್ ಜಾಸ್ತಿ ಆದರೆ ಅವರಿಗೇ ಅನುಕೂಲ ಆಗತ್ತೆ. ಸಾಲದ ರೂಪದಲ್ಲಿ ನಾವು ಅವರಿಗೆ ಜಾಸ್ತಿ ಹಣ ಕೊಡಬಹುದು. ಆದ್ದರಿಂದ ಈ ಇಂಟರ್ ನೆಟ್ ಇಟ್ಟು ನಾವು ಎರಡೂ ಸಂಘಗಳನ್ನು ಬೆಳೆಸ್ತಾ ಇದೀವಿ. ಇನ್ನೊಂದು ಮಹಿಳಾ ಮಂಡಲ ಅದರ ಮೂಲಕ ತರಬೇತಿ, ರಾ ಮೆಟೀರಿಯಲ್ ವ್ಯವಸ್ಥೆ ಮಾರುಕಟ್ಟೆ ವ್ಯವಸ್ಥೆ ಇತ್ಯಾದಿ ದೊರೆಯುತ್ತದೆ. ಉದ್ಯಮಿಗಳ ಸಂಘಕ್ಕೆ ಈ ಒಂದು ಇನ್ಸ್ಟಿಟ್ಯೂಷನ್ ಅಂದ್ರೆ ಸಹಕಾರಿ ಸಂಘ ಮತ್ತು ಇಂಡಿವಿಜ್ಯೂಯಲ್ ಇಬ್ಬರೂನು ಅಲ್ಲಿಗೆ ಸದಸ್ಯರಾಗಬೇಕು. ಅಂದರೆ ಅವರದ್ದನ್ನು ಇಲ್ಲಿ ಮಾರಾಟ ಮಾಡಿಕೊಡ್ತೀವಿ ಅನ್ನೋದು ಇಲ್ಲಿ ಒಂದು ಕಂಡೀಷನ್ ಹಾಕಿದೀವಿ. ಇವತ್ತು ಮಾರುಕಟ್ಟೆ ವ್ಯವಸ್ಥೆ ಸರಿಯಿಲ್ಲ ಇದಲ್ಲದೆ, ಈಗ ೧೦-೧೨ ಜನ ಉದ್ಯಮಿಗಳಿದ್ದಾರೆ. ಅವರಿಗೆ ಮಾರುಕಟ್ಟೆ ವ್ಯವಸ್ಥೆ ಮಾಡಬೇಕು. ಅವರು ಏನು ಮಾಡಬೇಕು ಎಂದರೆ ತಾವೇ ನಿಂತು ತಮ್ಮ ವಸ್ತುಗಳನ್ನು ಮಾರಾಟಮಾಡಬೇಕು. ಅವರಿಗೆ ತಾವು ಹೆಚ್ಚಿನ ಮಾರಾಟ ಮಾಡ್ತೀವಿ ಅಂತ ತಿಳ್ಕೊಂಡ ಕಡೆ, ಅಂಥದಕ್ಕೆ ನಾವು ನೆರವು ನೀಡ್ತೇವೆ. ಹೀಗೆ ಜಯನಗರದಲ್ಲಿ ೧೨ ಜನರನ್ನ ಸೇರಿಸಿ ಮಾರುಕಟ್ಟೆ ಮಾಡಿಕೊಟ್ಟಿದೀವಿ. ಒಂದು ದೊಡ್ಡ ಹಾಲ್ ತೊಗೊಂಡಿದೀವಿ. ಒಬ್ಬೊಬ್ಬರಿಗೂ ರೂ.೨,೦೦೦ ದಂತೆ ೧೦x೧೦ ಅಂತ ಜಾಗ ಕೊಟ್ಟಿದೀವಿ. ಅವರ ಸಾಮಾನು ಇಟ್ಟುಕೊಳ್ಳಲು ಅವರೇ ವ್ಯವಸ್ಥೆ ಮಾಡಿಕೊಳ್ತಾರೆ. ೧೨,೦೦೦ ರೂಪಾಯಿ ಒಟ್ಟು ಬಾಡಿಗೆ. ಅದರಲ್ಲಿ ಪ್ರತಿಯೊಬ್ಬರೂ ತಲಾ ೨,೦೦೦ ಬಾಡಿಗೆ ಕೊಡ್ತಾರೆ. ಆರು

ತಿಂಗಳು ನಾವು ಅವರಿಗೆ ಮಾರ್ಗದರ್ಶನ ಕೊಟ್ಟು ನಡೆಸಿದ್ವಿ. ಈಗ ಅವರು ಇಂಡಿಪೆಂಡೆಂಟ್ ಆಗಿ ಮಾಡಿ ದಿನಕ್ಕೆ ೨-೩ ಸಾವಿರ ಸಂಪಾದಿಸ್ಕೊಂಡು ಹೋಗ್ತಾರೆ. ಇಂಡಿವಿಜ್ಯೂಯಲ್ಸ್‌ಗೆ ಬರ್ಡನ್ ಆಗಲಿಲ್ಲ. ಒಳ್ಳೆ ಜಾಗದಲ್ಲಿ ಅವರಿಗೆ ಅವಕಾಶ ಸಿಕ್ಕಿತು. ದೊಡ್ಡ ಬಾಡಿಗೆಯನ್ನು ಹಂಚಿಕೊಂಡರು. ಇದು ಸಹಕಾರ. ಹೀಗೆ ಉದ್ಯಮಿಗಳನ್ನು ಸೇರಿಸಿ ಆ ತರಹ ಎರಡು ಯೋಜನೆ ಮಾಡಿದ್ವಿ. ಒಂದು ಜಯನಗರದ ೫ನೇ ಬ್ಲಾಕ್ ನಲ್ಲಿ ರಾಘವೇಂದ್ರ ಸ್ವಾಮಿ ಗುಡಿ ಎದುರಿನಲ್ಲಿ, ಇನ್ನೊಂದು ನಂದಿದುರ್ಗ ರೋಡಲ್ಲಿ, ಒಬ್ಬಳಿಗೆ ಹ್ಯಾಂಡಿಕ್ರಾಫ್ಟ್ ಅಂಡ್ ಹ್ಯಾಂಡ್‌ಲೂಮ್ಸ್‌ನಲ್ಲಿ ಆಸಕ್ತಿ ಇತ್ತು. ಅವಳಿಗೆ ಬ್ಲಾಕ್ ಪ್ರಿಂಟಿಂಗ್ ಇತ್ಯಾದಿಗಳು ಗೊತ್ತಿತ್ತು. ಅವಳಿಗೂ ಸಪೋರ್ಟ್ ಕೊಟ್ಟು ಎಲ್ಲಿ ಫೈನಾನ್ ಷಿಯಲ್ ಅಗತ್ಯ ಇದೆಯೋ ಅಲ್ಲಿ ಲಿಂಕ್ ಕೊಟ್ಟು ಅವಳನ್ನೂ ಇಂಡಿಪೆಂಡೆಂಟ್ ಮಾಡಿದೀವಿ. ಈಗ ನಾವು ಹೋಗಲ್ಲ. ಅವಳೇ ನಡೆಸಿಕೊಳ್ತಾ ಇದ್ದಾಳೆ. ಈ ಥರ ಕೂಡ ನಾವು ಎಲ್ಲಿ ರೆಸ್‌ಪಾಂನ್ಸ್ ಬರತ್ತೋ ಅಲ್ಲಿ ಮಾಡಲಿಕ್ಕೆ ಅನುಕೂಲ ಮಾಡಿಕೊಡ್ತೀವಿ.

**ಜ್ಯೋತಿ :** ನಂತರ ಅವರು ಉದ್ಯಮಿಗಳ ಸಹಕಾರ ಸಂಘ ಲೋನ್ ರಿಪೇಮೆಂಟ್ ಹಾಗೆ ಅಥವಾ ಬೇರೆ ಯಾವುದಾದರೂ ರೀತಿ ಹಣ ವಾಪಸ್ ಮಾಡಬೇಕೆ?

**ನಾಗರತ್ನ :** ಲೋನ್ ರಿ ಪೇ ಮೆಂಟ್ ಮಾಡಲೇ ಬೇಕು. ಸಾಲಾಂತ ಕೊಡೋದು ನೋಡಿ, ಇಂಟ್ರಸ್ಟ್ ಅಂದರೆ ನಾಮಿನಲ್ ಇಂಟ್ರಸ್ಟ್ ಹಾಕ್ತೀವಿ. ಸಾಲದ ಮೂಲಕ ಕೊಡ್ತೀವಿ ವಾಪಸ್ ಕೊಡ್ತಾರೆ.

**ಜ್ಯೋತಿ :** ಎಷ್ಟು ವರ್ಷಕ್ಕೆ ಸಾಲ ಕೊಡ್ತೀರಿ?

**ನಾಗರತ್ನ :** ಅದು ಸಾಲದ ಮೇಲೆ ಹೋಗತ್ತೆ. ೧೫ ತಿಂಗಳು, ೩೦ ತಿಂಗಳು, ಜಾಸ್ತಿ ಸಾಲ ಎಂದರೆ ೩೦ ತಿಂಗಳು ಕಡಿಮೆ ಸಾಲ, ಅಂದರೆ ೧೫ ತಿಂಗಳಿಗೆ ಕೊಡ್ತೀವಿ. ಇದು ಚೆನ್ನಾಗಿ ತುಂಬಾ ಚೆನ್ನಾಗಿ ನಡಕೊಂಡು ಬರ್ತಾ ಇದೆ. ಒಳ್ಳೆ ರೀ ಪೇಮೆಂಟ್ ಇದೆ.

**ಜ್ಯೋತಿ :** ಅಂದರೆ ಮಾರುಕಟ್ಟೆ ಚೆನ್ನಾಗಿ ಸಿಗ್ತಾ ಇದೆ ಅಂತಾಯಿತಲ್ವ?

**ನಾಗರತ್ನ :** ಹೌದು ಒಳ್ಳೆ ಮಾರುಕಟ್ಟೆ ಸಿಗ್ತಾಯಿದೆ. ನಮ್ಮನ್ನು ಯಾರೇ ಎಲ್ಲೇ ಕಾರ್ಯಕ್ರಮಕ್ಕೆ ಕರೆದರೂನೂ ನಾವು ಈ ಮಾರುಕಟ್ಟೆ ವಿಷಯ ಹೇಳ್ತಾ ಇದೀವಿ. ಇದೊಂದೇ ಅಲ್ಲ ಹೊರಗಿನಿಂದಲೂ ತುಂಬಾ ಮಾರ್ತಾ ಇದ್ದಾರೆ. ಹುಬ್ಬಳ್ಳಿ, ಗುಲ್ಬರ್ಗ, ಬೀದರ್ ನಿಂದ ಕೂಡ ಬರ್ತಾ ಇದೆ. ರೊಟ್ಟಿ ಕೂಡ ಮಾರ್ತೀವಿ. ತುಮಕೂರಿನಿಂದ ಇಬ್ಬರು ಹೊಟೇಲಿನವರು ಪ್ರತಿ ಶನಿವಾರ ಬಂದು ಐನೂರು ರೊಟ್ಟಿ ತೊಗೊಂಡು ಹೋಗ್ತಾರೆ. ಅದರಿಂದ ಅಲ್ಲೂ ರೊಟ್ಟಿ ವ್ಯಾಪಾರ ಆಗತ್ತೆ. ಹೊರಗಡೆಗೂ ಸಪ್ಲೈ ಆಗುತ್ತೆ.

**ಜ್ಯೋತಿ :** ಅಂದ್ರೆ ಗ್ರಾಮೀಣ ಮಹಿಳೆಯರಿಗೂ ಕೂಡ ಅನುಕೂಲ ಆಗಿದೆ ಮಾರುಕಟ್ಟೆ ಸಿಕ್ಕಿದೆ ಅಲ್ವ.

**ನಾಗರತ್ನ :** ಹೌದು ಅಥಣಿಯಿಂದ ಬರತ್ತೆ ಬಾಳಕ, ಬ್ಯಾಡಗಿ ಮೆಣಸಿನಕಾಯಿಂದ ಬಾಳಕ

ಮಾಡ್ತಾರೆ. ತುಂಬಾ ಚೆನ್ನಾಗಿದೆ. ಇನಫ್ಯಾಕ್ಟ್ ಇಂಟರ್ ನ್ಯಾಷನಲ್ ಮಾರ್ಕೆಟ್ ಮಾಡ್ಲಿಕ್ಕೆ ನಾವು ನೋಡ್ತಾಯಿದ್ದೀವಿ ಬಾಳಕಾನ. ಹೀಗೆ ಎಲ್ಲೆಲ್ಲೂ ಇಂಡಿಯನ್ ಸ್ಟೋರ್ಸ್ ಇರುತ್ತಲ್ಲ ಅಲ್ಲೆಲ್ಲ ಇದನ್ನು ಕಳಿಸಬೇಕೂಂತ ವ್ಯವಸ್ಥೆ ಕೂಡ ಮಾಡ್ತಾ ಇದೀವಿ.

**ಜ್ಯೋತಿ :** ಅಂತೂ ಮಾರುಕಟ್ಟೆ ಚೆನ್ನಾಗಿ ಆಗಿದೆ. ಈಗ

**ನಾಗರತ್ನ :** ಹೌದು ಚೆನ್ನಾಗಿಯೂ ಆಗಿದೆ. ಪ್ರಚಾರಾನೂ ಆಗ್ತಾಯಿದೆ. ಜನಾನೂ ಬರ್ತಾ ಇದ್ದಾರೆ. ಇನ್ನೂ ಪ್ರಚಾರ ಮಾಡಲಿಕ್ಕೆ ನಾವು ನೋಡ್ತಾ ಇದ್ದಿವಿ. ಮಾರುಕಟ್ಟೆ ಸಮಸ್ಯೆ ಏನೂ ಇಲ್ಲ ಇವತ್ತು.

**ಜ್ಯೋತಿ :** ಇದು ನಿಜಕ್ಕೂ ಶುಭ ಸುದ್ದೀಂತ ಹೇಳಬಹುದು. ಈಗ ಕರ್ನಾಟಕದಲ್ಲಿರುವ ಪ್ರಮುಖ ಮಹಿಳಾ ಸಹಕಾರ ಸಂಘಗಳು ಎಷ್ಟು? ಮಹಿಳಾ ಸಹಕಾರ ಸಂಘಗಳಿಗೆ ನೀವು ಯಾವ ರೀತಿ ಮಹಿಳೆಯರನ್ನು ಆಕರ್ಷಿಸುತ್ತೀರಿ ಹಾಗು ಯಾವ ವ್ಯತ್ಯಾಸವನ್ನು ಮಾಡಿಕೊಳ್ತೀರಿ? ಯಾಕೇಂದ್ರೆ ಈಗತಾನೇ ನೀವು ಫೆಡರೇಷನ್ ಹಾಗೂ ಮಹಿಳಾ ಉದ್ಯಮಿಗಳ ಸಂಘ ಎರಡನ್ನೂ ಒಟ್ಟಿಗೆ ಮಾಡ್ತಾ ಇದೀವಿ ಅಂತ ಹೇಳಿದ್ದೀರಿ. ಹಾಗಾದರೆ ಈ ರೀತಿ ಒಟ್ಟಿಗೆ ಮಾಡೋದು ಸಾಧ್ಯವೇ?

**ನಾಗರತ್ನ :** ನಾವು ಮೊದಲು ವಿವಿಧೋದ್ದೇಶ ಸಹಕಾರ ಸಂಘ (Multypurpose co-operative Socetiy) ಮಾಡಿದ್ವಿ. ಪ್ರತಿಯೊಂದು ಜಿಲ್ಲೆಯಲ್ಲೂ ಒಂದೊಂದು ವಿವಿದೋದ್ದೇಶ ಸಹಕಾರ ಸಂಘ ಅಂತ. ಈ ಮಹಿಳಾ ಫೆಡರೇಷನ್ನು ಈ ಜಿಲ್ಲಾ ಸಂಘಗಳ ನಂತರ ಮಾಡಿದ್ವಿ. ೩ ಬಗೆಯವುಗಳು ಅಂದರೆ ತಾಲೂಕು ಮಟ್ಟದವರು ಜಿಲ್ಲಾ ಮಟ್ಟದ ಸದಸ್ಯರಾಗಬೇಕು. ಜಿಲ್ಲಾ ಮಟ್ಟದವರು ರಾಜ್ಯಮಟ್ಟದ ಸದಸ್ಯರಾಗಬೇಕು. ತಾಲೂಕು ಮಟ್ಟದಲ್ಲಿ ಏನೇನು ಬೇಕೋ ಅದನ್ನೆಲ್ಲಾ ಜಿಲ್ಲಾ ಮಟ್ಟದವರು ಪೂರೈಸಬೇಕು. ಜಿಲ್ಲಾ ಮಟ್ಟದವರಿಗೆ ಏನು ಬೇಕೋ ಅದನ್ನು ರಾಜ್ಯ ಮಟ್ಟದವರು ಕೊಡಬೇಕು ಹೀಗೆ ನಾವು ಮಾಡಿದ್ವಿ. ಯಾರು ತಾಲೂಕು ಮಟ್ಟಕ್ಕಿಂತ ಹೆಚ್ಚು ವ್ಯಾಪ್ತಿಯಿಟ್ಟುಕೊಂಡು ಕೆಲಸ ಮಾಡ್ತಾರೋ ಆ ಒಂದು ಹೆಚ್ಚಿನ ಕಾರ್ಯ ವ್ಯಾಪ್ತಿಯನ್ನು ಹಾಕಿ ರಾಜ್ಯ ಮಟ್ಟದ್ದನ್ನು ನಾವು ಮಾಡಿದ್ವಿ. ಈ ಜಿಲ್ಲಾ ಮಟ್ಟದ್ದನ್ನು ಮಾಡಲು ಇದ್ದ ಉದ್ದೇಶವೆಂದರೆ ಹೆಚ್ಚೆಚ್ಚು ಜನರಿಗೆ ಉದ್ಯೋಗ ಕೊಡಬೇಕು. ಯಾರು ಹೆಚ್ಚು ಉತ್ಪಾದನೆ ಮಾಡ್ತಾರೋ ಆ ವಸ್ತುಗಳಿಗೆ ಆ ಜಿಲ್ಲೆಗಳಲ್ಲಿರುವ ವಿವಿಧೋದ್ದೇಶ ಸಂಘಗಳ ಮೂಲಕ ಮಾರುಕಟ್ಟೆ ವ್ಯವಸ್ಥೆ ಮಾಡಿ ಕೊಡಬೇಕು, ಅನ್ನುವ ಉದ್ದೇಶದಿಂದ ಮಾಡಿದ್ವಿ. ಅದು ಒಂದು ಸಲ ಧರ್ಮಸಿಂಗ್ ಅವರು ಇದ್ದ ಸಂದರ್ಭದಲ್ಲಿ ಫಂಡ್ ಸಪ್ಲೈದೊಂದು ಸ್ಕೀಮ್‌ನ್ನು ನಾವು ತೆಗೆದುಕೊಂಡ್ವಿ. ಈ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯಲ್ಲಿ ಐಸಿಡಿಎಸ್ ಅಂತ ಬಂದಿದೆ. ಫುಡ್ ಸಪ್ಲೈ ಮಹಿಳೆಯರ ಡಿಪಾರ್ಟ್‌ಮೆಂಟ್ ಅದ್ದರಿಂದ ಮಹಿಳಾ ಸಹಕಾರ ಸಂಘಕ್ಕೆ ನೀವದನ್ನು ಕೊಡಿ. ನೀವದನ್ನು ಕೊಟ್ಟರೆ Viable ಆಗತ್ತೆ. ಮಹಿಳಾ ಸಂಘಗಳು

ಯಾವ ತರ Viable ಅಗತ್ತೆ ಅಂತ ನೀವು ಕೇಳಬಹುದು. ಸಾಮಾನು ತೊಗೋತೀವಿ ಅಕ್ಕಿ ಇರಬಹುದು ಬೇಳೆ ಇರಬಹುದು. ಇನ್ನೊಂದಿರಬಹುದು. ಅದನ್ನೆಲ್ಲ ಕ್ಲೀನ್ ಮಾಡಿಸ್ಬೇಕು. ಯಾಕೇಂದ್ರೆ ಮಕ್ಕಳಿಗೆ ಕೊಡೋದು. ಐಸಿಡಿಎಸ್‌ನಲ್ಲಿ ಊಟ ಯಾರಿಗೆ ಕೊಡ್ತೀವಿ, ಮಕ್ಕಳಿಗೆ ಒಳ್ಳೇಪದಾರ್ಥ ಕೊಡಬೇಕು. ಮಹಿಳಾ ಸೊಸೈಟಿಯಿಂದ, ಆದರೆ ಕ್ಲೀಣ್ ಮಾಡಿಸೋಕೆ ಐದು ಜನಕ್ಕೆ ಎಂಪ್ಲಾಯಮೆಂಟ್ ಆಗತ್ತೆ. ಅದನ್ನು ಪ್ಯಾಕ್ ಮಾಡಬೇಕು. ಇನ್ನೂ ಐದು ಜನಕ್ಕೆ ಎಂಪ್ಲಾಯಮೆಂಟ್ ಆಗತ್ತೆ. ಒಟ್ಟು ಹತ್ತು ಜನಕ್ಕೆ ಎಂಪ್ಲಾಯಮೆಂಟ್ ಆಯ್ತು. ಇನ್‌ಕಂ ಜನರೇಟ್ ಆಯ್ತು. Viableಗೆ ಇದನ್ನು ಮಾರಾಟ ಮಾಡಿದ ದುಡ್ಡು ಬಂತು. ಈ ಥರ ಇಂಟರಲಿಂಕ್ ಮಾಡಿಕೊಂಡು ಅದನ್ನ ತೊಗೊಂಡ್ವಿ. ಆದರೆ ಸೆಲ್ಫ್ ಹೆಲ್ಪ ಸೊಸೈಟಿಗಳು ಏನು ಮಾಡಿದವು ಅಂದರೆ ನಾವು ಎಲ್ಲಿ Middle man ಬೇಡ ಅಂದಿದ್ವೆವೋ ಅಲ್ಲಿ ಆ ಮಧ್ಯವರ್ತಿಗಳನ್ನು ಇಟ್ಕೊಂಬಿಟ್ರು. ಅಂದರೆ ಯಾವನೋ ಒಬ್ಬ ಹೋಲ್‌ಸೇಲ್‌ರ ಹತ್ರ ತೊಗೊಳ್ಳೋದು ಬಿಲ್ ಮಾತ್ರ ಸಹಕಾರ ಸಂಘದ ಮೂಲಕ ಕೊಡೋದು. ಹೀಗೆ ಮಾಡಿಬಿಟ್ರು. ಯಾಕೇಂದರೆ ಅವರಿಗೆ ಅವನು ಕಮಿಷನ್ ಕೊಡೋನು. ಆ ಕಮಿಷನ್ ನಿಂದ ಬೇರೆ ಬೇರೆ ರಸ್ತೆಗಳು ಅಗ್ತಾ ಇತ್ತು. ಆದ್ದರಿಂದ ಅದನ್ನು ಬಿಟ್ಟು Diversity ಮಾಡಿಕೊಂಡು ಬೇರೆ ಹಾಕ್ಕೊಳ್ಳಿ ಎಂದು ಹೇಳಿ ನಾವೇನು ಮಾಡಿದ್ವಿ ಕರ್ನಾಟಕದ ಕಸೂತಿ ತರಬೇತಿ ಕೊಟ್ವಿವಿ. ಬೆಂಗಳೂರಿನಲ್ಲಿ ಹುಬ್ಬಳ್ಳಿ, ಬಿಜಾಪುರದಲ್ಲಿ ಈ ರೀತಿ ಕೊಟ್ರು ಆ ಮೇಲೆ ಅದನ್ನೇ ಪ್ರಾಜೆಕ್ಟ್ ಆಗಿ ಇಟ್ಟುಕೊಂಡು ಈಗ ಬಿಜಾಪುರದಲ್ಲಿ ಲಂಬಾಣಿ ಹೆಂಗಸರ ಹತ್ರ ಕರ್ನಾಟಕದ ಕಸೂತಿ ಮಾಡಿಸ್ತಾ ಇದ್ದೀವಿ. ನಾವೇನು ಮಾಡ್ತೀವಿ ಎಲ್ಲಾ ಕಡೇ ಆರ್ಡ್‌ರ್ ತೊಗೊಂಡು ಹುಬ್ಬಳ್ಳಿಯಲ್ಲೊಂದು ಟ್ರೈನಿಂಗ್ ಪ್ರೋಗ್ರಾಮ್ ಮಾಡಿ ಇಪ್ಪತಿಪ್ಪತ್ತು ಜನರನ್ನ ಟ್ರೈನ್ ಮಾಡ್ತೀವಿ. ಮೆಟಿರಿಯಲ್ ತೊಗೊಂಡು ಅವರಿಗೆ ಕೊಡೋದು. ಅವರ ಕೈನಿಂದ ಕಸೂತಿ ಮಾಡಿಸಿ ತಂದುಕೊಡ್ತಾರೆ ಅವರಿಗೆ ಲೇಬರ್ ಚಾರ್ಜ್‌ಕೊಟ್ಟು ಬಿಡ್ತೀವಿ. ಇಲ್ಲಿ ಮಾರಾಟ ಮಾಡಿ ಕಮಿಷನ್ ಮಂಡಳಕ್ಕೆ ಹಾಕ್ಕೋತಾ ಇದ್ವಿ. ಈ ಥರ ಬೇರೆ ಬೇರೆ ಟ್ಯಾಲೆಂಟ್ ಗಳನ್ನು ನಾವು ಉಪಯೋಗಿಸಿಕೊಂಡ್ವಿ. ಫುಡ್ ಸಪ್ಲೈ ಸ್ಕೀಮ್‌ನ್ನು ಯಾರು ಮಾಡಿಕೊಳ್ತಾರೋ ಮಾಡಿಕೊಳ್ಳಲಿ ಅಂತ ನಾವು ಕೈ ಹಾಕೋದನ್ನ ಬಿಟ್ಟು ಬಿಟ್ವೆವು. ನಮ್ಮ ಉದ್ದೇಶ ಇದ್ದಿದ್ದೇ ಬೇರೆ ಅದು ಆಗಿದ್ದೇ ಬೇರೆ ಆಯ್ತು. ಆದ್ದರಿಂದ ಅದನ್ನ ಕಡಿಮೆ ಮಾಡ್ಕೊಂಡು ಬೇರೆ ಸ್ಕೀಮ್ ಮಾಡ್ಕೊಂಡ್ವಿ.

**ಜ್ಯೋತಿ :** ಅಂದರೆ ಒಟ್ಟಿನಲ್ಲಿ ಮಹಿಳಾ ಸಹಕಾರಿ ಸಂಘಗಳು, ಹಾಗೂ ಬ್ಯಾಂಕುಗಳು ಒಟ್ಟಿಗೆ ಕೆಲಸ ಮಾಡ್ತಾ ಇವೆ ಅಲ್ಲವೆ?

**ನಾಗರತ್ನ :** ಹೌದು ಮಹಿಳಾ ಬ್ಯಾಂಕುಗಳು ಏನು ಮಾಡ್ತಿವೆ ಅಂದ್ರೆ ಮಹಿಳಾ ಸಂಘಗಳಲ್ಲಿ ಯಾರಿಗಾದರೂ ಸಾಲ ಬೇಕಾದರೆ ಅವರನ್ನು ಬ್ಯಾಂಕಿನ ಮೆಂಬರ್ ಮಾಡಿ ಅಲ್ಲಿಂದ

ಅವರಿಗೆ ಸಾಲ ಕೊಡಿಸ್ತಾ ಇದೀವಿ. ಎಷ್ಟೋ ಕಡೆ ಈ ಜಾಗೃತ(awaken) ಮೆಂಬರ್ಸ್‌ಗೆ ನಮ್ಮ ಮಹಿಳಾ ಉದ್ಯಮಿಗಳಿಗೆ ದೊಡ್ಡ ದೊಡ್ಡ ಸಾಲ ಬೇಕು ದೊಡ್ಡ ಪ್ರಾಜೆಕ್ಟ್‌ಗಳಿಗೆ, ಉದಾಹರಣೆಗೆ ಯಾರೋ ಒಬ್ಬ ಮಹಿಳೆ ಒಂದು ಪ್ರಪೋಸಲ್ ತಂದಿದ್ದಳು. ಏನಂದ್ರೆ ಜ್ಯಾಮ್ ಫಾರ್ ಡಯಾಬಿಟಿಕ್ಸ್(Jam for Diabiltcs) ಅಂದರೆ ಡಯಾಬಿಟೀಸ್ ಇರೋರಿಗೆ ಸಕ್ಕರೆ ಇಲ್ಲದ ಜ್ಯಾಮ್ ಮಾಡ್ತೋದು, ಅದಕ್ಕೆ ಅವಳು ಎರಡೂವರೆ ಲಕ್ಷ ಬೇಕು ಅಂದಿದ್ದಳು. ಅದನ್ನು ನಾನು ಶ್ರೀಮಾತಾ ಮಹಿಳಾ ಬ್ಯಾಂಕಿನಿಂದ ಅವರಿಗೆ ಕೊಡಿಸಿಕೊಟ್ಟೆ. ಈ ತರ ಮಹಿಳಾ ಬ್ಯಾಂಕುಗಳು ನಮ್ಮ ಮಹಿಳೆಯರಿಗೆ ಅನುಕೂಲ ಆಗಲಿ ಅವರ ಆರ್ಥಿಕ ಸ್ವಾವಲಂಬನೆಗೆ ಅನುಕೂಲ ಆಗಲಿ, ಅವರು ಮಾಡತಕ್ಕ ಕೆಲಸಕ್ಕೆ ಹಣದ ತೊಂದರೆ ಇದ್ದರೆ ಅನುಕೂಲ ಆಗಲಿ ಅಂತ ಸಂಘದ ಸದಸ್ಯರನ್ನು ಇಲ್ಲಿ ಕರೆದು ಅರ್ಧ ಹಣದ ಸೌಲಭ್ಯವನ್ನು ಮಾಡಿಕೊಡ್ತೀವಿ.

**ಜ್ಯೋತಿ :** ಅದರೆ ಮೆಂಬರ್ಸ್ ಆಗಿರಲೇ ಬೇಕಲ್ಲವೆ?

**ನಾಗರತ್ನ :** ಹೌದು ಮೆಂಬರ್ಸ್ ಆಗಲೇ ಬೇಕು. ಮಹಿಳೆಯರೇ ಮೆಂಬರ್ ಷಿಪ್ ತೊಗೊಂಡು ಸಾಲ ಪಡೆಯಬಹುದು.

**ಜ್ಯೋತಿ :** ಈ ಮಹಿಳಾ ಸಹಕಾರ ಸಂಘಗಳನ್ನು ಸ್ಥಾಪನೆ ಮಾಡುವ ಬಗ್ಗೆ ಮಹಿಳೆಯರು ಹೇಗೆ ಪ್ರತಿಕ್ರಿಯೆ ತೋರಿಸುತ್ತಿದ್ದಾರೆ?

**ನಾಗರತ್ನ :** ನೋಡಿ, ನಾನು ೧೯೬೬ ರಿಂದ ಈ ರಂಗದಲ್ಲಿ ಕೆಲಸ ಮಾಡ್ತಿದ್ದೀನಿ. ೧೯೭೫ರಲ್ಲಿ ಮಹಿಳಾ ವರ್ಷ ಅಂತ ಆಚರಿಸಿದರು ನಿಮಗೆ ಜ್ಞಾಪಕ ಇರಬಹುದು. ಅಲ್ಲೀತನಕ ಸ್ವಲ್ಪ ಕುಂಟುತ್ತ ಬರುತ್ತಿತ್ತು. ಆಸಕ್ತಿ ಅಷ್ಟಿರಲಿಲ್ಲ. ಹೆಣ್ಣು ಮಕ್ಕಳು ಹೊರಗೆ ಬರೋದು ಸ್ವಲ್ಪ ಕಷ್ಟವಾಗುತ್ತಿತ್ತು. ತರಬೇತಿ ಅಂದರೇನೂ ೧೦ ಜನರನ್ನು ಸೇರಿಸುವುದಕ್ಕೂ ಕಷ್ಟವಾಗುತ್ತಿತ್ತು. ಆದರೆ ಈಗ ೨೦೦೧ನೇ ಇಸವಿಯಲ್ಲಿ ನಾವಿದೀವಿ. ಈಗ ಮಹಿಳೆಯರಲ್ಲಿ ಜಾಗೃತಿ ಚೆನ್ನಾಗಿ ಮೂಡಿದೆ. ಮಕ್ಕಳು ದೊಡ್ಡವರಾಗ್ತಾರೆ, ಅಲ್ಲಿ ಇಲ್ಲಿ ಊರು ದೇಶಬಿಟ್ಟು ಹೋಗುತ್ತಾರೆ. ಇವರಿಗೆ ಹೊತ್ತು ಹೋಗೋದಿಲ್ಲ. ತಮಗೆ ತಿಳಿದಿರುವ ಕಲೆಯನ್ನು ಉಪಯೋಗಿಸಿಕೊಂಡು ಏನಾದರೂ ಮಾಡಬೇಕೂಂತ ಅಂದುಕೊಳ್ತಾರೆ. ಯಾರಿಗೆ ಹಣದ ಸೌಲಭ್ಯ ಚೆನ್ನಾಗಿದೆ ಇದೆಯೋ ಅವರು ಮಹಿಳಾ ಉದ್ಯಮಿಗಳಾಗುತ್ತಾರೆ. ಯಾರಿಗೆ ಹಣದ ಸೌಲಭ್ಯಕ್ಕೆ ಕಷ್ಟ ಇದೆಯೋ ಅವರು ಸಹಕಾರಿ ಸಂಘದ ಮೂಲಕ ಹಣದ ಸೌಲಭ್ಯ ಪಡೆಯಲು ಬರ್ತಾರೆ. ಈ ರೀತಿ ಗುಂಪು, ಉದ್ಯಮಿ ಎರಡನ್ನೂ ನಾವು ಮಾಡಿಕೊಳ್ಳಬಹುದು.

**ಜ್ಯೋತಿ :** ಅಂದರೆ ವೈಯಕ್ತಿಕ ಹಾಗೂ ಗುಂಪು ಎರಡೂ ರೀತಿ ನಡೆಸಬಹುದೇ?

**ನಾಗರತ್ನ :** ಹೌದು, ಉದ್ಯಮಿಗಳನ್ನು ವೈಯಕ್ತಿಕವಾಗಿ ಬೆಳೆಸುತ್ತೀವಿ. ಬೇರೆ ಸಹಕಾರಿ ಸಂಘಗಳಲ್ಲಿ ಗುಂಪುಗಳಾಗಿ ಬೆಳೆಸ್ತೀವಿ. ಈ ಗುಂಪಿನಲ್ಲಿ ಆರ್ಥಿಕ ತೊಂದರೆಗಳು

(Financial constraints) ಇರತ್ತೆ. ದುಡ್ಡು ಕೊಟ್ಟು ಮಾಡಿಸ್ತೀವಿ. ಉದ್ಯಮಿಗಳಲ್ಲಿ ದುಡ್ಡಿರತ್ತೆ ಅವರಿಗೆ Expertized training ಅಂದರೆ ತಜ್ಞರಿಂದ ತರಬೇತಿ ಬೇಕಾಗಿರತ್ತೆ ಅದನ್ನು ಕೊಡ್ತೀವಿ. ಈಚೆಗೆ ತುಂಬ ಇದು ಪಾಸಿಟಿವ್ ಆಗಿದೆ. ಈಗ ಮಹಿಳೆಯರೇ ನಡೆಸುವ ೨೮ ಬ್ಯಾಂಕುಗಳಿವೆ. ನಮ್ಮ ಲಕ್ಷ್ಮೀ ಕೋ-ಅಪರೇಟಿವ್ ಬ್ಯಾಂಕ್‌ನಲ್ಲಿ ಶೇ.೨೬ರಷ್ಟು ಡಿವಿಡೆಂಟ್ ಕೊಟ್ಟಿದ್ದಾರೆ. ಎಷ್ಟು ಚೆನ್ನಾಗಿ ಬೆಳೆದಿದೆ ನೋಡಿ. ಆದ್ದರಿಂದ ಮಹಿಳೆಯರಿಗೆ ಆಸಕ್ತಿ ಬಂದಿದೆ. ಒಳ್ಳೊಳ್ಳೆ ಲೀಡರ್ಸ್ ಕೂಡ ಬರ್ತಿದ್ದಾರೆ. ತರಬೇತಿ ಕೊಟ್ಟು ಇನ್ನೂ ಹೆಚ್ಚಿಗೆ ಇನ್‌ವಾಲ್ವ್ ಮಾಡಬೇಕು ಅಂತ ನನ್ನ ಆಸೆ ಇದೆ.

**ಜ್ಯೋತಿ :** ಆ ಆಸೆ ಈಡೇರಲಿ ಅಂತ ಹಾರೈಸ್ತೀನಿ.

**ನಾಗರತ್ನ :** ನಾನು ಈಗ ಕೆಲಸದಲ್ಲಿ ಇಲ್ದೇ ಹೋದರೂನೂ ಹಾಗೇ ಕೂತ್ಕೊಂಡ್ರೂ ಈಗಲೂ ಜನಗಳು ನನ್ನ ಹತ್ತಿರ ಬರ್ತಾ ಇರ್ತಾರೆ. ಗೆಸ್ಟ್ ಲೆಕ್ಚರ್‌ಗೆ ಅಂತ ಕರೀತಾ ಇರ್ತಾರೆ. ಅಲ್ಲೂ ಕೂಡ ಇದರ ಬಗ್ಗೆ ನಾನು ಹೆಚ್ಚು ಹೆಚ್ಚಾಗಿ ಹೇಳ್ತಾ ಇರ್ತೀನಿ. ಒತ್ತಾಸೆ ಕೊಡ್ತೀನಿ.

**ಜ್ಯೋತಿ :** ಈ ರಂಗದಲ್ಲಿ ಇಷ್ಟೊಂದು ಅನುಭವವಾದ ಮೇಲೆ ನಿಮಗೆ ಮಹಿಳೆಯರಿಂದ ಗ್ರಾಮ ಅಥವಾ ನಗರ ಇವುಗಳಲ್ಲಿ ಎಲ್ಲಿ ಹೆಚ್ಚಿನ ಉತ್ಸಾಹದ ಪ್ರತಿಕ್ರಿಯೆ ಕಂಡುಬಂದಿದೆ ಅನಿಸತ್ತೆ?

**ನಾಗರತ್ನ :** ಎರಡೂ ಕಡೆ ಮುಂದೆ ಬರ್ತಿದ್ದಾರೆ ಅಂತ ನನಗನ್ನಿಸತ್ತೆ. ಬ್ಯಾಂಕ್ ಮಾಡಿದ ಮೇಲೆ ಎರಡೂ ಕಡೆ ಬರ್ತಾ ಇದ್ದಾರೆ. ಅಂಥ ಜಾಗದಲ್ಲಿ ಎಷ್ಟು ಚೆನ್ನಾಗಿ ಸಂಘ ಮಾಡಿ ಕ್ರೆಡಿಟ್ ಸೊಸೈಟಿ ಮಲ್ಟಿಪರ್ಪಸ್ ಸೊಸೈಟಿ ಮಾಡಿ ಈಗ ಬ್ಯಾಂಕ್ ಮಾಡಬೇಕೂಂತ ಬಂದಿದ್ದಾರೆ ಮಹಿಳೆಯರು. ಆದ್ದರಿಂದ ಎಲ್ಲಾ ಕಡೆ ಈಗ ಆಸಕ್ತಿ ಹೆಚ್ಚಾಗ್ತ ಇದೆ. ಹಾಗೆ ಉತ್ತೇಜನಾನು ಸಿಗ್ತಾ ಇದೆ. ಒಳ್ಳೇ ಕೆಲಸ ಮಾಡಬೇಕು ಅಷ್ಟೇ.

**ಜ್ಯೋತಿ :** ಹಾಗಾದರೆ ಮಹಿಳಾ ಸಂಘಗಳ ಉಳಿವು, ಬೆಳವಣಿಗೆ ಸಾಕಷ್ಟು ಮುಂದುವರಿಯಬಹುದು. ಆಶಾದಾಯಕವಾಗಿದೆ ಎಂದು ಹೇಳ್ತೀರಾ?

**ನಾಗರತ್ನ :** ಖಂಡಿತವಾಗಿ, ಅಂದರೆ ಮಹಿಳೆಯರಲ್ಲಿ ಹೆಚ್ಚಿನ ಜಾಗೃತಿ ಮೂಡಿದೆ. ಇನ್ನೂ ಹೆಚ್ಚಿಗೆ ನಾವು ಸೋಷಿಯಲ್ ವರ್ಕ್ಸ್ ಕೆಲಸ ಮಾಡಬೇಕು. ಮಹಿಳಾ ಬ್ಯಾಂಕುಗಳು ಕೆಲಸ ಮಾಡಬೇಕು. ಮಹಿಳಾ ಮತ್ತು ಮಕ್ಕಳ ಇಲಾಖೆಗಳು ಸಹಕಾರ ಇಲಾಖೆ, ಮಹಿಳಾ ಅಭಿವೃದ್ಧಿ ನಿಗಮ ಎಲ್ಲವೂ ಹೆಚ್ಚಿಗೆ ಕೆಲಸ ಮಾಡಿದರೆ ಮಹಿಳೆಯರಲ್ಲಿ ಇನ್ನೂ ಹೆಚ್ಚು ಹೆಚ್ಚು ಆಸಕ್ತಿ ಹುಟ್ಟಿ ಪ್ರತಿಯೊಬ್ಬ ಮಹಿಳೆಯೂ ಆರ್ಥಿಕವಾಗಿ ಸ್ವಾವಲಂಬಿ ಸಹಕಾರಿ ಚಳುವಳಿಯ ಮೂಲಕ ಆಗಬಹುದು. ಇದಕ್ಕೆ ಹೆಚ್ಚಿಗೆ ತರಬೇಶತಿ ಕೊಟ್ಟು ಕೆಲಸ ಮಾಡಬೇಕು ಅಂತ ನನಗನ್ನಿಸುತ್ತದೆ.

**ಜ್ಯೋತಿ :** ನಾಗರತ್ನ ಅವರೇ ಒಂದು ಮುಖ್ಯವಾದ ಅಂಶ ಅಂದರೆ, ಈ ಆರ್ಥಿಕ ಚಳುವಳಿ

ಮಹಿಳೆಯರಿಗಾಗಿ ಮಹಿಳೆಯರಿಂದ ಮಹಿಳೆಯರ ಮೂಲಕವೇ ನಡೆಯುತ್ತ ಇರುವಂಥದ್ದಾಗಿದೆ. ಯಾಕೆಂದರೆ ವುಮನ್ ಎಂಪವರ್ ಮೆಂಟ್ ಅಥವಾ ಮಹಿಳಾ ಸಬಲೀಕರಣಕ್ಕೆ ಈ ಆರ್ಥಿಕ ಮುನ್ನಡೆ ಅಥವಾ ಆರ್ಥಿಕ ಸ್ವಾತಂತ್ರ್ಯ ಅತಿ ಮುಖ್ಯ ಅಂತ ನಾವೆಲ್ಲ ತಿಳ್ಕೊಂಡಿದೀವಿ. ಇದರಿಂದ ಮಹಿಳೆಯರ ಕುಟುಂಬ, ಸಮಾಜ ಹಾಗೂ ರಾಜಕೀಯವಾಗಿ ಆಗಲಿ ಯಾವುದೇ ರೀತಿಯ ಸತ್ಪರಿಣಾಮ ಉಂಟಾಗಬಹುದು ಅಂತ ಹೇಳ್ತಿರಾ? ಅಂದರೆ ಮಹಿಳೆಯರ ಭಾಗವಹಿಸುವಿಕೆ ಯಾವ ಪ್ರತಿಕ್ರಿಯೆ ಬರಬಹುದು?

**ನಾಗರತ್ನ :** ಮಹಿಳೆಗೆ ತುಂಬಾ ಬ್ಯಾಲೆನ್ಸ್‌ಡ್ ಮೈಂಡ್ ಇರುತ್ತೆ. ಮಹಿಳೆ ಮನೆ ಚೆನ್ನಾಗಿ ನೋಡಿಕೊಳ್ಳುತ್ತಾಳೆ. ರಾಜಕೀಯಕ್ಕೆ ಹೋದರೆ ಅಲ್ಲೂ ಚೆನ್ನಾಗಿ ಪ್ರಭಾವಶಾಲಿಯಾಗುತ್ತಾಳೆ. ಚೊಕ್ಕಟವಾಗಿ ಸಮಾಜ ಸೇವೆಗೆ ಹೋದರೆ ಅಲ್ಲೂ ಚೆನ್ನಾಗಿ ಕೆಲಸ ಮಾಡ್ತಾಳೆ. ಅವಳಿಗೆ ಹೆಚ್ಚಿಗೆ ಉತ್ತೇಜನ ನಮ್ಮ ಮಹನೀಯರು ಕೊಡಬೇಕು. ಈ ಪುರುಷ ಪ್ರಧಾನ, ಅಂತ ನಾವು ಏನು ಹೇಳ್ತಾ ಇದ್ದೀವೋ, ಇವತ್ತಿನ ದಿನ ಅವರಿಗೂ ಅರಿವಾಗಿದೆ, ಮಹಿಳೆಯರು ಚೆನ್ನಾಗಿ ಕೆಲಸ ಮಾಡ್ತಾ ಇದ್ದಾರೆ ಅಂತ. ಆದರೆ ನನ್ನ ಮನಸ್ಸಿಗೆ ಏನು ಅನ್ನಿಸುತ್ತೆ ಅಂದರೆ ರಾಜಕೀಯದಲ್ಲಿ ಇನ್ನೂ ಹೆಚ್ಚಿಗೆ ಪ್ರೋತ್ಸಾಹ ಮಹಿಳೆಯರಿಗೆ ಕೊಟ್ಟಿಲ್ಲ. ಇವತ್ತಿನ ದಿನ ಒಬ್ಬ ಮಹಿಳೆ ಎಂ.ಎಲ್.ಎ ಆಗಿ ಬಂದರೆ ಅವಳಿಗೆ ಸಿಗುವಂಥ ಪೋರ್ಟ್ ಫೋಲಿಯೋ(ಖಾತೆ) ಯಾವುದು? ಮಹಿಳಾ ಮತ್ತು ಮಕ್ಕಳ ಇಲಾಖೆ ಬಿಟ್ಟರೆ ಬೇರೆ ಯಾವುದೂ ಕೊಡೋಲ್ಲ.

**ಜ್ಯೋತಿ :** ಕನ್ನಡ ಮತ್ತು ಸಂಸ್ಕೃತಿ, ಆರೋಗ್ಯ ಕೊಟ್ಟಿದ್ದಾರೆ.

**ನಾಗರತ್ನ :** ಈಗ ಅದೊಂದು ಸೇರಿದೆ. ಅಂದರೆ ಕನ್ನಡ ಮತ್ತು ಸಂಸ್ಕೃತಿ ನಮ್ಮ ಮಹಿಳೆಯರಲ್ಲಿ ಚೆನ್ನಾಗಿ ಇದ್ದೇ ಇದೆ ಅಂತ ಇರಬಹುದು. ಆದರೆ ಅವರಿಗೆ ಯಾವುದೇ ಪದವಿ ಕೊಟ್ಟರೂ, ಮುಖ್ಯಮಂತ್ರಿ ಪದವಿ ಕೊಟ್ಟರೂ ಅವರು ಚೆನ್ನಾಗೇ ಕೆಲಸ ಮಾಡ್ತಾರೆ ಅನ್ನುವ ಭರವಸೆ ನನಗಿದೆ. ಹೆಚ್ಚಿಗೆ ಸ್ಥಾನ ಅಂದರೆ ಈಗ ಇಪ್ಪತ್ತು ಮಹನೀಯರಿಗೆ ಕೊಟ್ಟು ಎರಡು ಸ್ಥಾನ ಮಹಿಳೆಯರಿಗೆ ಕೊಡುವ ಬದಲು ಇಪ್ಪತ್ತು ಜನರಿಗೆ ಕೊಡೋದರಲ್ಲಿ ಐದೋ ಅಥವಾ ಹತ್ತೋ ಸ್ಥಾನ ಮಹಿಳೆಯರಿಗೆ ಕೊಟ್ಟರೆ ಅವರು ಇನ್ನೂ ಹೆಚ್ಚಿಗೆ ಕೆಲಸ ಮಾಡೋದ್ರಿಂದ ಸರ್ಕಾರನೂ ಇನ್ನೂ ಚೆನ್ನಾಗಿ ಕೆಲಸ ಮಾಡಬಹುದೂಂತ ನನಗನ್ನಿಸತ್ತೆ. ಮತ್ತೆ ಇನ್ನೊಂದು ಏನೂ ಅಂದರೆ ಮಹಿಳೆ ಕೆಲಸ ಮುಗಿಸಿಕೊಂಡು ಮನೆಗೆ ಬರೋವಾಗ ಕೈಯಲ್ಲೊಂದು ಪ್ಲಾಸ್ಟಿಕ್ ಚೀಲ ಇರತ್ತೆ. ಸೊಪ್ಪು ತೊಗೊಂಡಿರ್ತಾಳೆ, ಬ್ರೆಡ್ಡು ತೊಗೋಂಡಿರ್ತಾಳೆ, ಏನಾದ್ರೂ ತಿಂಡಿ, ಹಣ್ಣು ತೊಗೊಂಡಿರ್ತಾಳೆ. ಅವಳಿಗೆ ಮನೆಯದೇ ಯೋಚನೆ ಇರತ್ತೆ. ಒಂದು ಸಲ ಆಫೀಸು ಮುಗಿಸಿದರೆ ಮನೆಯ ಯೋಚನೆ ಬರತ್ತೆ ಅವಳಿಗೆ. ಅದೇ ಪುರುಷರನ್ನು ನೋಡಿ, ಅಲ್ಲಿ ನಿಂತ್ಕೋತಾರೆ ಸಿಗರೇಟ್ ಸೇದ್ತಾರೆ, ಇಲ್ಲ ಕ್ಲಬ್ ಗೆ ಹೋಗ್ತಾರೆ, ಹೋಟಲಿಗೆ ಹೋಗಿ ಸಿನಿಮಾ ನೋಡಿ ಒಂಭತ್ತು ಘಂಟೆಗೆ ಮನೆಗೆ ಬರ್ತಾರೆ. ಇವಳು ದಬ ದಬಾಂತ ಆರು

ಘಂಟೆಗೆ ಅಫೀಸು ಮುಗಿಸಿಕೊಂಡು ಮನೆಗೆ ಹೋಗಿ ತನ್ನ ಕಾಫಿ ತಾನೇ ಮಾಡಿ ಕುಡಿದು ಕೊಂಡು ಮಕ್ಕಳಿಗೆ ಹೋಂವರ್ಕ್ ಇದೆಯಾಂತ ನೋಡಿ, ರಾತ್ರಿಗೆ ಅಡಿಗೆಯನ್ನೂ ಮಾಡಿ, ಬೇಗ ಏಳೋಳು ಅವಳೇ ರಾತ್ರಿ ಲೇಟಾಗಿ ಮಲಗೋಳೂ ಅವಳೇ. ಹೀಗೆ ಎಲ್ಲಾ ಕಡೆಯೂ ಬ್ಯಾಲೆನ್ಸ್ ಮಾಡುವಂಥ ಕಂಡಿಷನ್ ಆಫ್ ಮೈಂಡ್ ಇದೆ ಆಕೆಗೆ. ಆದ್ದರಿಂದ ಮಹಿಳೆಗೆ ಹುಟ್ಟುವಾಗಲೇ ಶಕ್ತಿ ಜಾಸ್ತಿ ಕೊಟ್ಟಿದ್ದಾನೇನೋ ದೇವರು ಅಂತ ಹೇಳಬಹುದೇನೋ. ಅವಳು ಎಲ್ಲ ಕಡೆ ಚೆನ್ನಾಗಿ ನೋಡಿಕೊಳ್ಳುವುದರಿಂದಾನೆ ಇವತ್ತಿನ ದಿನ ಮನೇನಲ್ಲಿ ಶಾಂತಿ ಇರುತ್ತೆ, ಚೆನ್ನಾಗಿರುತ್ತೆ, ಹೊರಗಡೆ ಅಫೀಸಿನಲ್ಲೂ ಕೂಡ ವಾತಾವರಣವನ್ನು ಚೆನ್ನಾಗಿ ಇಟ್ಕೋಂಡಿರುತ್ತಾಳೆ. ಆದ್ದರಿಂದ ಮಹಿಳೆಗೆ ಆರ್ಥಿಕ ಸ್ವಾವಲಂಬನೆ ಇದ್ದ ಕಡೆ ಮರ್ಯಾದೆ ಚೆನ್ನಾಗಿರುತ್ತೆ. ಅವಳಿಗೆ ಮನೆಯಲ್ಲೇ ಆಗಲಿ ಹೊರಗಡೆಯೇ ಆಗಲಿ ಸ್ಟೇಟಸ್ ಇರತ್ತೇಂತ ನನಗೆ ಅನ್ನಿಸತ್ತೆ. ಪ್ರತಿಯೊಬ್ಬ ಮಹಿಳೆಯೂ ತನಗೆ ತಿಳಿದ ಕೆಲಸವನ್ನು ಮಾಡಬೇಕು. ಪ್ರತಕಯೊಬ್ಬರೂ ಪರ್ಸ್ ಇಟ್ಟುಕೊಂಡು ಆಚೆಗೆ ಹೋಗಿ ಕೆಲಸ ಮಾಡೀ ಅಂತ ನಾನು ಹೇಳಲ್ಲ. ಎಷ್ಟೋ ಕಡೆ ಅವರು ಹುಟ್ಟಿದಾಗಲೇ ಅವರಿಗೆ ಕರಕುಶಲ ಕೈಗಾರಿಕೆ ಗೊತ್ತಿರತ್ತೆ. ನಾವು ಮನೇನಲ್ಲಿ ಕೂತ್ಕೊಂಡು ಪಾಲ್ಸ್ ಹಾಕಬಹುದು, ಟೈಲರಿಂಗ್ ಮಾಡಬಹುದು, ಹ್ಯಾಂಡಿಕ್ರಾಫ್ಟ್ಸ್ ಮಾಡಬಹುದು, ಡೆಕೋರೇಟಿವ್ ಥಿಂಗ್ಸ್ ಮಾಡಬಹುದು. ಅವಳು ಮನೇನಲ್ಲೂ ವಿರಾಮ ವೇಳೆಯಲ್ಲಿ ಆ ಕಡೆ ಈ ಕಡೆ ಕೂತ್ಕೊಂಡು ಮಾತನಾಡದೆ ಮನೆ ಕೆಲಸ ಮಾಡಿಕೊಂಡು ಆರ್ಥಿಕ ಸ್ವಾವಲಂಬನೆ ಪಡೆಯಬಹುದು ಅಥವಾ ಗುಂಪು ಮಾಡಿಕೊಂಡು ಸಹಕಾರಿ ಸಂಘದ ಮೂಲಕ ಆರ್ಥಿಕ ಸ್ವಾವಲಂಬನೆಯನ್ನು ಮಾಡಿಕೊಳ್ಳಬಹುದು. ಗಂಡ ಚೆನ್ನಾಗಿ ಸಂಪಾದಿಸ್ತಾನಪ್ಪ, ನನ್ನ ಹತ್ತಿರ ಹೆಚ್ಚು ಹಣ ಇದೆ. ಅಂದರೆ ನಾಲ್ಕು ಜನಕ್ಕೆ ಅನುಕೂಲ ಆಗಲಿ ಅಂತ ಏನಾದರೂ ಒಂದು ಉದ್ಯಮ ಶುರು ಮಾಡಿ ನಾಲ್ಕು ಜನಕ್ಕೆ ಎಂಪ್ಲಾಯಿಮೆಂಟ್ ಕೊಟ್ಟು ಅವರು ಅವರನ್ನ ಆರ್ಥಿಕ ಸ್ವಾವಲಂಬಿಗಳಾಗಿ ಮಾಡಬಹುದು. ಈ ತರ ಮಹಿಳೆಗೆ ಬೇಕಾದಷ್ಟು ನೆಲೆಗಳಿವೆ. ಒಟ್ಟನಿಲ್ಲಿ ಹೇಳೋದಾದರೆ ಒಬ್ಬೊಬ್ಬ ಮಹಿಳೆಗೂ ಬಲವರ್ಧನೆಯಾಗ ಬೇಕಾದರೆ ಆರ್ಥಿಕ ಸ್ವಾಲಂಬನೆ ಬೇಕು. ಆದ್ದರಿಂದ ಈ ವರ್ಷವನ್ನು ಎಂಪವರ್ ಮೆಂಟ್ ಇಯರ್ ಅನ್ನು ಚಳುವಳಿಯ ಮೂಲಕ ಆರ್ಥಿಕ ಸ್ವಾವಲಂಬಿಗಳನ್ನಾಗಿ ಮಾಡಬೇಕು ಅನ್ನೊದೇ ನನ್ನ ಉದ್ದೇಶ.

**ಜ್ಯೋತಿ :** ಮಹಿಳಾ ಪ್ರಾತಿನಿಧ್ಯ, ಮಹಿಳಾ ಮೀಸಲಾತಿ ಹಾಗೂ ಮಹಿಳಾ ಸಬಲೀಕರಣ, ಆರ್ಥಿಕ ಸ್ವಾವಲಂಬನೆ ಈ ವಿಷಯಗಳಿಗೆ ಸಹಕಾರ ಚಳುವಳಿಯಿಂದ ಬೆಂಬಲ, ಮನೋಬಲ, ಸಾಧನೆ ಸಿಗುತ್ತದೆ ಅನ್ನುವ ಅಂಶ ನಿಮ್ಮ ಮಾತುಗಳಿಂದ ತಿಳಿಯಿತು. ಆದರೆ ಈ ವಿಷಯಗಳಿಗೆ ಮಹಿಳೆಯರ ಪ್ರತಿಕ್ರಿಯೆ ಏನು?

**ನಾಗರತ್ನ :** ಪುರುಷ ಪ್ರಧಾನ ಸಮಾಜದಲ್ಲಿ ಇಬ್ಬರು ಮಹಿಳೆಯರು ಸೇರಿದರೆ ಹೊಂದಿಕೊಂಡು ಹೋಗಲ್ಲ, ಎರಡು ಜಡೆ ಸೇರಲ್ಲ ಅಂತ ಹೇಳ್ತಾರೆ. ಈ ಮಹಿಳೆಯರಲ್ಲಿ

ಒಂದು ವೀಕನೆಸ್ ಏನಪ್ಪಾ ಅಂದರೆ, ಏನೋ ಒಂದು ಮಾತುಕತೆ ಬರತ್ತೆ. ಒಂದು ಸಂಸ್ಥೆಯಲ್ಲಿ ಅದನ್ನೇ ದೊಡ್ಡದಾಗಿ ಮಾಡಿಕೊಂಡು ಎನಿಮಿಟಿ ಇಟ್ಕೊಂಡು ಬಿಡ್ತಾರೆ. ಅದೇ ಪುರುಷರಲ್ಲೂ ಬರುತ್ತೆ. ಅದೇನೊಂದು ಬರತ್ತೋ ಮಿಟಂಗ್ ನಲ್ಲಿ ಮಾಡಿಬಿಟ್ಟು ಮುಂದೆ ಭುಜದ ಮೇಲೆ ಕೈ ಹಾಕ್ಕೊಂಡು ಹೊರಟು ಹೋಗ್ತಾರೆ. ನಮ್ಮ ಮಹಿಳೆಯರು ಹಾಗೇ ಮಾಡೋಲ್ಲ. ಉದಾಹರಣೆಗೆ, ನಾನು ಒಂದು ಸಂಸ್ಥೆಯಲ್ಲಿ ಅಧ್ಯಕ್ಷಿಣಿ ಆಗಿರ್ತೀನಿ ಅಂತ ತಿಳ್ಕೊಳ್ಳಿ. ಯಾರೂ ಪರ್ಮನೆಂಟ್ ಆಗಿ ಅಧ್ಯಕ್ಷೆ ಆಗಿರೋಕೆ ಸಾಧ್ಯವಿಲ್ಲ. ನಾನು ಆಗಿ ಇನ್ನೊಬ್ಬಳಿಗೆ ಅಥವಾ ನನ್ನ ನಾಯಕತ್ವದಲ್ಲಿ ಇನ್ನೂ ಐದು ಜನರನ್ನು ನಾನು ಬೆಳಸಬೇಕು. ಇವತ್ತು ನೀವು ಶ್ರೀಮತಿ ಚಿ.ನ.ಮಂಗಳಾ ಅವರ ಹೆಸರು ಕೇಳಿರಬಹುದು. ಚಿ.ನ.ಮಂಗಳ ಹೋದ ಮೇಲೆ ೫ ಜನ ಅಲ್ಲಿ ಪ್ರಿನ್ಸಿಪಲ್ ಆಗಿ ಇವತ್ತಿಗೂ ಕೆಲಸ ಮಾಡೋದಕ್ಕೆ ರೆಡಿಯಾಗಿದ್ದಾರೆ. ಅಂಥ ನಾಯಕತ್ವವನ್ನು ಅವರು ಬೆಳೆಸಿದ್ದಾರೆ. ಅದೇ ತರಹ ನಮ್ಮಲ್ಲಿ ದೊಡ್ಡ ಗುಣ ಇರಬೇಕು. ಒಬ್ಬಳು ಅಧ್ಯಕ್ಷಳಾಗಿ ಇಳಿದು ಬಿಟ್ಟರೆ ಈಗ ನಾನು ಅಧ್ಯಕ್ಷಳಲ್ಲ ಅವಳು ಏನು ಮಾಡ್ತಾಳೋ ನೋಡ್ತೀನಿ ಅನ್ನೋ ಬುದ್ಧಿ ಇರಕೂಡದು. ಅವಳಿಗೆ ಸಹಾಯ, ಉತ್ತೇಜನ ಎಲ್ಲರೂ ಕೊಡಬೇಕು. ಆ ಮನೋಭಾವವನ್ನು ಬೆಳೆಸಿಕೊಳ್ಳಬೇಕು. ಅಸೂಯೆ ಜಾಸ್ತಿಯಿರುತ್ತದೆ. ಮಹಿಳೆಯರು ಕತ್ತಿಮಸೆಯುವುದನ್ನು ಬಿಡಬೇಕು. ಐದು ಬೆರಳೂ ಒಂದೇ ಸಮ ಇರಲ್ಲ. ಸಂಸ್ಥೆಯಲ್ಲಿ ಕೂತುಕೊಂಡಾಗ, ನಾನು ಚರ್ಚೆ ಮಾಡಿದಾಗ ಭಿನ್ನಾಭಿಪ್ರಾಯ ಬರಬಹುದು. ಅದನ್ನು ಮೀಟಿಂಗ್ ನಲ್ಲೇ ಬಿಟ್ಟು ಬಿಡಬೇಕು. ಅದನ್ನು ಹೊರಗಡೆ ಸಾಧಿಸಬಾರದು. ಆ ಒಂದು ದೊಡ್ಡತನವನ್ನು ನಮ್ಮ ಮಹಿಳೆಯರು ಬೆಳೆಸಿಕೊಳ್ಳಬೇಕು ಅಂತ ನನಗೆ ಅನಿಸುತ್ತೆ.

**ಜ್ಯೋತಿ :** ಮಹಿಳೆಯರು ವೈಯಕ್ತಿಕವಾಗಿ ಹಾಗೂ ಸಾಮೂಹಿಕವಾಗಿ ಸಾಧನೆ ಮಾಡುವಂಥ ನಾಯಕತ್ವವನ್ನು ಈ ರಂಗ ಬೆಳೆಸಿಕೊಡಬಲ್ಲದೆ?

**ನಾಗರತ್ನ :** ಖಂಡಿತವಾಗಿ, ಯಾವುದೇ ಚಳುವಳಿ ಬೆಳೆಯ ಬೇಕಾದರೆ ಒಳ್ಳೆಯ ನಾಯಕತ್ವ ಇರಬೇಕು. ಅದು ಸಮಾಜ ಸೇವೆಯಾಗಿರಬಹುದು, ಸಹಕಾರಿ ಇರಬಹುದು, ಯಾವುದೇ ಇರಬಹುದು. ಅದಕ್ಕೆ ನಾವು ಹೆಚ್ಚು ಒಳ್ಳೆ ನಾಯಕರನ್ನು ನಾಯಕಿಯರನ್ನು ಬೆಳೆಸಬೇಕು. ತರಪೇತಿ ನೀಡಬೇಕು. ನಾಯಕತ್ವ ತರಬೇತಿ ನೀಡಬೇಕು. ಜಾಗೃತಿ ಶಿಬಿರಗಳನ್ನು ಮಾಡಬೇಕು. ಒಟ್ಟಿನಲ್ಲಿ ಗ್ರಾಮಾಂತರವಾಗಲಿ, ನಗರ ಪ್ರದೇಶವಾಗಲಿ ತರಬೇತಿಗೆ ಹೆಚ್ಚಿಗೆ ಪ್ರಾಮುಖ್ಯತೆ ನೀಡುವಂಥ ಕೆಲಸವನ್ನು ಸರಕಾರವಾಗಲಿ, ಸಂಸ್ಥೆಯಾಗಲಿ ಮಾಡಬೇಕು.

**ಜ್ಯೋತಿ :** ಈ ತರಬೇತಿ ನೀಡುವಂಥವರಿಗೆ ಹೇಗೆ ತರಬೇತಿ ನೀಡಬೇಕು?

**ನಾಗರತ್ನ :** ತರಬೇತಿ ನೀಡುವಂಥವರಿಗೂ ಆಸಕ್ತಿ ಇರಬೇಕು. ಎಷ್ಟೋ ಜನ ರಿಟೈರ್ಡ್ ಟೀಚರ್ಸ್ ಇದ್ದಾರೆ. ಅಂಥವರನ್ನು ನಾವು ಉಪಯೋಗಿಸಿಕೊಳ್ಳಬಹುದು. ರಿಟೈರ್ಡ್

ಪರ್ಸನ್ಸ್ ಆರ್ ಮೋರ್ ಎಕ್ಸ್ ಪೀರಿಯನ್ಸ್‌ಡ್. ಅವರನ್ನು ಕಾಂಟ್ರಾಕ್ಟ್ ಬೇಸಿಸ್ ಮೇಲೆ ಇಟ್ಕೊಂಡು ನಾವು ತರಬೇತಿ ಕೊಡುವಂಥದ್ದು ಇಲಾಖೆಯಿಂದ ಆಗಬೇಕಾದ ಕೆಲಸ. ಉದಾಹರಣೆಗೆ ನನಗೆ ಅಷ್ಟೊಂದು ಅನುಭವವಿದೆ. ಅದನ್ನು ಬಳಸಿಕೊಂಡು ನಾನು ನನ್ನ ಕೆಲಸ ಮಾಡಿಕೊಳ್ಳಬಹುದು. ಆದರೆ ಸರ್ಕಾರ ಆಗಲಿ ಇಲಾಖೆಗಳಾಗಲಿ ತಜ್ಞರ ಅನುಭವವನ್ನು ತೊಗೋಬೇಕು.

ಜ್ಯೋತಿ : ರಿಸೋರ್ಸ್ ಪರ್ಸನ್ಸ್‌ನ ತೊಗೋಬೇಕು.

ನಾಗರತ್ನ : ಹೌದು ತೊಗೋಬೇಕು, ಈಗ ಒಬ್ಬ ವ್ಯಕ್ತಿ ಕೆಲಸ ಮಾಡ್ತಾ ಇರೋಳಿಗೆ, ಹೆಚ್ಚಿನ ಮಾಹಿತಿ ಇರೋದ್ರಿಂದ ಅದನ್ನು ನಮ್ಮಿಂದ ಪಡೆದು ನಮ್ಮನ್ನೇ ಅವಳು ಡೆಮೋನ್ ಸ್ಟ್ರೇಷನ್‌ಗೆ ಕರೆದು ನಮ್ಮಿಂದ ಹೆಚ್ಚಿನ ಮಾಹಿತಿ ಪಡೀಬಹುದೂಂತ ನನಗೆ ಅನಿಸತ್ತೆ.

ಜ್ಯೋತಿ : ನಾಗರತ್ನ ಅವರೇ, ನಿಮ್ಮ ಜೊತೆಗಿನ ಈ ಸಂವಾದ ತುಂಬ ಉದ್ಬೋಧಕವಾಗಿದೆ. ಆರ್ಥಿಕವಾಗಿ ಮಹಿಳೆಯರಿಗೆ ಹೊಸ ದಾರಿಯನ್ನು ತೋರಿಸುವಂಥ ಸಹಕಾರ ಕ್ಷೇತ್ರದ ಪರಿಚಯವಾಗಿದೆ.

ನಾಗರತ್ನ : ಹೌದು, ನನಗೆ ಈಗ ನೀವು ಮಾಡಿದ ಹಾಗೆ ಹೆಚ್ಚು ಹೆಚ್ಚಾಗಿ ಇಂಥ ಅನುಭವ ಹೊಂದಿರುವವರನ್ನು ಇಂಟರ್ ವ್ಯೂ ಥರ ಮಾಡಿ ಅನಿಸಿಕೆಗಳನ್ನು ಕಲಿಯುತ್ತ ಹೋದರೆ, ಈಗ ಹೊಸದಾಗಿ ಬಂದಿರುವ ಹೊಸ ಪೀಳಿಗೆ ಏನಿದೆಯೋ ನಮ್ಮ ಅನುಭವ ಈತರ ಇದೆ ಅಂತ ತಿಳಿದುಕೊಂಡು ಕಲಿಯಬಹುದು.

ಜ್ಯೋತಿ : ನೀವು ಸರ್ಕಾರಿ ಇಲಾಖೆಯಲ್ಲಿದ್ದು ಕೆಲಸ ಮಾಡಿದ್ದರಿಂದ ನನಗೆ ನಿಮ್ಮ ಪರಿಚಯ ಮಾಡಿಕೊಳ್ಳುವ ಆಸಕ್ತಿ ಉಂಟಾಯಿತು. ಆದರೆ ಎಷ್ಟೋ ಜನರಿಗೆ ಈ ಕ್ಷೇತ್ರದ ಬಗ್ಗೆ ದಾರಿ ತೋರಿಸುವವರಿರೋದಿಲ್ಲ ಗೈಡ್ ಲೈನ್ಸ್ ತುಂಬ ಮುಖ್ಯ. ಇನ್ನೂ ಹೆಚ್ಚು ಜನರಿಗೆ, ಕರ್ನಾಟಕದಾದ್ಯಂತ ನಿಮ್ಮ ಅನುಭವದ ಪರಿಚಯವಾಗಬೇಕೂಂತ ಅನ್ನಿಸ್ತಿದೆ. ಅಂದರೆ ಇದರ ಲಾಭ ಅನೇಕರಿಗೆ ದೊರಕಬಹುದಲ್ಲವೇ?

ನಾಗರತ್ನ : ನನ್ನ ಅನುಭವದಲ್ಲಿ ಕಡೇ ಪಕ್ಷ ಒಂದು ನೂರು ಜನ ಹೆಣ್ಣು ಮಕ್ಕಳಾದರೂ ನನ್ನ ಹೆಸರು ಹೇಳಿಕೊಂಡು ದೀಪ ಹಚ್ತಾರೆ ಅನ್ನುವಂತಹ ಅಂಶವನ್ನು ರಾಜಾರೋಷವಾಗಿ ಹೇಳಬಲ್ಲೆ. ಆ ನಂಬಿಕೆ ನನಗಿದೆ.

ಜ್ಯೋತಿ : ಇನ್ನು ಬೆಂಗಳೂರಿನ ಮಟ್ಟಿಗೆ ಹೇಳುವುದಾದರೆ ಬೆಂಗಳೂರಿನಲ್ಲಿ ಈಗ ಯಾವ ಸಹಕಾರ ಸಂಘ ಅಥವಾ ಬ್ಯಾಂಕು ಅತ್ಯಂತ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿದೆ?

ನಾಗರತ್ನ : ಎಲ್ಲ ಬ್ಯಾಂಕು ಚೆನ್ನಾಗಿ ಕೆಲಸ ಮಾಡ್ತಿವೆ. ಬೆಂಗಳೂರು ನಗರದಲ್ಲಿ ನಾಲ್ಕು ಬ್ಯಾಂಕುಗಳಿವೆ. ಈ ಎಲ್ಲಾ ಬ್ಯಾಂಕುಗಳೂ ಚೆನ್ನಾಗಿ ಕೆಲಸ ಮಾಡುತ್ತಿವೆ. ಆದರೆ ಈಗೀಗ

ಪ್ರಾರಂಭವಾಗಿರುವ ಬ್ಯಾಂಕುಗಳು ಸ್ವಲ್ಪ ನಷ್ಟದಲ್ಲಿ ನಡೀತಾ ಇರಬಹುದು. ಆದರೆ ಒಂದೂವರೆ ಎರಡು ವರ್ಷಗಳಲ್ಲಿ ಲಾಭ ಪಡೆಯೋದಿಕ್ಕಾಗಲ್ಲ. ಆದರೆ ಜನಗಳಿಗೆ ಸೌಕರ್ಯ ಸಿಗ್ತಾ ಇದೆ. ಸೊಸೈಟಿಗಳಲ್ಲಿ ನೋಡಿದರೆ ನಮ್ಮ ಐ.ಟಿ.ಪಿನಲ್ಲಿ ಸ್ತ್ರೀ ಶಕ್ತಿ ಮಹಿಳಾ ವಿವಿಧೋದ್ದೇಶ ಸಹಕಾರಿ ಸಂಘವಿದೆ. ಅದು ಚೆನ್ನಾಗಿ ಕೆಲಸ ಮಾಡ್ತಾ ಇದೆ. ಉದ್ಯಮಿಗಳ ಸಂಘ ಅಷ್ಟಲಕ್ಷ್ಮಿ ಸಹಕಾರಿ ಸಂಘ, ಅಂತ ಅದು ಪತ್ತಿನ ಸಾಲದ ಸಂಘ. ಹೀಗೆ ಕೆಲವು ತುಂಬಾ ಚೆನ್ನಾಗಿ ಕೆಲಸ ಮಾಡ್ತಾ ಇವೆ. ಇವು ಇನ್ನೂ ಚೆನ್ನಾಗಿ ಕೆಲಸ ಮಾಡಬಹುದು. ಹೆಚ್ಚಿನ ತರಬೇತಿಯನ್ನು ಆಗಾಗ ಅವರಿಗೆ ಕೊಡಬೇಕಾಗುತ್ತದೆ. ತರಬೇತಿಗೆ ಹೆಚ್ಚಿನ ಕಾನ್ಸೆಂಟ್ರೇಷನ್ ಮಾಡಬೇಕು. ಸರ್ಕಾರ ಆಗಲಿ, ಇವತ್ತು ಗ್ರಾಸ್ ರೂಟ್ ಲೆವೆಲ್ ಅಂತ ಏನೊಂದು ಕೋ ಅಪರೇಟಿವ್ ಎಜುಕೇಷನ್ ಅಂತಿವೋ ಅದು ಹಾಳಾಗ್ತಾ ಇದೆ. ನಾವಿನ್ನೂ ಆ ಬಗ್ಗೆ ಹೆಚ್ಚಿನ ಕೆಲಸ ಮಾಡಬೇಕು ಅನ್ನೋದು ನನ್ನ ಅಭಿಪ್ರಾಯ.

**ಜ್ಯೋತಿ :** ತುಂಬಾ ವಂದನೆಗಳು ನಿಮ್ಮ ಆಶಯ ಫಲಿಸಲಿ.

**ನಾಗರತ್ನ :** ವಂದನೆಗಳು.

ಅನುಭವ ಕಥನ

# ಹರಿಕಥಮ್ಮನ ಕಥಾಕಾಲಕ್ಷೇಪ

ನಿರೂಪಣೆ : ಡಾ. ವಿಜಯಾ
ಸೌಜನ್ಯ : ಬಿ. ಜಯಶ್ರೀ

ಗುಬ್ಬಿ ಕಂಪನಿಯಲ್ಲಿ ಹಿರಿಯ ಕಲಾವಿದೆ ಹರಿಕಥಮ್ಮ ಹೆಸರೇ ವಿಶೇಷ. ವೃತ್ತಿಯೇ ಹರಿಕಥೆ ಹೇಳುವುದಾಗಿದ್ದರಿಂದ 'ಹರಿಕಥಮ್ಮ' ಆಗಿಬಿಟ್ಟರು.

ಇವತ್ತಿಗೂ ತೊಂಬತ್ತು ವಯಸ್ಸಿನವರಾದ ಹರಿಕಥಮ್ಮ ತಮ್ಮ ಮಗಳ ಮನೆಯಲ್ಲಿದ್ದಾರೆ. ಹರಿಕಥಮ್ಮನವರ ಮಕ್ಕಳೂ ಕಲಾವಿದರೆ. ತಂದೆಯನ್ನು ರಂಗಕಲಾವಿದ ಜಿ.ವಿ.ಕೃಷ್ಣ ಅವರು ನೋಡಿಕೊಂಡರೆ, ತಾಯಿ ಹರಿಕಥಮ್ಮನವರನ್ನು ಮಗಳು ಜಿ.ವಿ.ಶಾರದ ನೋಡಿಕೊಳ್ಳುತ್ತಾರೆ.

ವೆಂಕಟೇಶಮ್ಮ ಆಕೆಯ ಹೆಸರು. ತನ್ನ ಹನ್ನೆರಡನೇ ವಯಸ್ಸಿನಿಂದಲೇ ಉಪನ್ಯಾಸ, ಪ್ರಾರಂಭಿಸಿದರು. ತೆಲುಗಿನಲ್ಲಿ ಸೊಗಸಾಗಿ ಕಥೆ ಹೇಳುತ್ತಿದ್ದರು. ಮನೆಯ ವಾತಾವರಣದಿಂದಾಗಿ ಸಂಸ್ಕೃತ ಬರುತ್ತಿತ್ತು. ಮಾತುಬಲ್ಲ ಜಾಣೆ. ಬಹುಬೇಗ ಹರಿಕಥೆಗೆ ಒಗ್ಗಿಕೊಂಡರು. ಆಂಧ್ರದ ಸ್ಥಾನಂ ನರಸಿಂಹರಾವು, ಚಿರಾಲ ಬಾಲಕೃಷ್ಣಮೂರ್ತಿ, ದೊಮ್ಮೆ ಬಿ.ಗಗ್ಗಯ್ಯ, ರಾಮತಿಲಕಮು, ತಿರುಮಾಳ್‌ಚೌಧರಿ ಮೊದಲಾದವರ ಪರಿಚಯ, ಪ್ರಭಾವ. ಮುಖ್ಯವಾಗಿ ಅಶುಕವಿತೆ, ಗೀತೆಗಳ ರಚನೆಯಲ್ಲಿ ವೆಂಕಟೇಶಮ್ಮನದು ಅನನ್ಯ ಪ್ರತಿಭೆ.

ಒಂದು ಗಿಡದ ಕೆಳಗೆ ಕೂತು ಐದು ನಿಮಿಷದಲ್ಲಿ 'ಶ್ರೀ ಕೃಷ್ಣಂ... ಭಜರಾ...' ಕೀರ್ತನೆ ಬರೆದೆ. ಅದು ಹೋದಲ್ಲೆಲ್ಲ ಮೆಚ್ಚಿಗೆ ಪಡೆಯಿತು ಎಂದು ನೆನಪು ಮಾಡಿಕೊಳ್ಳುತ್ತಾರೆ. ವೆಂಕಟೇಶಮ್ಮ.

ಅಷ್ಟು ಚಿಕ್ಕ ಪ್ರಾಯದಲ್ಲೇ ದುಡಿಯಲು ಹೊರಟಿದ್ದೇಕೆ? ಅದೂ ಹರಿಕಥೆ ಹೇಳುವ ಶ್ರಮದಾಯಕ ಕೆಲಸವೇ ಏಕೆ ಎಂದು ಕೇಳಿದರೆ, ಹರಿಕಥಮ್ಮನವರಿಗೆ ಕೂಡಲೇ ಉತ್ತರ ಹೊಳೆಯುವುದಿಲ್ಲ.

ಲೌಡ್ ಸ್ಪೀಕರ್ ಇಲ್ಲ, ಊರಿಂದೂರಿಗೆ ಹೋಗಲು ಸಾರಿಗೆ ಸೌಲಭ್ಯವೂ ಇಲ್ಲ. ಎತ್ತಿನ ಗಾಡಿ ಸಹ ಸಿಗದೆ ನಡೆದು ಹೋದದ್ದುಂಟು. ಯಾವ ಗ್ರಾಮದ ಸಾಹುಕಾರರು ಹೇಳಿ ಕಳಿಸಿದರೂ ಹೋಗಬೇಕು, ಯಾವ ದೈವಕಾರ್ಯ ಇದ್ದರೂ ಏನೇ ಕಷ್ಟವಾದರೂ

ಸರಿಯೇ ಸ್ಥಳ ತಲುಪಿ ಸೇವೆ ಮಾಡಬೇಕು. ಏನು ಕಾಣಿಕೆ ಕೊಡ್ತಾರೋ ಅಷ್ಟು ತೊಗೋಬೇಕು. ಶ್ರಮಕ್ಕೆ ತಕ್ಕ ಫಲ ಸಿಗದಿದ್ದರೂ ಏನೋ ಮಹತ್ತಾದ್ದನ್ನು ಮಾಡಿದ ತೃಪ್ತಿಕ ಇರುತ್ತಿತ್ತು. ಜನ ಬಹಳ ಗೌರವ ತೋರಿಸುತ್ತಿದ್ದರು.

ಹರಿಕಥಮ್ಮನಿಗೆ ಸಂಸ್ಕೃತ, ಅಕ್ಷರಜ್ಞಾನ, ಸಮಯಸ್ಫೂರ್ತಿ ಜ್ಞಾಪಕಶಕ್ತಿ ಇಷ್ಟೆಲ್ಲ ಲಭಿಸಿದ್ದಾದರೂ ಹೇಗೆ ಅಂದರೆ ಆಕೆ ನಕ್ಕು ಬಿಡುತ್ತಾರೆ.

ಹರಿಕಥಮ್ಮ ಅಲಿಯಾಸ್ ವೆಂಕಟೇಶಮ್ಮನ ತಾಯಿಗೆ ಸಂಸ್ಕೃತ ಗೊತ್ತಿತ್ತು. ಅದಾದರೂ ಹೇಗೆ?

ಜಿ.ವಿ.ಕೃಷ್ಣ ಅವರು ಹೇಳುತ್ತಾರೆ, ವೆಂಕಟೇಶಮ್ಮನ ತಾಯಿ ಬ್ರಾಹ್ಮಣ ಯುವಕನನ್ನು ಪ್ರೇಮಿಸಿದ್ದರು. ಆತ ಪಂಡಿತ, ಆ ಸಹವಾಸ ಕುಶಾಗ್ರಮತಿಯಾದ ಆಕೆಗೆ ಸುಲಭವಾಗಿ ಎಲ್ಲವನ್ನು ಅರಗಿಸಿಕೊಳ್ಳಲು ನೆರವಾಗಿತ್ತು. ಆದರೆ ಬದುಕು ಸುಖಮಯವಾಗಿರಲಿಲ್ಲ. ಅತ್ತ ಒಲಿದವನ ಅಸರೆಯೂ ಇಲ್ಲ, ಇತ್ತಲವರೂ ಒಲ್ಲದಾದರು. ಪುಟ್ಟ ಹೆಣ್ಣು ಮಗು ಸಹಿತ ಹೊರಗೆ ದಬ್ಬಿದರು. ತನಗೆ ತಿಳಿದದ್ದೆಲ್ಲ ಮಗುವಿಗೆ ಅರೆದು ಹೊಯ್ದರು. ಮಗು ಚುರುಕಾಗಿತ್ತು, ಸುಸಂಸ್ಕೃತ ಮನಸ್ಸು ದೇವರ ಕಥೆ ಹೇಳಿ, ಪ್ರಾರ್ಥನೆ ಮಾಡಿ ಬದುಕು ಸವೆಸೋದು ಅದರಿಂದ ನಾಲ್ಕು ಜನಕೆ, ಒಳ್ಳೆಯದಾದರೆ ಜನ್ಮ ಸಾರ್ಥಕ. ಮಗಳಿಗೆ ಹರಿಕಥಾ ಕಾಲಕ್ಷೇಪವನ್ನು ಆಶ್ರಯಿಸಲು ಹೇಳಿತು. ಯಾವುದೂ ಅಂದುಕೊಂಡ ಹಾಗೆ ಆಗುವುದಿಲ್ಲವಂತೆ, ವೆಂಕಟೇಶಮ್ಮ ಕರ್ನೂಲಿನಲ್ಲಿದ್ದರು. ಅಲ್ಲಿಂದ ಚಿಂತಾಮಣಿಗೆ ಕಥೆ ಹೇಳಿಸಲು ಕರೆಸಿದ್ದರು. ಕಥಾಕಾಲಕ್ಷೇಪ ಮಾಡುವಾಗ ಅದೇ ಊರಲ್ಲಿದ್ದ ಗುಬ್ಬಿ ವೀರಣ್ಣನವರು ನೋಡಿದರು, ಕೇಳಿದರು. ಸೊಗಸಾಗಿ ಕಥೆ ಹೇಳ್ತಾಳೆ. ಉಚ್ಚಾರಣೆ ಚೆನ್ನ, ಶಾರೀರವೂ ದಿವ್ಯವಾಗಿದೆ. ಈ ಹುಡುಗಿ ನಾಟಕದಲ್ಲಿ ಪಾರ್ಟ್ ಮಾಡಿದರೆ ಚೆನ್ನಾಗಿರುತ್ತೆ ಅನಿಸಿತು, ಕರೆದರು.

ಅದು ರೇಷನ್ ಕಾಲ. ಎಷ್ಟು ದುಡಿದರೂ ಬರೋದು ಸಾಲದು. ವೆಂಕಟೇಶಮ್ಮ ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ ಸಹ ಬಸವಳಿದಿದ್ದರು. ರಾತ್ರಿ ಇಡೀ ನಾಟಕದ ಹಾಗೇ ಬೆಳತನಕ ಕಥೆ ಹೇಳಬೇಕು. ನಿಂತು ನಿಂತು ಮಂಡಿನೋವು, ಕಾಲು-ಸೊಂಟ ಸೋತು ಹೋಗುತ್ತಿತ್ತು. ಹೊಟ್ಟೆ ತುಂಬ ಊಟವೂ ಇಲ್ಲ. ಕಂಪನಿ ಮನೇರಿ ಸಾರು, ಚಟ್ನಿ, ಹಾಲು, ಮಜ್ಜಿಗೆ, ಕೆಲವು ಸಲ ಸಿಹಿಯೂಟ. ನಿಜಕ್ಕೂ ಇದು ಸ್ವರ್ಗವೇ ಸರಿ ಅನ್ನಿಸಿತ್ತು. ಒಪ್ಪಿಕೊಂಡು ಬಿಟ್ಟರು. ಆದರೆ ಅದಾಗಲೇ ಹರಿಕಥೆಯ ಮೂಲಕ ಜನಪ್ರಿಯತೆ, ಜನಾದರಣೆ ಪಡೆದಿದ್ದ ಹರಿಕಥಮ್ಮ ತಾವು ಒಪ್ಪಿದರೂ ಅವರ ಅಭಿಮಾನಿಗಳು ಬಿಟ್ಟು ಕೊಡುವಂತಿರಲಿಲ್ಲ.

'ಆಯಮ್ಮ ಕತೇನೇ ಹೇಳಬೇಕು, ನಾವೆಲ್ಲ ಇದ್ದುಕೊಂಡು ಈ ವಮ್ಮಂಗೆ ಬಣ್ಣ ಹಚ್ಚಿಸಬೇಕಾ' ಅಂತ ಹಟ ಹಿಡಿದರು. "ಏನು ಮಾಡಿದರೂ ನಾಟಕ ಮಾಡಲು-ಬಣ್ಣ

ಹಾಕಲು ಬಿಡಲಿಲ್ಲ. ಕೋಲಾರ, ಚಿಂತಾಮಣಿ, ಕೋಲಾರದವರೆಗೂ ಬಣ್ಣ ಹಾಕಲು ಸಾಧ್ಯವಾಗಲೇ ಇಲ್ಲ. ಕೋಲಾರ ದಾಟಿ ಬೇರೆ ಕ್ಯಾಂಪ್‌ಗೆ ಬಂದ ಮೇಲೆ ಬಣ್ಣ ಹಾಕಿ ಪಾರ್ಟ್‌ಮಾಡಿದೆ. ಆ ಮೇಲೂ ನಾನು ಊರುಗಳಲ್ಲಿ ಕ್ಯಾಂಪ್ ಇದ್ರೆ ಪಾರ್ಟ್ ಮಾಡ್ತಿರಲಿಲ್ಲ. ಜನ ನೊಂದುಕೋತಿತ್ತು'' ಎಂದು ನೆನಪು ಮಾಡಿಕೊಳ್ಳುತ್ತಾರೆ ಈಗಲೂ.

ಮೊದಲು ಬಣ್ಣ ಹಾಕಿ ನಿರ್ವಹಿಸಿದ್ದು ಯಶೋದೆಯ ಪಾತ್ರವನ್ನು. ಕತೆ ಹೇಳೋವಾಗ ಹ್ಯಾಗೋ ಹಾಗೆ ಕೃಷ್ಣನ್ನ ಆಟ ಆಡಿಸ್ತಾ ತನ್ಮಯಳಾಗಿ ಬಿಡುತ್ತಿದ್ದೆ. ಇದು ನಾಟಕ, ಪಾತ್ರ ಮಾಡ್ತಿದ್ದೀನಿಂತ ತಿಳಿದು ಎಚ್ಚರ ಆಗೋಕೆ ಕೊಂಚ ಹೊತ್ತು ಹಿಡೀತಿತ್ತು. ಕಣ್ಣು ಮುಚ್ಚಿ ಧ್ಯಾನ ಸ್ಥಿತೀಲಿ ಇರೋ ಹಾಗೆ ಆಗಿ ಬಿಡೋದು ಎಂದು ತಮ್ಮ ಮೊದಲ ಪಾತ್ರವನ್ನು ನೆನೆಯುವ ಹರಿಕಥಮ್ಮ ಅನಂತರ 'ಕುರುಕ್ಷೇತ್ರ' ನಾಟಕದ ಸುಭದ್ರೆಯಾಗಿ ಕಬೀರದಾಸ್ ನಾಟಕದ ಕಬೀರನ ಹೆಂಡತಿ, ಬೇಡರ ಕಣ್ಣಪ್ಪದಲ್ಲಿ ಕಣ್ಣಪ್ಪನ ಹೆಂಡತಿ. ಹೀಗೆ ಒಂದು ಬಗೆಯ ಸೌಮ್ಯ, ತ್ಯಾಗಮಯ ಪಾತ್ರಗಳನ್ನು ನಿರ್ವಹಿಸಿದ್ದೇ ಹೆಚ್ಚು.

ಆಗ-ಈಗ ಯಜಮಾನರ ಜೊತೆ 'ಸದಾರಮೆ' ನಾಟಕದ ಕಾಮಿಡಿ ಪಾತ್ರಾನೂ ಮಾಡುತ್ತಿದ್ದೆ ಎಂದು ಆ ದಿನಗಳನ್ನು ನೆನೆದು ನಗೆಯುಕ್ಕಿಸುತ್ತಾರೆ. ಹರಿಕಥೆ ಮಾಡ್ತಿದ್ದವರಿಗೆ ರಂಗಭೂಮಿಯ ಪಾತ್ರಗಳು ಏನು ಮಹಾ, ಮೇಕಪ್ ಮಾಡಿಕೋ ಬೇಕು, ಜನಗಳಿಗೆ ಇಷ್ಟ ಆಗೋ ಹಾಗೆ ಹಾವ-ಭಾವ ತರಬೇಕು ಅಷ್ಟೇ ಅನಿಸಿತ್ತು. ಮೊದಮೊದಲು ಅದು ಹಿಂಸೆಯೇ, ಆ ಮೇಲೆ ಒಗ್ಗಿ ಹೋಯಿತು. ಹಿಂದಿನ ನೆನಪೆಲ್ಲ ಬುತ್ತಿ ಕಟ್ಟಿಟ್ಟು ಇಲ್ಲಿಯೇ ಸೇರಿಹೋದರು. ಮೂವತ್ತು ವರ್ಷಗಳಷ್ಟು ದೀರ್ಘ ಅವಧಿಗೆ ಗುಬ್ಬಿ ಕಂಪನಿಯಲ್ಲೇ ಪಾತ್ರವಹಿಸಿದರು.

ತೆಲುಗಿನ ಹುಡುಗಿ ಕನ್ನಡ ಕಲಿತು, ನಾಟಕ ಮಾಡಿದ್ದು ಅದೊಂದು ಪ್ರಯಾಸ ಅನ್ನಿಸಲೇ ಇಲ್ಲ ಆಕೆಗೆ. ಏನು ಬೇಕಾದರೂ ಗ್ರಹಿಸುವ, ಒಪ್ಪಿಸುವ, ಎಂಥ ಕಷ್ಟವನ್ನು ನುಂಗಿಕೊಳ್ಳುವ ಕಲೆ ಕರಗತವಾಗಿತ್ತು.

"ನನಗೆ ಕಷ್ಟ ಅನ್ನೋದೇ ತಿಳಿಯುತ್ತಿರಲಿಲ್ಲ. ಅದೇ ಜೀವನ ಆಗಿತ್ತಲ್ಲ. ಬೇರೆ ಗೊತ್ತಿದ್ದರೆ ತಾನೇ ವ್ಯತ್ಯಾಸ ತಿಳಿಯೋಕೆ'' ಅನ್ನುತ್ತ ಹರಿಕಥಮ್ಮನವರ ಬದುಕಿನಲ್ಲಿ ಎಲ್ಲವೂ ಸರಳವೇನೂ ಆಗಿರಲಿಲ್ಲ. ಆಕೆ ಹೊಂದಿಕೊಂಡರು. ಕಷ್ಟವನ್ನೇ ಉಟ್ಟರು, ಹಾಸಿ, ಹೊದ್ದು, ಅದನ್ನೇ ಉಸಿರಾಡಿ ಬಿಟ್ಟರು. ವ್ಯಥೆಗೆ ಸ್ಥಳವೇ ಇಲ್ಲದ ಹಾಗೆ ತುಂಬಿಕೊಂಡು ಬಿಟ್ಟಿದ್ದರು.

ಆದರೂ ಒಬ್ಬರೇ ಕೂತು ಯೋಚಿಸುವಾಗ ತನ್ನ ಪೂರ್ವಾಶ್ರಮದ ಹರಿಕಥಾ ವೃತ್ತಿಗೂ ರಂಗಭೂಮಿಗೂ ಹೋಲಿಸಿ ನೋಡಿದ್ದುಂಟು.

"ಹರಿಕಥೆ ಅಂದ್ರೆ ನಾಲ್ಕು ಜನಕ್ಕೆ ಉಪದೇಶ ಮಾಡಿದ್ದು. ಅದೊಂದು ತರಹ ಮಠ, ಯೋಗಿಗಳು ಇದ್ದಹಾಗೆ. ಚೆನ್ನಾಗಿರೋದು, ನಾನು ಬಣ್ಣ ಹಾಕಿಕೋಳ್ಳಬಾರದಾಗಿತ್ತು. ಋಣ ಇತ್ತು, ಹೀಗೆ ಆಗಿ ಹೋಯ್ತು..."

"ವೀರಣ್ಣನವರ ದೊಡ್ಡ ಹೆಂಡತಿ ಸುಂದರಮ್ಮನವರೇ ಕಂಪನಿ ಶುರುಮಾಡಿದ್ದು. ಆ ಅಮ್ಮನೂ ತುಂಬಾ ಕಷ್ಟ ಪಟ್ಟಿದ್ದಾರೆ. ಕಷ್ಟದಿಂದಲೇ ಈ ಕಂಪನಿ ಕಟ್ಟಿದರು. ಇವರನ್ನೆಲ್ಲ ನೋಡಿದಾಗ ದೊಡ್ಡವರೇ ಎಲ್ಲಾ ಇದ್ದಾರೆ, ನಮ್ದೇನು ಬಿಡು. ವಿದ್ಯೆಗೆ ಒಂದೇ ದಾರಿ ಅಲ್ಲ. ಅದು ಒಂದೇ ತರಹ ಇರಲ್ಲ. ಒಂದು ಸಲ ನಗಿಸುತ್ತೆ, ಇನ್ನೊಂದು ಸಲ ಅಳಿಸುತ್ತೆ. ಈ ಗುಬ್ಬಿ ವೀರಣ್ಣೋರ ಕಂಪನಿಯಲ್ಲಿ ಒಂದು ದೇವಸ್ಥಾನ ಅಂದುಕೊಂಡು ಇಲ್ಲೇ ಸೇವೆ ಮಾಡಿಕೊಂಡು ಹೋಗೋದು ಸರಿಯಾದ ರೀತಿ ಅಂತ ಸಮಾಧಾನ ತಂದುಕೊಂಡು, ಪದೇ ಪದೇ ವಿತಂಡವಾಗಿ ಯೋಚಿಸದೆ ನಿರ್ಧಾರವಾಗಿ ಇದ್ದು ಬಿಟ್ಟೆದೀನಿ.

ಗುಬ್ಬಿ ಕಂಪನಿಯಲ್ಲಿ ವೀರಣ್ಣೋರು-ಸುಂದರಮ್ಮನವರು ಪ್ರೀತಿಯಿಂದ ಕಂಡುದನ್ನು, ಅಲ್ಲಿಯ ವೈಭವವನ್ನು, ಸಂಗೀತ ಶ್ರೀಮಂತಿಕೆಯನ್ನು ವರ್ಣಮಯವಾಗಿ ನಿರೂಪಿಸುತ್ತಾರೆ ಹರಿಕಥಮ್ಮ.

**ನಿಮಗೆ ಸಿಕ್ಕ ಪಾತ್ರಗಳಲ್ಲಿ ಯಾವುದು ಇಷ್ಟವಾಯ್ತು?**

'ಅಡ್ಡದಾರಿ' ನಾಟಕದಲ್ಲಿ ಹುಚ್ಚಿಯ ಪಾತ್ರ, 'ಕಾಲಚಕ್ರ'ದಲ್ಲಿ ತಾಯಿ ಪಾತ್ರ. ಅಭಿನಯಕ್ಕೆ ಹೆಚ್ಚು ಅವಕಾಶ ಇತ್ತು. ಒಳ್ಳೆಯ ಕಥೆ ಇತ್ತು. ಬಹಳ ಇಷ್ಟದಿಂದ ಮಾಡ್ತಿದ್ದೆ. ಪಾತ್ರಗಳು ಬರೀ ವಯ್ಯಾರ ಮಾಡೋಕ್ಕಿಂತ ಏನಾದರೂ ಅಂತಃಕರಣಕ್ಕೆ ತಾಕಿದರೇ ಸಂತೋಷವಾಗುತ್ತೆ. ಹಾಡುಗಳೂ ಅಷ್ಟೆ, ಒಳ್ಳೆಯ ಸಾಹಿತ್ಯ ಇದ್ದರೆ ಚೆನ್ನ. ಕುರುಕ್ಷೇತ್ರ ನಾಟಕದ 'ಜನನಿಯ ದಾಸ್ಯವನು..... ಶುಭವಿರಲಿ ನಿನಗೆ", ಅಕ್ಕಮಹಾದೇವಿ ನಾಟಕದಲ್ಲಿ ಬರೋ ಒಂದು ಕಂದಪದ್ಯ. ಇವತ್ತೂ ಮನಸ್ಸು ಕುಣಿಯುತ್ತೆ. ೯೦ ವರ್ಷ ಆಗ್ತಿದೆ. ನನ್ನ ಕಂಠ ನಡುಗೊಲ್ಲ. ಅಮನೋರು ಇರೋರು, ಸುಂದರಮ್ಮನೋರು. ಗುಟ್ಟು ಅಂದರೆ ನಮ್ಮಿಬ್ಬರಿಗೂ ತಂಬಾಕಿನ ಹುಚ್ಚು. ಬೆಳಗಿನ ಜಾವ ಅವರು ನಿದ್ರೆ ಮಾಡ್ತಿದ್ದರೂ ಎಬ್ಬಿಸಿ ಕಾಣದ ಹಾಗೆ ತಂಬಾಕು ಕೊಡ್ತಿದ್ದೆ. ಈ ಚಟಕ್ಕಾಗಿ ಬಹಳ ಬೈಸಿಕೊಡಿದ್ದು.

ಈ ತಂಬಾಕು... ಅಮ್ಮಾ ನಮ್ಮದು ಗೌಡ ಶರೀರ
ಹೋ... ಅಂತೀರಿ... ಇದೆಲ್ಲ ತಾಖತ್ತು ಕೊಡ್ತದೆ...

**ಹರಿಕಥೆ ಗುರುಗಳು ಯಾರು?**

ನನಗೆ ಹರಿಕಥೆಗೆ ಗುರುಗಳಿಲ್ಲ. ಪುಸ್ತಕಗಳನ್ನು ಶೋಧಿಸಿದ್ದೀನಿ. ಅದೇ ಆಧಾರ. ಮಹಾಭಾರತದಲ್ಲಿ ಒಂದು ಕತೆ ಹೀಗೆ ಹೇಳ್ತಾರೆ, 'ಭಕ್ತರನ್ನ ಕಾಪಾಡಬೇಕು ಅಂದ್ರೆ ಹೆಂಡ್ತಿ ಹತ್ರ ಮಲಿಕ್ಕೊಂಡಿದ್ರೂನೂ(ತಳ್ಳಿಬಿಟ್ಟು) ಓಡಿ ಬಂದು ಭಕ್ತರನ್ನ ಕಾಪಾಡ್ತಾನಂತೆ 'ಪರಮಾತ್ಮ'. ಹಾಗೆ ಮನುಷ್ಯ ಜನ್ಮ ಎತ್ತಿದ ಮೇಲೆ ನಡೆ-ನುಡಿ ಎಲ್ಲವೂ ಸರಿಯಾಗಿರಬೇಕು. ಸುಳ್ಳು ಹೇಳಿಕೊಂಡು ಬದುಕೋದು ಜೀವನ ಅಲ್ಲಮ್ಮ. ನಾನು

ಅದನ್ನ ನಂಬಿದೆ. ಕತೆ ಹೇಳಿಕೋತಾ ಕಾಲಕಳೆದೆ. ಇಲ್ಲಿ ಕಂಪನಿಗೆ ಬಂದಮೇಲೂ ಸುಂದರಮ್ಮನವರು, ಚಿಕ್ಕಹೆಂಡ್ತಿ ಜಯಮ್ಮನೋರೂ ಇದ್ರು... ಇವರಿಬ್ಬರ ಮಧ್ಯೆ ಭದ್ರಮ್ಮನವರಿದ್ರು. ಆ ತಾಯಿ ಹಳ್ಳಿಯೋರು, ಅವರಿಗೆ ಎಣಿಸೋದಿಕ್ಕೆ ಬರ್ತಿರಲಿಲ್ಲ. ಒಂದು....ಎರಡು..... ಮೂರು.... ಅಂತ ಕೈ ಬೆರಳು ಎಣಿಸೋದು... ದೇವರಂಥ ಹೆಂಗಸು ಸುಂದರಮ್ಮನವರೇ ನಿಂತು ವೀರಣ್ಣೋರಿಗೆ ಈ ಮದುವೆ ಮಾಡಿಸಿದ್ರು. ಆ ತಾಯಿ ಎಲ್ಲರ ವಿಷಯದಲ್ಲೂ ಅಂಥ ಜವಾಬ್ದಾರಿಕ ಹೊತ್ತಿದ್ದಾರೆ. ನನಗೂ ಮದುವೆ ಮಾಡಿಸಿದ್ರು. ಕಂಪನಿಲೇ ಅದೂ ಇದೂ ಕೆಲಸ ಮಾಡ್ತಿರೋದು. ಪಟೇಲ ವಿಠಲನಾರಿಗಿ ಅಂತ ಹೆಸರು. ಪಾರ್ಟುಗೀರ್ಟು ಬರುತ್ತಿರಲಿಲ್ಲ. ನಾಲಿಗೇನೇ ಶುದ್ಧವಿಲ್ಲ ಶುದ್ಧ ಅಪಭ್ರಂಶ. ನಾನಂತೂ ಬೈದೇ ಬಿಡುತ್ತಿದ್ದೆ. ವಿದ್ಯಾವಂತರೂ ಅಲ್ಲ. ಏನೋ ಕಣ್ಣ ಮುಂದೆ ಒಂಟಿಯಾಗಿದಾಳಲ್ಲ ಅಂತ ಮದುವೆ ಮಾಡಿಸಿದರು. ಕಂಪನಿ ಮನೇಲಿ ಕೆಲವು ಸಲ ಸುಖವಾಗಿರಲಿ ಅಂತ, ಬಹಳ ಸಲ ಕಂಪನಿ ಬಿಟ್ಟು ಹೊಗದಿರಲಿ ಅಂತಲೂ ಮದುವೆಗಳು ಆಗ್ತಿದ್ದವು.

ಹರಿಕಥಮ್ಮನವರಿಗೆ ಐದು ಮಕ್ಕಳು, ಮೂರು ಮಕ್ಕಳನ್ನು ಹೊತ್ತು ಹೆತ್ತದ್ದು ಕಂಪನಿಯಲ್ಲಿದ್ದಾಗಲೇ. "ಬೆಳಿಗ್ಗೆ ಹೆರಿಗೆ ಅದ್ರೆ ಸಾಯಂಕಾಲವೇ ಬಣ್ಣ ಹಾಕಿ ಪಾರ್ಟ್ ಮಾಡ್ತಿದ್ದೆ. ಕಷ್ಟ, ಅದೊಂಥರಾ ಹಿಂಸೆ. ಆದರೆ ಮನುಷ್ಯ ಯಾವತ್ತಿದ್ರೂ ಸಾಯ್ತಾನೆ. ಇದಿಕ್ಕೆಲ್ಲ ಹೆದರಬಾರದು, ಅಂತ ಪಾರ್ಟ್ ಮಾಡ್ತಿದ್ದೆ. ನನಗೇನೂ ಆಗಿಲ್ಲ ನೋಡಿ." ಮಕ್ಕಳೂ ಪಾತ್ರ ಮಾಡುತ್ತಿದ್ದರು. ಬಾಲನಟಿರಾಗಿ, ದೊಡ್ಡವರಾದ ಮೇಲೂ ರಂಗಭೂಮೀಲಿ ಒಳ್ಳೆಯ ಹೆಸರಾದರು. ಇದು ಅತ್ಯಂತ ಸುಖ, ಆನಂದ ಅನಿಸಿದೆ ಹರಿಕಥಮ್ಮನವರಿಗೆ.

ಮೊದಲು ಮಗಳು ದುರ್ಗಮ್ಮ ವೀರಣ್ಣನೊರ ಮಗಳು ಮೂಲತಮ್ಮ ಜೊತೆಯವರು 'ದಶಾವತಾರ' ನಾಟಕದಲ್ಲಿ ಅಣ್ಣ ತಮ್ಮನ ಪಾತ್ರ ಮಾಡುತ್ತಿದ್ದರು. ಎರಡನೇ ಮಗಳು ಸೊಗಸಾಗಿ ನರ್ತಿಸುತ್ತಿದ್ದರು. ಪಾತ್ರವನ್ನು ನಿರ್ವಹಿಸುತ್ತಿದ್ದರು ಹೆಸರು ಶಾರದ. ಇನ್ನೂ ಮೂವರು ಗಂಡುಮಕ್ಕಳು ಈ ಮಕ್ಕಳ ವಿಚಾರ ಬಂದರೆ ಹರಿಕಥಮ್ಮ ಉದ್ವಿಗ್ನರಾಗುತ್ತಾರೆ.

"ಒಬ್ಬ ಮಗ ಗುರುಪ್ರಸಾದ್‌ಗೆ ಬುದ್ಧಿ ಸರಿ ಇಲ್ಲ, ಹುಚ್ಚನ ಹಾಗಿದ್ದಾನೆ. ಇನ್ನೊಬ್ಬ ಮದನ ಮೋಹನ ರೆಡ್ಡಿ, ಇನ್ನೊಬ್ಬ ಕೃಷ್ಣಾರೆಡ್ಡಿ. ಜಿ.ವಿ.ಕೃಷ್ಣ ಅಂತಾರೆ. ಈ ಕೃಷ್ಣನಿಗೆ ರೆಕ್ಕೆ ಬಂತು ಪಕ್ಷಿ ಹಾಗೆ ಹಾರಿ ಹೋದ. ನನ್ನನ್ನು ಒಂಟಿ ಮಾಡಿದ. ಈಗ ನಾನು ಆ ಹುಚ್ಚು ಹಿಡಿದ ಮಗನ ಜೊತೆ ಇದ್ದೀನಿ. ಸದ್ಯ ನನ್ನ ಜೊತೆ ಯಾರೂ ಇಲ್ಲ. ಹಿಂದಿನದೆಲ್ಲ ನೆನಸಿಕೊಂಡರೆ ಹೊಟ್ಟೇಲಿ ಸಂಕಟ ಆಗುತ್ತೆ. ಕಾಲವೆಲ್ಲ ಒಂದು ಗಡಿಯಾರ... ಗಂಟೆ ತರಹ ಕ್ಷಣವೂ ವ್ಯರ್ಥ ಆಗದ ಹಾಗೆ ಸ್ವಾಮಿ ಸೇವೆ ಮಾಡಿಕೊಂಡು ಬಂದೆ. ಈಗ ಇಂಥ ತೊಂದರೆಗೆ ಸಿಕ್ಕಿಕೊಂಡು ಬಿಟ್ಟೆ. ಸ್ವಾಮಿ ನನ್ನ ಕೈಬಿಟ್ಟು ಬಿಟ್ಟ' ಬಿಕ್ಕಿ ಬಿಕ್ಕಿ ಅಳುತ್ತಾರೆ ಹರಿಕಥಮ್ಮ.

"ಆರೋಗ್ಯ ಸರಿಯಿಲ್ಲ. ಬರಬಾರದ ರೋಗ, ಕ್ಷಯರೋಗ ಬಂದಿದೆ. ಸಾಹುಕಾರರಿಗೆ ಬರೋ ಖಾಯಿಲೆ. ಅವರಾದರೂ ಹಣ್ಣು-ಹಂಪಲು, ಔಷಧಿ ತಗೋತ್ತಾರೆ. ನಾನೇನು ಮಾಡ್ಲಿ ಭಿಕಾರಿ. ನನ್ನ ಯಾಕೆ ಆ ಸ್ವಾಮಿ ಹೀಗೆ ಪರೀಕ್ಷೆ ಮಾಡ್ತಾನೆ?.."

ಹರಿಕಥಮ್ಮನವರನ್ನ ಕರೆಸಿ ಭುಜಂಗಯ್ಯನ ದಶಾವತಾರ ಚಿತ್ರದಲ್ಲಿ ತಾಯಿ ಪಾತ್ರ ಕೊಟ್ಟಿದ್ದರು ಲೋಕೇಶ. ಹರಿಕಥಮ್ಮ ಗುಬ್ಬಿಕಂಪನಿ ಕೆಲಕಾಲ ಮುಚ್ಚಿ ಹೋದಾಗ ಸುಬ್ಬಯ್ಯನಾಯಿಡು ಕಂಪನೀಲಿ ಇದ್ದರು. ಮತ್ತೆ ಕಂಪನಿ ಪ್ರಾರಂಭಿಸಿದಾಗ ಹಿಂದಿರುಗಿದ್ದರು. ಆ ನೆನಪಿನಲ್ಲಿ ಲೋಕೇಶ್ ಹರಿಕಥಮ್ಮನಿಗಾಗಿ ಕಾದಿದ್ದು ಆಕೆ ಕೈಲೇ ಪಾರ್ಟ್ ಮಾಡಿಸಿದ್ದರು.

ಹರಿಕಥಮ್ಮನವರಿಗೆ ತನ್ನ ಹೆಣ್ಣು ಮಗಳೊಬ್ಬಳ ಬಗ್ಗೆ ಬಹಳ ವ್ಯಥೆ. "ಎರಡು ಮಕ್ಕಳನ್ನು ಬಿ.ಆರ್. ಸಂತುಲು ಅವರು ಚಲನಚಿತ್ರಕ್ಕೆ ಕರೆದರು. ಮಕ್ಕಳು ಚೆನ್ನಾಗಿ ಕೆಲಸ ಮಾಡಿದ್ದರು. ಜಯಮ್ಮನ ಮಗ ಗುರು ಮಗಳು ಇಬ್ಬರೂ ಜೊತೆ. ರಾಮಾಯಣದಲ್ಲಿ ಇದ್ದರೆ ಕೋತಿ ಪಾತ್ರ ಮಾಡೋರು. ಸಲಿಗೇ ಬೆಳೀತು. ಸುಂದರಮ್ಮನೋರಿಗೂ ನನ್ನ ಮಗಳಾಂದ್ರೆ ಇಷ್ಟ 'ಪ್ರಾಪ್ತಂ ಫಲಂ ತದ್ವಂ ಜೀವ' ಅಂತ ವಿಧಿ ವಿಲಾಸ. ಎಳಕೊಂಡು ಹೋಯ್ತು. ಆದರೆ ಎಲ್ಲ ಆದಮೇಲೆ ಆ ಹುಡುಗ ಮದುವೇನೇ ಆಗಲ್ಲ ಅಂದುಬಿಟ್ಟ. ಅವಳ ಬಾಳು ನೇರವಾಗ್ಲಿಲ್ಲ. ಇದೆಲ್ಲ ಆದ ಮೇಲೆ ಯಾಕೋ ಸಿನಿಮಾ ಪ್ರಪಂಚನೇ ಬೇಡ ಅಂದಳು. ಬಹಳ ವರ್ಷ ಆದ ಮೇಲೆ ಮತ್ತೆ ಎಲ್ಲ ಕಡೆ ಪಾತ್ರ ಮಾಡ್ತಾಳೆ. ಬೇರೆ ಇದ್ದಾಳೆ. ನಾನೂ ಆಗ-ಈಗ ಹೋಗಿ ಬರ್ತೀನಿ. ಅವಳಿಗೂ ಒಬ್ಬ ಮಗಳು ಅರ್ಚನಾ ಅಂತ. ಸಿನಿಮಾದಲ್ಲಿ ಪಂಚಮಿ ಅನ್ನುವ ಹೆಸರಲ್ಲಿ ಪಾತ್ರ ಮಾಡ್ತಾಳೆ. ಬಿ.ಎ.ಓದಿದ್ದಾಳೆ. ಮೊಮ್ಮಕ್ಕಳ ಕಾಲಕ್ಕಾದ್ರೂ ಸುಖ ಸಂತೋಷ ಸಿಗಲಿ. ಮಗ ಜಿ.ವಿ.ಕೃಷ್ಣನು ಗುಬ್ಬಿಕಂಪನೀಲಿದ್ದ. ನಂಗ್ಯಾಕೋ ಅವನು ಸರಿಬರಲಿಲ್ಲ. ಕಂಪನೀಲಿದ್ದ ರಾಧಾ-ರುಕ್ಮಿಣೀನ್ನು ಆ ಹುಡುಗಿರನ್ನ ಮದುವೆ ಆದ. ಚೆನ್ನಬಸಣ್ಣನೋರೇ ನಿಂತು ಮದುವೆ ಮಾಡಿದರು. ನಾನು ಹೋಗಲಿಲ್ಲ. ಆ ರೀತಿ ನನಗೆ ಹಿಡಿಸಲಿಲ್ಲ. ಅವರಿಗೊಬ್ಬ ಮಗಳಿದ್ದಾಳೆ. ಸಿನಿಮಾದಲ್ಲಿ ಶ್ರುತಿ ಅಂತಾರೆ. ಹೆಸರಾಗಿದ್ದಾಳೆ. ಸಿನಿಮಾಗಳಲ್ಲಿ ಒಂದೊಂದ್ಸಲ ಹೋಗಿ ನಾನು ಪಾರ್ಟು ಮಾಡ್ತಿರ್ತೀನಿ. ಏನೋ ಹಿಂಗೆ ಜೀವನ ಸಾಗಿದೆ"

ಸಿನಿಮಾ, ನಾಟಕ, ಹರಿಕಥೆ ಈ ಮೂರರಲ್ಲಿ ಯಾವುದು ಇಷ್ಟ? ಯಾವುದರಲ್ಲಿ ಶಾಂತಿ, ನೆಮ್ಮದಿ, ತೃಪ್ತಿ ಸಿಕ್ಕಿದೆ?

ಸ್ವಾಮಿ (ಆಕೆ ಎಲ್ಲರನ್ನು ಸ್ವಾಮಿ ಅಂತರೇ ಸಂಬೋಧಿಸುತ್ತಾರೆ) ಮೊದಲು ನಾನು ಸಂಗೀತಗಾರ್ತಿ. ಕಛೇರಿ ಮಾಡ್ತಿದ್ದೆ, ಚಿಂತಾಮಣಿ ವೆಂಕಟ್ರಾಮಯ್ಯನವರ ಮಗ ಪಿಟೀಲುನಾದನದಲ್ಲಿ ಹೆಸರುವಾಸಿ. ಅವರೂ ನಾನು ಗದ್ವಾಲದಲ್ಲಿ ವರ್ಷಕ್ಕೊಮ್ಮೆ ಸಂಸ್ಥಾನಗಳಿಗೆ ಹೋದರೆ ಹೋಗಿ ಬರಲು ಛಾರ್ಜು ಕೊಟ್ಟು ಒಳ್ಳೇ ಸಂಭಾವನೆ

ಕೊಡೋರು. ಊಟ, ಉಳಿದುಕೊಳ್ಳಲು ಬಂಗಲೆ, ಅದನ್ನೆಲ್ಲ ಹೋಲಿಸಿದರೆ ಅದರ ನಂತರದ ಯಾವ ವೃತ್ತಿಯಲ್ಲೂ ಆ ಗೌರವ ಮತ್ತು ಸಮಾಧಾನ ಸಿಗಲಿಲ್ಲ. ಸಂಗೀತ ಬಿಟ್ಟಿದ್ದು ತಪ್ಪಾಯ್ತೇನೋ ಅನ್ನಿಸಿತ್ತು. ಆದರೆ ಯಾವ ಸಂಪಾದನೆ ಖಾಯಂ ಅಲ್ಲವೋ, ಯಾವುದರಿಂದ ಹೊಟ್ಟೆ ಬಟ್ಟೆ ಕಳಿಯೋಲ್ಲವೋ ಅದನ್ನು ಬಿಟ್ಟು ಇನ್ನೊಂದಕ್ಕೆ ಹೋಗಲೇಬೇಕಾಗುತ್ತೆ ಅಲ್ಲವೆ? ಹಾಗೆ ಹೊಟ್ಟೇ ತುಂಬೋ ಕೆಲಸ ಅಂತ ಇತ್ತ ಕಡೆ ಬಂದೆ ಸ್ವಾಮಿ, ಇನ್ನೇನೂ ಇಲ್ಲ. ಈಗಲೂ ಎಲ್ಲಾದರೂ ಹೋಗಿ ಹಾಡೋಣ ಅನ್ನಿಸುತ್ತೆ. ಕೈಲಾಗಲ್ಲ. ಹಾಡೋಕೆ ಶುರುಮಾಡಿದ್ರೆ ಎಲ್ಲಿ ಅರ್ಧಕ್ಕೆ ಸುಸ್ತಾಗುತ್ತೇ ಅನ್ನೋ ಭಯ. ಮಗಳು ಶಾರದನ್ನು ಈ ಹುಚ್ಚನ್ನ ನೋಡಿಕೊತ್ತಾಳೆ. ಅವಳಿಗೆ ಹೊರೆ ಅಗಿದೇನೋ ಅನಿಸುತ್ತೆ.

ಹರಿಕಥೆ ಹೇಳ್ತಿದ್ದ ದಿನಗಳಲ್ಲಿ ಒಂದು ಸಲ ಹಿಂದೂ-ಮುಸ್ಲಿಂ ಗಲಾಟೆ ಆಯ್ತು. ನಾನು ಹೋಗಿ ಮುಂದೆ ನಿಂತು ತತ್ವದ ಮಾತು ಹೇಳಿ, ಜೋರಾಗಿ ಹಾಡಿ-ಭಜನೆ ಮಾಡಿ ಗಲಾಟೆ ನಿಲ್ಲಿಸಿದ್ದೆ. ನಾನು ಹೋಗಿ ಬಾಯಿ ತೆಗೆದ ಕೂಡಲೇ ಸುಮ್ಮನಾಗಿ ಬಿಟ್ಟಿದ್ರು. ಅಂಥ ಮರ್ಯಾದೆ ಕೊಡ್ತಿತ್ತು ಜನ. ಅದು ೧೯೫೪ನೇ ಡಿಸೆಂಬರ್ ಇಪ್ಪತ್ತೈದು ಅಂತ ಮಾತ್ರ ಚೆನ್ನಾಗಿ ನೆನಪಿದೆ. ..... ಅಲ್ಲಿಗೆ ಬಂದಾಗಲೇ ವೀರಣ್ಣಾರು ಬಹುಮಾನ ಕೊಡಬೇಕ್ಕಂತ ತಂದ ಹಾರ-ಪದಾರ್ಥನೆಲ್ಲ ನನ್ನ ಕೊರಳಿಗೆ ಹಾಕಿ ಮೆಚ್ಚಿಕೊಂಡದ್ದು. ಅಂದರೆ ನಾನು ಆಗ ಕಂಪನಿ ಬಿಟ್ಟು ಮತ್ತೆ ಹರಿಕಥೆ ಮಾಡ್ತ ಇದ್ದೆ. ಸುಂದರಮ್ಮ ತೀರಕೊಂಡಿದ್ರು, ಜಯಮ್ಮನೋರು ವೀರಣ್ಣನವರ ಜತೆ ಬಂದಿದ್ರು. ಮತ್ತೆ ಬಾ ಅಂದರೂ ಊರಜನ ಬಿಡಲಿಲ್ಲ ಉಪದೇಶ ಮಾಡ್ತಾರೆ. ಅವರು ಹಾಗೆ ಇರ್ಲಿ ಅಂದ್ರು. ನಂಗೂ ಸಾಕು ಅನಿಸಿತ್ತು. ಆದರೆ ಜವರಾಯ ಇನ್ನೂ ಉಳಿಸಿಟ್ಟ ಸಾಕು ಶಿವಾ, ಸ್ವಾಮಿ ಅಂದ್ರೂ ಬದುಕಿನ್ನಿ."

ಹರಿಕಥೆಮ್ಮನ ಬದುಕು-ಮಾತುಗಳು ನಡುವೆ ನೋವು ಸೋರಿಹೋಗುತ್ತದೆ. ಅದನ್ನೇ ಹಿಡಿದು ಹೇಳಲಾರದ ತಾಯಿ. ಎಲ್ಲದರಲ್ಲೂ ಒಳ್ಳೆಯದನ್ನು ಮಾತ್ರ ಕಾಣುವ ಮನಸ್ಸು. ಈಚೆಗೆ ಆಕೆಗೆ ನೆನಪುಗಳು ಮಾಸುತ್ತಿವೆ.

# ದಲಿತ ಚಳುವಳಿಯಲ್ಲಿ ದಲಿತ ಮಹಿಳೆಯ ಪಾತ್ರದ ಸ್ವರೂಪ

ಡಾ. ಬಿ.ಎಂ. ಪುಟ್ಟಯ್ಯ

'ಕರ್ನಾಟಕದ ದಲಿತ ಚಳುವಳಿಯಲ್ಲಿ ದಲಿತ ಮಹಿಳೆ' ಎಂಬ ವಿಷಯವನ್ನು ಕುರಿತು ಆಲೋಚಿಸುವಾಗ ಮೊದಲಿಗೇ ಮೂರು ಸಮಸ್ಯೆಗಳು ಎದುರಾಗುತ್ತವೆ. ಒಂದು : ಇಂದು ಸಾಮಾನ್ಯವಾಗಿ ಎಲ್ಲಾ ಚಳುವಳಿಗಳು ನಿಸ್ತೇಜಗೊಂಡಿರುವುದು. ಎರಡು : ನಿರ್ದಿಷ್ಟವಾಗಿ ದಲಿತ ಚಳುವಳಿ ದಿಕ್ಕುತಪ್ಪಿ ದಿಕ್ಕಾಪಾಲಾಗಿರುವುದು. ಮೂರು : ಮಹಿಳಾ ಚಳುವಳಿಗಳು ದಲಿತ ಮಹಿಳೆಯ ಅಜೆಂಡಾವನ್ನು ಮುಟ್ಟದೇ ಇರುವುದು. ಈ ಮೂರು ಅಂಶಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ, ಆನಂತರ ಚರ್ಚೆಯನ್ನು ಮುಂದುವರಿಸುತ್ತೇನೆ.

ಸಾಮ್ರಾಜ್ಯಶಾಹಿಯ ಜಾಗತೀಕರಣ ಪ್ರಕ್ರಿಯೆಯು ಸುತ್ತುವರಿದ ಶೋಷಣೆಯಲ್ಲಿ ತೊಡಗಿದೆ. ಇದರ ತೀವ್ರತೆ ಹೆಚ್ಚಾದಷ್ಟೂ ಅದನ್ನು ವಿರೋಧಿಸುವ ಚಳುವಳಿಗಳೂ ತೀವ್ರಗೊಳ್ಳಬೇಕಿತ್ತು. ಆದರೆ ಇದು ಆಗಿಲ್ಲ. ಇದು ವಸ್ತುಸ್ಥಿತಿ. ಈ ವಸ್ತುಸ್ಥಿತಿಗೆ ಏನಿಲ್ಲವೆಂದರೂ ೫೦ ವರುಷಗಳ ಇತಿಹಾಸವಿದೆ. ಎರಡನೇ ಜಾಗತಿಕ ಯುದ್ಧದ ನಂತರ ಸಾಮ್ರಾಜ್ಯಶಾಹಿಯು ತನ್ನ ಸುಲಿಗೆಯ ವಿಧಾನ, ರೂಪ, ತಂತ್ರ ಮುಂತಾದವುಗಳನ್ನು ಬದಲಾಯಿಸಿಕೊಂಡಿತು. ಮುಂದಿನ ದಿನಗಳಲ್ಲಿ ತನ್ನ ವಿರುದ್ಧ ನಡೆಯುವ ಚಳುವಳಿಗೆ ದಾರಿ ತೋರಿಸುವ ಹುನ್ನಾರಗಳನ್ನೂ ಸೃಷ್ಟಿಸಿತು. ಆದರೆ ಆ ಹುನ್ನಾರಗಳನ್ನು ಬಯಲು ಮಾಡುತ್ತಲೇ ಸಾಮ್ರಾಜ್ಯಶಾಹಿಯ ವಿರುದ್ಧವೇ ಅನೇಕ ವೀರೋಚಿತ ಚಳುವಳಿಗಳು ನಡೆದಿವೆ. ಇಂಡಿಯಾದ ಒಂದು ಉದಾಹರಣೆಯ ಮೂಲಕ ಇದನ್ನು ಸ್ಪಷ್ಟಪಡಿಸಬಹುದು. ವಸಾಹತುಶಾಹಿಯು ಎರಡನೇ ಜಾಗತಿಕ ಯುದ್ಧದಲ್ಲಿ ಕಲಿತ ಗುಣಪಾಠದ ಫಲಿತವಾಗಿ ಇಂಡಿಯಾದ ದಲ್ಲಾಳಿಗಳಿಗೆ (ಜಮೀನ್ದಾರಿ ವರ್ಗ ಮತ್ತು ದಲ್ಲಾಳಿ ಬಂಡವಾಳಶಾಹಿ ವರ್ಗ) ಅಧಿಕಾರವನ್ನು ಹಸ್ತಾಂತರಿಸಿತು. ಹೀಗೆ ಹಸ್ತಾಂತರಿಸುವಾಗ ಅದರ ಹಿಂದೆ ಮೂಲಭೂತವಾಗಿ ಎರಡು ಅಪೇಕ್ಷೆಗಳು ಅಡಿಗಿದ್ದವು. ಒಂದು, ವಸಾಹತುಶಾಹಿ ಮತ್ತು ಇಂಡಿಯಾದ ದಲ್ಲಾಳಿ ವರ್ಗಗಳ ನಡುವೆ ಸಾಮರಸ್ಯವನ್ನು ರೂಪಿಸುವುದು. ಎರಡು, ಇಂಡಿಯಾದ ಶೋಷಕ ವರ್ಗ ಮತ್ತು ಶೋಷಿತ ವರ್ಗಗಳ ನಡುವೆ ವರ್ಗಸಾಮರಸ್ಯವನ್ನು ರೂಪಿಸುವುದು. ಆದರೆ ಈ ವರ್ಗಸಾಮರಸ್ಯದ ಕುತಂತ್ರವನ್ನು ಬಯಲು ಮಾಡುವ

ಪರಿಪಕ್ವ ವ್ಯಂಗ್ಯ ಎಂಬಂತೆ ವೀರೋಚಿತವಾದ ತೆಲಂಗಾಣ ಹೋರಾಟ ನಡೆಯಿತು. ಅದರ ಬೆನ್ನ ಹಿಂದೆಯೇ ಶ್ರೀ ಕಾಕುಳಂ ಮತ್ತು ಮಹಾನ್ ನಕ್ಸಲ್‌ಬರಿ ಹೋರಾಟಗಳು ನಡೆದು ಶೋಷಕವರ್ಗದ ವರ್ಗಸಾಮರಸ್ಯದ ಹುಸಿಕಲ್ಪನೆಯನ್ನು ನುಚ್ಚುನೂರು ಮಾಡಿದವು. ಈ ಹೋರಾಟಗಳ ಜ್ವಾಲೆಯ ಬೆಳಕಿನಲ್ಲಿ ಇಂಡಿಯಾದಾದ್ಯಂತ ಅನೇಕ ವರ್ಗ ಹೋರಾಟಗಳು ವೀರೋಚಿತವಾಗಿನಡೆದವು. ಅವುಗಳ ಕಾವು ೭೦-೮೦ರ ದಶಕದವರೆಗೂ ನಿರಂತರವಾಗಿ ಹರಿದು ಬಂತು. ಇಂದಿಗೂ ಅವುಗಳ ತೀವ್ರತೆ ಅಭಿವೃದ್ಧಿಗೊಳ್ಳುತ್ತಿದ್ದು ನಿರೀಕ್ಷಿತ ಪ್ರಮಾಣ ತಲುಪಲಾಗಿಲ್ಲವಷ್ಟೆ.

ಈ ಗುಣಪಾಠಗಳಿಂದ ಚೇತರಿಸಿಕೊಳ್ಳುತ್ತ, ವರ್ಗಸಾಮರಸ್ಯಕ್ಕೆ ಹೊಸ ಹೊಸ ಆಯಾಮಗಳನ್ನು ಅನಂತರದಲ್ಲಿ ನೀಡಲಾಯಿತು. ಇದಕ್ಕೆ ಶೋಷಕ ವರ್ಗದ ಪ್ರಭುತ್ವವು ತನ್ನೆಲ್ಲ ಛಾನಲ್‌ಗಳನ್ನು ಯಶಸ್ವಿಯಾಗಿ ಮತ್ತು ಪರಿಣಾಮಕಾರಿಯಾಗಿ ಬಳಸಿಕೊಂಡಿತು. ಪರಿಣಾಮವಾಗಿ ೯೦ರ ದಶಕದ ಕೊನೆಯ ಹೊತ್ತಿಗೆ ಚಳುವಳಿಗಳಲ್ಲಿ ಒಂದು ಬಗೆಯ ಸಂಘರ್ಷ ಹೀನತೆ ಕವಿಯತೊಡಗಿತು. ಚಲನಶೀಲ ವಸ್ತುಸ್ಥಿತಿಯನ್ನು ತಪ್ಪಾಗಿ ಇಲ್ಲವೆ ವಕ್ರವಾಗಿ ಗ್ರಹಿಸುವುದು, ಶತ್ರುವನ್ನು ಮಿತ್ರನಂತೆಯೂ ಮಿತ್ರನನ್ನು ಶತ್ರುವಿನಂತೆಯೂ ಗ್ರಹಿಸುವುದು ಸಾಮಾನ್ಯವಾಗ ತೊಡಗಿತು. ಪರಿಸ್ಥಿತಿಯನ್ನು ಅತಿ ಅಂದಾಜು ಮಾಡುವುದು ಅದೇ ಕಾಲಕ್ಕೆ ತಮ್ಮ ಶಕ್ತಿಯನ್ನು ಮಿತ ಅಂದಾಜು ಮಾಡುವುದು ನಡೆಯಿತು. ತಕ್ಷಣದ ಹೋರಾಟ ಮತ್ತು ದೀರ್ಘಕಾಲೀನ ಹೋರಾಟಗಳನ್ನು ರೂಪಿಸುವಲ್ಲಿ ಸಮತೋಲನ ಕಡಿಮೆಯಾಯಿತು. ಇದರಿಂದ ಮುಖ್ಯವಾಗಬೇಕಾದುದು ಆನುಷಂಗಿಕವಾಗಿಯೂ, ಆನುಷಂಗಿಕವಾದುದು ಮುಖ್ಯವಾಗಿಯೂ ಕಾಣತೊಡಗಿತು. ಶೋಷಕ ಪ್ರಭುತ್ವವು ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನಗಳಲ್ಲಿ ವಿಕಾರವಾಗಿ ಬೆಳೆಯತೊಡಗಿತು. ಇದರ ವಸ್ತುಸ್ಥಿತಿಯ ಬೆಳವಣಿಗೆಯ ವೇಗವನ್ನು ಅನುಸರಿಸಲು ಚಳುವಳಿಗಳಿಗೆ ಸಾಧ್ಯವಾಗದೇ ಹೋಯಿತು. ಅದೇ ಹೊತ್ತಿಗೆ ಸಾಮ್ರಾಜ್ಯಶಾಹಿಪರ ಶಕ್ತಿಗಳೆಲ್ಲವೂ ಶೋಷಿತರ ವಿಮೋಚನೆಯ ಅಸ್ತ್ರಗಳನ್ನು ಮತ್ತು ಆಲೋಚನೆಗಳನ್ನು ತಮ್ಮ ಕುಲುಮೆಯಿಂದಲೇ ಸೃಷ್ಟಿಸತೊಡಗಿದವು. ಪರಿಣಾಮವಾಗಿ ೯೦ರ ದಶಕದಲ್ಲಿ ನಡೆದ ಕೆಲವು ಚಳುವಳಿಗಳಲ್ಲಿ ಇದರ ಸ್ಪಷ್ಟ ಛಾಯೆಯನ್ನು ಕಾಣಬಹುದು. ಮಹಿಳಾ ಚಳುವಳಿ, ಪರಿಸರ ಚಳುವಳಿ, ಜನಾಂಗೀಯ ಚಳುವಳಿ, ಜಾತಿವಾದಿ ಚಳುವಳಿ ಈ ಮುಂತಾದವುಗಳಲ್ಲಿ ಮೇಲಿನ ಛಾಯೆಯನ್ನು ಕಾಣಬಹುದು. ಆ ಛಾಯೆಯ ಮೂಲಭೂತ ಸ್ವರೂಪವೆಂದರೆ, ಅದು ವಸ್ತುಸ್ಥಿತಿಯನ್ನು ಶೋಷಿತರ ನೆಲೆಯಿಂದ ಹಾಗೂ ರಾಜಕೀಯಾರ್ಥಿಕ ನೆಲೆಯಿಂದ ಗ್ರಹಿಸದಂತೆ ಮಾಡುವುದು.ಇದರೊಳಗೇ ಅಡಗಿರುವ ಇನ್ನೊಂದು ವ್ಯಂಗ್ಯವೆಂದರೆ ಅದು ಪರ್ಯಾಯವನ್ನು ಅಪ್ರಕ್ರಿಯಾತ್ಮಕವಾಗಿ ಗ್ರಹಿಸುವುದಾಗಿದೆ.

ಇನ್ನು ದಲಿತ ಚಳುವಳಿಯ ವಿಷಯಕ್ಕೆ ಬಂದರೆ, ೭೦-೮೦ರ ದಶಕಗಳಲ್ಲಿದ್ದ ಆಶೋತ್ತರಗಳು, ಹಿತಾಶಕ್ತಿಗಳು, ಸಂವೇದನಾಶೀಲ ತೀವ್ರತೆಗಳು ಇಂದು ದುರ್ಬಲವಾಗಿವೆ.

ದಲಿತರ ದೃಷ್ಟಿಕೋನದಲ್ಲಿ ಶೋಷಣೆಯ ಸ್ವರೂಪಗಳೇನು, ಶೋಷಣೆಯ ಸಂಬಂಧದ ವಿನ್ಯಾಸಗಳೇನು, ಮತ್ತು ಪರ್ಯಾಯಗಳೇನು, ಎಂಬ ಮೂಲಭೂತ ಪ್ರಶ್ನೆಗಳನ್ನು ದಲಿತ ಚಳುವಳಿ ಬಗೆಹರಿಸಿಕೊಂಡಿಲ್ಲ. ಚಳುವಳಿಯ ನೇತಾರರು ಬೇರೆ ಬೇರೆ ಚಳುವಳಿಗಳನ್ನು ಕುರಿತು ಅಧ್ಯಯನ ನಡೆಸಿಲ್ಲ. ಆರಂಭಿಕ ಹಂತದಲ್ಲಿ ಹಳ್ಳಿಗಳ ಮಟ್ಟದಲ್ಲಿ, ಕಾರ್ಯಕರ್ತರ ಮಟ್ಟದಲ್ಲಿ ಭಾವನಾತ್ಮಕವೂ, ಸಂವೇದನಾಶೀಲವೂ ಆದ ಹೋರಾಟದ ಸೆಲೆಗಳನ್ನು ದಲಿತ ಚಳುವಳಿ ಹುಟ್ಟುಹಾಕಿದ್ದು ನಿಜ. ಈ ಸ್ವರೂಪ ಯಾವುದೇ ಚಳುವಳಿಗೆ ಆರಂಭಿಕ ಹಂತದಲ್ಲಿ ಒಂದು ಹಂಗಾಮಿ ಸ್ಥಿತಿಯೇ ಹೊರತು ಅದುವೇ ದೀರ್ಘಕಾಲ ಮುಂದುವರಿದುಕೊಂಡು ಬರುವುದಿಲ್ಲ. ಆರಂಭಿಕ ಹಂತದ ಅನಂತರದಲ್ಲಿ ಕಾರ್ಯಕರ್ತರನ್ನು ಸೈದ್ಧಾಂತಿಕವಾಗಿ ಮತ್ತು ಆಚರಣಾತ್ಮಕವಾಗಿ ಅಭಿವೃದ್ಧಿಪಡಿಸುತ್ತಾ, ಅವರಲ್ಲಿ ಸಂಘಟನಾತ್ಮಕ ಬದ್ಧತೆಯನ್ನು ಬಲಪಡಿಸುತ್ತಾ ಸಾಗಬೇಕಿತ್ತು. ಆದರೆ ದಲಿತ ಚಳುವಳಿಯ ಒಳಗೆ ಇದು ನಡೆಯಲೇ ಇಲ್ಲ. ಪರಿಣಾಮವಾಗಿ ಹೋರಾಟದ ತೀವ್ರತೆ ಚಳುವಳಿಯೊಳಗೆ ಒಂದು ಸಂವೇದನಾ ಶೀಲ ಮೂಲಧಾತುವಾಗಿ ಹೆಚ್ಚು ಕಾಲ ಉಳಿಯಲಿಲ್ಲ. ಇತ್ತೀಚೆಗೆ ದಲಿತ ಚಳುವಳಿ ಹಲವಾರು ಹೋಳುಗಳಾಗಿ ಒಡೆದುಹೋಗಿದೆ. ಎಲ್ಲಿಯೂ ಕೂಡ ರಚನಾತ್ಮಕ ಕಾರ್ಯಕ್ರಮಗಳು ಕಾಣುತ್ತಿಲ್ಲ. ಇದಕ್ಕೆ ಹಿನ್ನೆಲೆಯಾಗಿ ಜಾಗತೀಕರಣದ ಪ್ರಕ್ರಿಯೆಯನ್ನು ಅರಿಯುವಲ್ಲಿ ದಲಿತ ಚಳುವಳಿಯ ಸೈದ್ಧಾಂತಿಕತೆ ಸಂಪೂರ್ಣ ವಿಫಲವಾಗಿದೆ.

ಕೊನೆಯದಾಗಿ ಮಹಿಳಾ ಚಳುವಳಿಗಳ ವಿಷಯಕ್ಕೆ ಬಂದರೆ, ಅವು ಯಾವುವೂ ಕೂಡ ಇದುವರೆಗೆ ದಲಿತ ಮಹಿಳೆಯ ಅಜೆಂಡಾಕ್ಕೆ ಬರಲೇ ಇಲ್ಲ. ಅವುಗಳ ಮುಂದಿರುವ 'ಮಹಿಳಾ ಜಗತ್ತೆಂದರೆ' ಅದು ಹೊಟ್ಟೆ ತುಂಬಿರುವ ಮಹಿಳಾ ಜಗತ್ತೇ ಆಗಿದೆ. 'ಪುರುಷಾಧಿಪತ್ಯದ ನೆಲೆ'ಯ ನಿರ್ವಚನೆ ಮತ್ತು ಅದರ ವಿರೋಧದ ನೆಲೆಯ ತಾತ್ವಿಕತೆಗಳಲ್ಲಿ ತಮ್ಮ ಮೂಲ ಬೇರುಗಳನ್ನು ಹೊಂದಿರುವ 'ಸ್ತ್ರೀವಾದ'ವು 'ಯಾವ ವರ್ಗದ ಪುರುಷ' ಎಂಬ ಮುಖ್ಯ ಪ್ರಶ್ನೆಯನ್ನು ಪರಿಗಣಿಸಿಯೇ ಇಲ್ಲ. ಇದರಿಂದಾಗಿ ಮೇಲ್ವರ್ಗದ ಮಹಿಳೆಯರಿಂದಲೂ ದಲಿತ ಮಹಿಳೆಯರ ಮೇಲೆ ಶೋಷಣೆ ನಡೆಯುತ್ತಿದ್ದರೂ, ಈ ವಸ್ತುಸ್ಥಿತಿಯನ್ನು ಪರಿಗಣಿಸುವ ಗೋಜಿಗೆ ಮಹಿಳಾ ಚಳುವಳಿಗಳು ಹೋಗಲಿಲ್ಲ. ಇದರಿಂದಾಗಿ ದಲಿತ ಚಳುವಳಿಗೆ ಸಿಗಬಹುದಾಗಿದ್ದ ಒಂದು ಆಯಾಮ ಸಿಗಲಿಲ್ಲ.

ಇದುವರೆಗಿನ ಚರ್ಚೆಯನ್ನು ಸಾರಾಂಶೀಕರಿಸಿದರೆ, ಚಳುವಳಿಗಳ ತಾತ್ಕಾಲಿಕ ಹಿನ್ನಡೆಯ ಕಾಲದಲ್ಲಿ, ದಲಿತ ಚಳುವಳಿ ದಿಕ್ಕಾಪಾಲಾಗಿರುವ ಸಂದರ್ಭದಲ್ಲಿ, ಮಹಿಳಾ ಚಳುವಳಿ ದಲಿತ ಮಹಿಳೆಯ ಸೊಲ್ಲೆತ್ತಿದಿರುವ ಸನ್ನಿವೇಶದಲ್ಲಿ 'ದಲಿತ ಚಳುವಳಿಯಲ್ಲಿ ದಲಿತ ಮಹಿಳೆ' ಎಂಬ ವಿಷಯವನ್ನು ಕುರಿತು ಆಲೋಚಿಸಬೇಕಾಗಿದೆ. ಮುಂದಿನ ಚರ್ಚೆಗೆ ಮೇಲಿನ ಮೂರು ಅಂಶಗಳು ಹಿನ್ನೆಲೆಯಾಗಿರುತ್ತವೆ ಮತ್ತು ಎಚ್ಚರಿಕೆಯ ನೆಲೆಗಳಾಗಿರುತ್ತವೆ.

ಇನ್ನು ಮುಂದೆ, ದಲಿತ ಚಳುವಳಿಯ ಆಲೋಚನೆಗಳಲ್ಲಿ ಸ್ತ್ರೀ ಮತ್ತು ದಲಿತ ಚಳುವಳಿಯ ಆಚರಣೆಯಲ್ಲಿ ಸ್ತ್ರೀ ಎಂಬ ಎರಡು ಭಾಗಗಳಲ್ಲಿ ಚರ್ಚೆಯನ್ನು ಮುಂದುವರಿಸಲಾಗುವುದು.

ಯಾವುದೇ ಚಳುವಳಿಗೆ ಸಿದ್ಧಾಂತ ಮತ್ತು ಆಚರಣೆ ಎಂಬ ಎರಡು ಆಯಾಮಗಳಿರುತ್ತವೆ. ಇವು ಗುರುತಿಸಬಹುದಾದಂತೆ ಭಿನ್ನವಾಗಿಯೂ, ಗುರುತಿಸಲಾಗದಂತೆ ಅಭಿನ್ನವಾಗಿಯೂ ಇರುತ್ತವೆ. ಯಾವುದೇ ಚಳುವಳಿ ಪ್ರಬುದ್ಧಾವಸ್ಥೆ ತಲುಪಿದಾಗ ಅದಕ್ಕೆ ಶ್ರೀಮಂತವಾದ ಸಿದ್ಧಾಂತವಿರುತ್ತದೆ. ಚಳುವಳಿಯೊಂದು ಪ್ರಬುದ್ಧಾವಸ್ಥೆ ತಲುಪದಿದ್ದಾಗ ಸಿದ್ಧಾಂತವಿರುವುದಿಲ್ಲ, ಬರಿಯ ಆಲೋಚನೆಗಳಿರುತ್ತವೆ. ಆಲೋಚನೆಗಳ ಆಚರಣಾತ್ಮಕ ಪರಿಪಕ್ವತೆಯಲ್ಲಿ ಸಿದ್ಧಾಂತವೊಂದು ರೂಪುಗೊಳ್ಳುತ್ತದೆ. ಈ ಹಿನ್ನೆಲೆಯಲ್ಲಿ ದಲಿತ ಚಳುವಳಿಗೆ ಕೆಲವು ಮುಖ್ಯ ಆಲೋಚನೆಗಳಿವೆ; ಸ್ಪಷ್ಟವಾದ ಸಿದ್ಧಾಂತವಿಲ್ಲ. ಆಲೋಚನೆಗಳು ಆಚರಣೆಯನ್ನು ರೂಪಿಸುತ್ತವೆ; ಆಚರಣೆಯು ಆಲೋಚನೆಗಳನ್ನು ಪ್ರಭಾವಿಸುತ್ತದೆ. ಈ ಪ್ರಕ್ರಿಯೆ ದ್ವಿಮುಖವಾಗಿಯೂ ನಡೆಯುತ್ತದೆ. ಈ ಮೂಲಭೂತ ತಾತ್ವಿಕ ಭಿತ್ತಿಯ ಮೇಲೆ ಮುಂದಿನ ಚರ್ಚೆಯನ್ನು ಬೆಳೆಸಲಾಗುವುದು.

ದಲಿತ ಚಳುವಳಿಯ ಚಿಂತನೆಗಳ ಮೂಲಧಾತು ಸಂಕೀರ್ಣ ನೋವುಗಳ ಗರ್ಭದಿಂದ ಹುಟ್ಟಿದುದು. ಇಲ್ಲಿ ಸ್ತ್ರೀ-ಪುರುಷ ಎಂಬ ಸಂಬಂಧ ಏಕಕಾಲಕ್ಕೆ ಭಿನ್ನವಾಗಿಯೂ ಮತ್ತು ಅಭಿನ್ನವಾಗಿಯೂ ರೂಪುಗೊಂಡಿರುತ್ತದೆ. ಹಾಗಾಗಿ ಮಹಿಳೆಯನ್ನು ಕುರಿತ ದಲಿತ ಚಳುವಳಿಯ ಚಿಂತನೆಗಳ ನೆಲೆಯು ಕೇವಲ ಪುರುಷ ವಿರೋಧಿ ನೆಲೆಯಿಂದ ಹುಟ್ಟಿಲ್ಲ. ಬದಲಾಗಿ ಮಾನವರಿಂದ-ಮಾನವರ ಶೋಷಣೆ ಎಂಬ ಮೂಲ ನೆಲೆಯಿಂದ ಹುಟ್ಟಿದೆ. ಈ ಶೋಷಣೆಯ ಸ್ವರೂಪ ಸಂಕೀರ್ಣವಾದುದು. ವರ್ಗ, ವರ್ಣ, ಜಾತಿ, ಲಿಂಗ ಈ ಮುಂತಾದ ಬಹುಮುಖ ಆಯಾಮಗಳಲ್ಲಿ ಇದು ವಿಸ್ತಾರವಾಗುತ್ತಾ, ಸಂಕೀರ್ಣವಾಗುತ್ತ ಸಾಗುತ್ತದೆ. ಇವುಗಳಲ್ಲಿ ಪ್ರಧಾನ ವೈರುಧ್ಯ ಯಾವುದು ಎಂಬ ಪ್ರಶ್ನೆ ಬಂದಾಗ, ಇಲ್ಲಿ ದೊರಕುವ ಉತ್ತರ ಎಂದರೆ ಅದು ಪ್ರಧಾನ ವೈರುಧ್ಯ ಯಾವುದು ಅಲ್ಲ ಎಂಬುದಾಗಿದೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಇಲ್ಲಿ Gender Issue ಪ್ರಧಾನವಾದುದಲ್ಲ ಎಂಬುದಾಗಿದೆ. ಈ ಮೂಲಭೂತ ತಾತ್ವಿಕತೆಯು ದಲಿತೇತರ ಎಂದು ಕರೆಯಬಹುದಾದ ಸ್ತ್ರೀವಾದಕ್ಕಿಂತ ಭಿನ್ನ ಎಂಬುದನ್ನು ಸಾದರಪಡಿಸುತ್ತದೆ. ದಲಿತ ಚಳುವಳಿಯಲ್ಲಿ ಸ್ತ್ರೀ ಕುರಿತ ಆಲೋಚನೆಗಳು ರೂಪುಗೊಂಡಿರುವ ಮುಖ್ಯ ನೆಲೆಗಳನ್ನು ಅವಲೋಕಿಸಿದರೆ ಮೇಲಿನದರ ಸ್ವರೂಪ ಗೊತ್ತಾಗುತ್ತದೆ.

ಹೋರಾಟದ ಹಾಡುಗಳಲ್ಲಿ ಈ ಕುರಿತ ಹೊಳಹುಗಳು ಪ್ರಕಟವಾಗಿವೆ. ದೈನಂದಿನ ಲಯಗಳ ಸಂವೇದನೆಯಿಂದ ಕೆಲವು ಹಾಡುಗಳು ಹುಟ್ಟಿದರೆ, ಮತ್ತೆ ಕೆಲವು ನಿರ್ದಿಷ್ಟ ಪ್ರಕರಣಗಳ ಹಿನ್ನೆಲೆಯಲ್ಲಿ ಹುಟ್ಟಿವೆ.

**ನಿರ್ದಿಷ್ಟ ಪ್ರಕರಣಗಳ ಹಿನ್ನೆಲೆಯಲ್ಲಿ ಹುಟ್ಟಿದ ಹಾಡುಗಳು.**[೧]

೧. ತಾಳಿ ಕಟ್ಟುವ ಮುನ್ನ ತವರು ತೊರೆಯುವ ಮುನ್ನ ಬಾಳು ಮುಗಿಯಿತೆ ತಂಗಿ ನನ್ನ ಕೂಲಿಯ ತಂಗಿ||

೨. ಕೋಟಿಕೋಟಿ ಬಾಧೆಗಳಲ್ಲಿ ಲಕ್ಷಾಂತರ ನೋವುಗಳಲ್ಲಿ ನೀ ಹುಟ್ಟಿ ಬೆಳೆದೆಯಮ್ಮ ನನ ತಂಗಿ ಅನುಸೂಯ||

**ದೈನಂದಿನ ಲಯದಿಂದ ಹುಟ್ಟಿದ ಹಾಡುಗಳು**

೩. ಓಹೊ ಕಣಗಿಲೆ ಓಹೊ ಕಣಗಿಲೆ ಗಿಡದಡಿ ಲಚ್ಚುಮಮ್ಮೊ ಲಚ್ಚುಮಮ್ಮೊ ನೀನು ಕಣ್ಣೀರು ಹಾಕುವೆ ಯಾತಕಮ್ಮೊ ಯಾತಕಮ್ಮೊ||

ಮೇಲಿನ ಹಾಡುಗಳ ಸಾಲುಗಳಲ್ಲಿ ದಲಿತ ಹೆಣ್ಣು ಅನುಭವಿಸುತ್ತಿರುವ ನೋವುಗಳ ವಸ್ತುಸ್ಥಿತಿ ಪ್ರಕಟವಾಗಿದೆ. ಇಲ್ಲಿಯ ನಿರೂಪಣೆಯ ವಿಧಾನವನ್ನು ಗಮನಿಸಿದರೆ, ವಸ್ತುಸ್ಥಿತಿಯೊಳಗೇ ನಿರೂಪಣೆ ಇಲ್ಲ. ಬದಲಾಗಿ ಅದು ವಸ್ತುಸ್ಥಿತಿಯ ಹೊರಗಿದೆ. ಪರಿಸ್ಥಿತಿಯೊಳಗಿನಿಂದಲೇ ನಿರೂಪಿತವಾಗಿರುವ ಈ ಮುಂದಿನ ಸಾಲುಗಳನ್ನು ಗಮನಿಸಬಹುದು.

ಯಾರಿಗೇಳಲಯ್ಯಾ ಈ ಹೆಣ್ಣು ಗೋಳ ಕಥೆಯಾ ಏನು ಮಾಡಲಯ್ಯಾ ಈ ಹೆಣ್ಣು ಹಾಳ ವ್ಯೆಥೆಯಾ ಯಾರಿಗ್ಹೇಳಿದರು ಬಾಧೆ ತೀರಿಸರು ಯಾರಿಗ್ಹೇಳಲಯ್ಯಾ||

ಪರಿಸ್ಥಿತಿಯ ಒಳಗಿನಿಂದಲೇ ಹುಟ್ಟುವ ಇಲ್ಲಿಯ ನೋವಿನ ಧ್ವನಿಯ ದಲಿತ ಸ್ತ್ರೀಯ ನೋವನ್ನು ಮಾತ್ರವಲ್ಲದೆ ಸಾಮಾನ್ಯ ಸ್ತ್ರೀಯ ನೋವನ್ನೂ ಪ್ರತಿನಿಧಿಸುವಂತಿದೆ. ಇಷ್ಟೊಂದು ಧ್ವನಿ ವೈಶಾಲ್ಯತೆಯನ್ನು ಪಡೆದೂ ಕೂಡ, ಕೂಲಿ ಮಾಡುವ ಸ್ತ್ರೀಯ ನೋವಿಗೆ ಪ್ರಧಾನ ಒತ್ತು ಈ ಹಾಡಿನ ಕೆಲವು ಸಾಲುಗಳಲ್ಲಿವೆ.

ಪುರಾಣ ಕತೆಯಲಿ ದ್ರೌಪದಿಗಾಸರೆ ಕೃಷ್ಣ ಬಂದನಲ್ಲೊ
ಕೂಲಿ ಹೆಣ್ಣಾಳ ಮಾನ ಉಳಿಸಲು ಯಾರು ಇಲ್ಲವಲ್ಲೋ||

ಹೆಣ್ಣಿನ ಜೈವಿಕ ಸಂಬಂಧಿ ಸಂಗತಿಗಳನ್ನು ಸಾಮಾನ್ಯೀಕರಿಸಬಹುದೇನೋ. ಆದರೆ ಸಾಮಾಜಿಕ-ರಾಜಕೀಯ-ಆರ್ಥಿಕ ನೆಲೆಯ ಸಂಗತಿಗಳು ಶ್ರೇಣೀಕರಣ ವ್ಯವಸ್ಥೆಯಲ್ಲಿ ಬೇರೆ ಬೇರೆಯಾಗುತ್ತಾ ಹೋಗುವುದರಿಂದ ಅವನ್ನು ಸಾಮಾನ್ಯೀಕರಿಸಲು ಬರುವುದಿಲ್ಲ. ದಲಿತ ಸ್ತ್ರೀಗೆ ಸಂಬಂಧಿಸಿದ ಸಂಗತಿಗಳು ಪ್ರಧಾನವಾಗಿ ಈ ನೆಲೆಯನ್ನೇ ನೆಮ್ಮಿವೆ.

ಈ ಮೊದಲು ಗುರುತಿಸಿದ ಅಂಶವೊಂದನ್ನು ಇಲ್ಲಿ ಪುನಃ ಚರ್ಚೆಗೆತ್ತಿಕೊಳ್ಳಬಹುದು. ಅದು ನೋವು ಸಂಕಟ ಮುಂತಾದ ಸ್ಥಿತಿಯೊಳಗಿನಿಂದಲೇ ಆ ಕುರಿತ ಧ್ವನಿ ಹೊರಡುವುದು ಮತ್ತು ಹೊರಗಿನಿಂದ ಪ್ರಕಟವಾಗುವುದು. ಇದು ಈ ರೀತಿ ವಿಭಾಗ ಮಾಡಿ ಚರ್ಚಿಸಲು ತುಂಬಾ ಚನ್ನಾಗಿ ಕಾಣುತ್ತದೆ. ಯಾಕೆಂದರೆ ಇದು ಆಚರಣಾರಹಿತ ಬೌದ್ಧಿಕ ಚಟುವಟಿಕೆಯ

ಶೈಲಿಯ ವಿಧಾನ. ಆದರೆ ಹೋರಾಟದ ಹಾಡುಗಳು ಮೂಲಭೂತವಾಗಿ ಈ ವಿಧಾನವನ್ನೇ ವಿರೋಧಿಸುತ್ತವೆ. ಕಾರಣ ಹೋರಾಟದ ಹಾಡುಗಳಿಗೆ ಏನು ಪ್ರಕಟವಾಗುತ್ತಿದೆ ಎಂಬುದು ಮುಖ್ಯವೇ ಹೊರತು, ಹೇಗೆ ಪ್ರಕಟವಾಗುತ್ತಿದೆ ಎಂಬುದು ಮುಖ್ಯವಲ್ಲ.

ನಿರ್ದಿಷ್ಟ ಪ್ರಕರಣವನ್ನು ಕುರಿತು ರಚನೆಯಾದ ಹಾಡುಗಳು ಮತ್ತು ದೈನಂದಿನ ಲಯದ ಆಧಾರದಲ್ಲಿ ರಚನೆಯಾದ ಹಾಡುಗಳು ಎಂಬುದಾಗಿ ಈ ಮೊದಲು ವಿಂಗಡಿಸಲಾಯಿತು. ನಿರ್ದಿಷ್ಟ ಪ್ರಕರಣದ ಹಿನ್ನೆಲೆಯಲ್ಲಿ ರಚನೆಯಾದ ಹಾಡುಗಳು ಕೇವಲ ಸಂದರ್ಭಬದ್ಧವೆಂತಲೂ, ಅವು ಅದರಾಚೆಗೆ ಸ್ತ್ರೀಯ ನೋವಿಗೆ ಮಿಡಿಯಲಾರವೆಂದು ಸರಳೀಕರಿಸಿಬಿಡಬಹುದು. ಈ ಸರಳೀಕರಣ ವಿಧಾನವನ್ನು ಹೋರಾಟದ ಹಾಡುಗಳು ಒಪ್ಪುವುದಿಲ್ಲ. ಸಮಾಜದಲ್ಲಿ ಸ್ತ್ರೀಗೆ ಮತ್ತು ದಲಿತಸ್ತ್ರೀಗೆ ಶೋಷಣೆ ಇರುವ ತನಕ ಅಂಥ ಹಾಡುಗಳು ಸಂದರ್ಭ ಬದ್ಧತೆಯನ್ನು ನಿರಾಕರಿಸುತ್ತಲೇ ಇರುತ್ತವೆ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ದಲಿತ ಸ್ತ್ರೀಯ ನೋವು ಮತ್ತು ಶೋಷಣೆಗೆ ಒಂದು ಪ್ರಕ್ರಿಯೆ ಇದೆ ಎಂಬುದಾಗಿದೆ.

ಮೇಲಿನ ಹಾಡುಗಳಲ್ಲಿ ವಿಷಾದ ಅಥವಾ ಅಸಹಾಯಕತೆ ಇದೆ ಎಂದು ಮೇಲ್ನೋಟಕ್ಕೇ ಅನಿಸಿಬಿಡುತ್ತದೆ. ಆದರೆ ಹೋರಾಟದ ಹಾಡುಗಳ ಪ್ರಧಾನ ಒಲವು ಇದಲ್ಲ. ಮುಂದಿನ ಹಾಡನ್ನು ಗಮನಿಸಿ

ಸೆರಗು ಸೊಂಟಕೆ ಸುತ್ತಿಕೋ ತಂಗ್ಯವ್ವ
ಕುಡುಗೋಲು ಕೈಗೆತ್ತಿಕೋ ತಂಗ್ಯವ್ವ॥

ಪರಿಸ್ಥಿತಿಯನ್ನು ಬಿಂಬಿಸುವುದು ಮತ್ತು ಪರ್ಯಾಯವನ್ನು ರೂಪಿಸುವುದು ಈ ಹಾಡುಗಳ ಪ್ರಧಾನ ಜಾಯಮಾನ. ಮಾಡುವುದು ಮತ್ತು ಆಗುವುದು ಎರಡೂ ಜೊತೆಜೊತೆಯೊಲ್ಲೇ ನಡೆಯುವ ಪ್ರಕ್ರಿಯೆಗಳು. ಇರುವಿಕೆಯ ಸಮಸ್ಯೆಯನ್ನು ಮತ್ತು ಆಗುವಿಕೆಯ ಸವಾಲನ್ನು ಒಟ್ಟೊಟ್ಟಿಗೇ ಇಲ್ಲಿಯ ಹಾಡುಗಳು ಬೆಸೆಯುತ್ತವೆ. ಅಥವಾ ಈ ಎರಡೂ ಅಂಶಗಳು ಪ್ರತ್ಯೇಕ ಪ್ರತ್ಯೇಕವಾಗಿ ನಿಲ್ಲದೆ ಒಂದರೊಳಗೊಂದು ಕೂಡಿರುತ್ತವೆ.

ರಾಜಕೀಯಾರ್ಥಿಕ ನೆಲೆಗಳಲ್ಲಿ ದಲಿತ ಚಳುವಳಿಯ ಚಿಂತನೆಗಳು ಸ್ತ್ರೀಯನ್ನು ಪರಿಭಾವಿಸುತ್ತವೆ ಎಂಬ ಅಂಶವನ್ನು ಈ ಹಿಂದೆ ಹೇಳಲಾಯಿತು. 'ಸ್ತ್ರೀಪರ' ಎಂದು ಕರೆಯಲಾಗುವ ನೆಲೆಯಿಂದ ದಲಿತ ಮಹಿಳಾ ಚಿಂತನೆಗಳು ಹುಟ್ಟುವುದಿಲ್ಲ.

ತುರ್ತು ಪರಿಸ್ಥಿತಿ ಕರಾಳ ರಾಣಿಯ ಕಥೆಯನು ಹೇಳ್ತಿವಿ
ಬಡವರ ಸಾವಿರ ಸಂಕಟವನ್ನು ಜೊತೆಯಲಿ ಹೇಳ್ತಿವಿ॥

ಇಂಡಿಯಾದ ಶೋಷಕ ಪ್ರಭುತ್ವ ಒಬ್ಬ ಮಹಿಳೆಯ ಮೂಲಕ ಜಾರಿ ಮಾಡಿದ ತುರ್ತು ಪರಿಸ್ಥಿತಿಯಿಂದ ಇಡೀ ಬಡವರ್ಗದ ಮೇಲಾದ ಪರಿಣಾಮ ಘೋರವಾದುದು. ಘೋಷಿತ

ತುರ್ತುಪರಿಸ್ಥಿತಿಯ ಪರಿಣಾಮ ಒಂದಾದರೆ ಅಘೋಷಿತ ತುರ್ತುಪರಿಸ್ಥಿತಿಯ ಪರಿಣಾಮ ಮತ್ತೊಂದು. ಇದು ಜಾರಿಯಾಗುವುದು ಹೆಣ್ಣಿನ ಮೂಲಕವಾದರೇನು-ಗಂಡಿನ ಮೂಲಕವಾದರೇನು? ಬಡ, ಹೆಣ್ಣುಗಳ ಮೇಲಾಗುವ ಪರಿಣಾಮ ಮಾತ್ರ ಒಂದೆ.

ಮೇಲಿನ ಅಷ್ಟೂ ಹಾಡುಗಳನ್ನು ರಚಿಸಿದವರು ದಲಿತ ಸ್ತ್ರೀಯರೊ-ಪುರುಷರೊ, ಎಂದು ಕೇಳಿದರೆ, ಅವನ್ನು ರಚಿಸಿದವರೆಲ್ಲರೂ ಪುರುಷರು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅವನ್ನು ರಚಿಸಿದವರು ದಲಿತ ಸ್ತ್ರೀಯರೂ ಅಲ್ಲ, ದಲಿತ ಪುರುಷರೂ ಅಲ್ಲ. ಅವನ್ನು ರಚಿಸಿದುದು ದಲಿತ ಹೋರಾಟ. ಸ್ತ್ರೀಯನ್ನು ಕುರಿತ ದಲಿತ ಚಳುವಳಿಯ ಚಿಂತನೆಯ ಶೋಷಿತ ನೆಲೆಯಲ್ಲಿ ಸ್ತ್ರೀ-ಪುರುಷರನ್ನು ಭಿನ್ನ ಮಾಡುವುದಿಲ್ಲ; ಅದು ಸಹಜ ಅಭಿನ್ನತೆಯನ್ನು ಪರಿಭಾವಿಸುತ್ತದೆ. ಹಾಗಾಗಿ ಹೆಣ್ಣಿನ ನೋವನ್ನು ಗಂಡೂ ಹಾಡಬಹುದು; ಗಂಡಿನ ನೋವನ್ನು ಹೆಣ್ಣೂ ಹಾಡಬಹುದು; ಇಲ್ಲವೆ ಇಬ್ಬರ ನೋವನ್ನು ಇಬ್ಬರೂ ಹಾಡಬಹುದು.

ದಲಿತ ಸಾಹಿತ್ಯದಲ್ಲಿ ಮಹಿಳೆಯನ್ನು ಕುರಿತ ಒಲವು ಅದರ ಮುಖ್ಯ ಧಾತುಗಳಲ್ಲೊಂದು. ಇದು ನಾನಾ ಆಯಾಮಗಳಲ್ಲಿ ಮೈಯೊಡೆದು ಬೆಳೆದಿದೆ. ದೇವನೂರ ಮಹಾದೇವ ಅವರ 'ಮಾರಿಕೊಂಡವರು' ಕತೆಯ ಈ ಸಾಲುಗಳನ್ನು ಗಮನಿಸಬೇಕು.

'ಕಿಟ್ಟಪ್ಪ ಕೊಟ್ಟಿರುವ ರಗ್ಗು ಲಚಮೀನ ಕವಿಚಿಕೊಂಡಿದೆ. ಕಿಟ್ಟಪ್ಪ ಕಟ್ಟಿಸಿರುವ ಮನೆ ಇಬ್ಬರನ್ನೂ ಕವಿಚಿಕೊಂಡಿದೆ'[೨].

ಶೋಷಣೆಯ ಲೈಂಗಿಕ ಆಯಾಮ ಮತ್ತು ಆರ್ಥಿಕ ಆಯಾಮಗಳು ಒಂದನ್ನೊಂದು ಅವಲಂಬಿಸುತ್ತಾ, ಒಂದನ್ನೊಂದು ಪ್ರಭಾವಿಸುತ್ತ ಸಾಗುತ್ತವೆ. ಇದರಲ್ಲಿ ಹೆಣ್ಣು-ಗಂಡಿನ ಸ್ಥಿತಿಗಳು ಒಟ್ಟಿಗೇ ಇರುವುದೊಂದು ವ್ಯಂಗ್ಯ. ಲೈಂಗಿಕ ಶೋಷಣೆ ಎಂಬುದು ಇಲ್ಲಿ ಕೇವಲ ಹೆಣ್ಣಿನ ಮೇಲೆ ಮಾತ್ರ ನಡೆಯುವ ಕ್ರಿಯೆ ಎಂದು ಸರಳೀಕರಿಸುವಂತಿಲ್ಲ. ಯಾಕೆಂದರೆ ಇದು ಗಂಡಿನ(ಗಂಡನ) ಮನಸ್ಸಿನ ಮೇಲೆ ಅಗಾಧವಾದ ಪರಿಣಾಮವನ್ನು ಬೀರುತ್ತದೆ. ಅಂದರೆ ಎಲ್ಲ ಬಗೆಯ ಶೋಷಣೆಗೆ ಹೆಣ್ಣು-ಗಂಡು ಒಟ್ಟಿಗೇ ಬಲಿಯಾಗುವುದು ಇಲ್ಲಿಯ ದುರಂತ. ಇದರಿಂದಾಗಿ ಹೆಣ್ಣಿನ ದುರಂತ ಸ್ಥಿತಿಯೊಂದನ್ನು ಗಂಡಿನ ದುರಂತ ಸ್ಥಿತಿಯಿಂದ ಬೇರ್ಪಡಿಸಿ ನೋಡುವುದು ತುಂಬಾ ಯಾಂತ್ರಿಕವಾಗುತ್ತದೆ. ದಲಿತ ಸಾಹಿತ್ಯವನ್ನು ದಲಿತ ಚಳುವಳಿಯಿಂದ ಪ್ರತ್ಯೇಕಿಸಿ ನೋಡಲು ಬರುವುದಿಲ್ಲ. ಆದರಿಂದಾಗಿ ಮೇಲಿನ ಒಂದು ಸೂಕ್ಷ್ಮ ಉಲ್ಲೇಖವನ್ನು ಕುರಿತು ಚರ್ಚಿಸಬೇಕಾಯ್ತು. ಮೇಲಿನ ಅಂಶದ ಚರ್ಚೆಯನ್ನು ವಿವಿಧ ಆಯಾಮಗಳಲ್ಲಿ ಮುಂದುವರಿಸಬಹುದು. ಆದರೆ ಇದನ್ನು ಇಲ್ಲಿಗೆ ನಿಲ್ಲಿಸಿ ಬೇರೆ ಆಯಾಮವನ್ನು ಚರ್ಚೆಗೆತ್ತಿಕೊಳ್ಳಲಾಗುವುದು.

ಈಗ ದಲಿತ ಚಳುವಳಿಯ ಆಚರಣೆಯಲ್ಲಿ- ಸ್ತ್ರೀ ಎಂಬುದನ್ನು ಚರ್ಚೆಗೆತ್ತಿ ಕೊಳ್ಳಬಹುದು. ದಲಿತ ಚಳುವಳಿಯಲ್ಲಿ ಮಹಿಳೆಯರಿದ್ದಾರೆಯೆ? ಅದರಲ್ಲೂ ದಲಿತ

ಮಹಿಳೆಯರಿದ್ದಾರೆಯೆ? ಇದು ಇಲ್ಲಿಯ ಮೂಲಭೂತ ಪ್ರಶ್ನೆ. ಈ ಪ್ರಶ್ನೆಯನ್ನು ಚರ್ಚೆಗೆತ್ತಿಕೊಳ್ಳುವುದಕ್ಕೆ ಹಿನ್ನೆಲೆಯಾಗಿ, ಈ ಲೇಖನದ ಆರಂಭದಲ್ಲಿ ಚರ್ಚಿಸಿದ ಮೂರು ಅಂಶಗಳಲ್ಲಿ ಒಂದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಅದು, ಇಂದು ದಲಿತ ಚಳುವಳಿ ದಿಕ್ಕೆಟ್ಟು ದಿಕ್ಕಾಪಾಲಾಗಿರುವುದರ ಚರ್ಚೆ. ದಲಿತ ಚಳುವಳಿಯ ಆರಂಭಿಕ ಹಂತದಲ್ಲಿ ಮಹಿಳೆಯ ಪಾತ್ರವನ್ನು ಕುರಿತು ಚರ್ಚೆ ನಡೆಸಿದ್ದರೆ ಬೇರೊಂದು ಆಯಾಮದಲ್ಲಿ ಚರ್ಚೆ ಬೆಳೆಯುತ್ತಿತ್ತು. ಆದರೆ ಇಂದು ದಲಿತ ಚಳುವಳಿ ಅಸಹಾಯಕತೆಯ ಸ್ಥಿತಿಯಲ್ಲಿರುವಾಗ, ಅದರಲ್ಲಿ 'ದಲಿತ ಮಹಿಳೆಯ ಪಾತ್ರ' ಎಂಬ ವಿಷಯವನ್ನು ಕುರಿತು ಚರ್ಚಿಸಲು ಅನೇಕ ಮಿತಿಗಳು ತಂತಾನೇ ಬಂದು ಬಿಡುತ್ತವೆ. ಇಂಥ ಸ್ಥಿತಿಯಲ್ಲಿ ಇಡೀ ದಲಿತ ಚಳುವಳಿ ನಮ್ಮ ಅರಿವಿಗೇ ಬಾರದಂತೆ ನಮ್ಮಿಂದಲೇ ಮಿತ ಅಂದಾಜಿಗೆ ಒಳಗಾಗಿ ಬಿಡಬಹುದು. ಆದರೆ ರಚನಾತ್ಮಕ ವಿಮರ್ಶೆಯನ್ನು ಈ ಕಾರಣಕ್ಕಾಗಿ ಬಿಟ್ಟುಕೊಡಬೇಕೆಂದು ಇಲ್ಲಿ ಹೇಳುತ್ತಿಲ್ಲ. ಆರಂಭಿಕ ಹಂತದ ದಲಿತ ಚಳುವಳಿಯಲ್ಲಿದ್ದ ಉತ್ಸಾಹಗಳು, ಒಲವುಗಳು, ಬದ್ಧತೆಗಳು ಇಂದು ರೋಮಾಂಚನವನ್ನುಂಟುಮಾಡುತ್ತವೆ. ಅಂದಿನ ಆ ಸ್ಥಿತಿ ಇಂದು ಚಳುವಳಿಯಲ್ಲಿಲ್ಲ. ಈ ಚಾರಿತ್ರಿಕ ಬೆಳವಣಿಗೆಯ ಏರುಪೇರುಗಳನ್ನು ಗಂಭೀರವಾಗಿ ಗಮನದಲ್ಲಿಟ್ಟುಕೊಂಡು, ದಲಿತ ಚಳುವಳಿಯ ಹಿನ್ನೆಡೆಯನ್ನು ಉಳಿದೆಲ್ಲಾ ಚಳುವಳಿಗಳ ಸಾಮಾನ್ಯವಾದ ತಾತ್ಕಾಲಿಕ ಹಿನ್ನೆಲೆಯ ವಿಶಾಲ ವ್ಯಾಪ್ತಿಯಲ್ಲಿ ಗ್ರಹಿಸುತ್ತ ಇಲ್ಲಿನ ಚರ್ಚೆಯನ್ನು ಬೆಳೆಸಲಾಗುವುದು.

ದಲಿತ ಚಳುವಳಿಯಲ್ಲಿ ದಲಿತ ಮಹಿಳೆಯರು ಇದ್ದಾರೆಯೆ? ಎಷ್ಟಿದ್ದಾರೆ? ಎಂದು ಹೇಳಿದರೆ, 'ಮಹಿಳೆಯರು ಇಲ್ಲ' ಎಂಬುದಾಗಿ ನೇರವಾಗಿ ಮತ್ತು ಸುಲಭವಾಗಿ ಉತ್ತರಿಸಿಬಿಡಬಹುದು. ಯಾಕಿಲ್ಲ? ಎಂದು ಕೇಳಿಕೊಂಡಾಗ ಮಾತ್ರ ಚರ್ಚೆ ಬೇರೆ ಬೇರೆ ಆಯಾಮಗಳಲ್ಲಿ ಟಿಸಿಲೊಡೆದು ಬೆಳೆಯುತ್ತದೆ. ಈ ಚರ್ಚೆಯನ್ನು ಬೆಳೆಸುವುದಕ್ಕೆ ಮೊದಲು ಇತರೆ ಚಳುವಳಿಗಳ ಸ್ಥಿತಿಯನ್ನು ಗಮನಿಸಬೇಕು. ರೈತ ಚಳವಳಿ, ಕಾರ್ಮಿಕ ಚಳುವಳಿ ಮುಂತಾದುವುಗಳ ಸ್ಥಿತಿ ಇಂದು ಆಶಾದಾಯಕವಾಗಿಲ್ಲ. ಮತ್ತು ಅಲ್ಲಿಯೂ ಕೂಡ ಮಹಿಳಾ ಸಮಸ್ಯೆಯನ್ನು ಪ್ರತ್ಯೇಕವಾಗಿ ಪರಿಗಣಿಸಿಲ್ಲ. ಪ್ರತ್ಯೇಕವಾದ ಮಹಿಳಾ ಯೂನಿಟ್ ಇಲ್ಲ. ಬಂಡಾಯ ಚಳುವಳಿಯಲ್ಲೂ ಕೂಡ ಇದೇ ಸ್ಥಿತಿ ಇದೆ. ಇದರಿಂದ ಒಟ್ಟಾಗಿ ಹೊಳೆಯುವ ಅಂಶವೆಂದರೆ, ಕರ್ನಾಟಕದಲ್ಲಿರುವ ಯಾವುದೇ ಚಳುವಳಿ ಮಹಿಳಾ ಪಾತ್ರವನ್ನು ಪ್ರಧಾನವಾಗಿ ಪರಿಗಣಿಸಿಲ್ಲ ಎಂಬುದು. 'ದಲಿತ ಚಳುವಳಿಯಲ್ಲಿ ದಲಿತ ಮಹಿಳೆಯರಿಲ್ಲ' ಎಂಬ ಹೇಳಿಕೆಯಿಂದಾಗಿ ದಲಿತ ಚಳುವಳಿಯನ್ನು ಮಿತ ಅಂದಾಜು ಮಾಡಿದಂತಾಗುತ್ತದೆ ಎಂಬ ಮಾತನ್ನು ಈ ಹಿನ್ನೆಲೆಯಲ್ಲೇ ಹೇಳಿದ್ದು.

ಹಾಗಾದರೆ ಮತ್ಯಾವ ಚಳುವಳಿಯಲ್ಲಿ ಮಹಿಳೆಯ ಪಾತ್ರ ಮುಖ್ಯವಾಗಿದೆ ಎಂಬುದನ್ನು ಸ್ಪಷ್ಟಮಾಡಿಕೊಳ್ಳಬೇಕು. ಆ ತಿಳುವಳಿಕೆಯ ಬೆಳಕಿನಿಂದ ಈ ಚಳುವಳಿಗಳನ್ನು ವಿಮರ್ಶಿಸಲು ಅನುಕೂಲವಾಗುತ್ತದೆ. ನಕ್ಸಲೀಯ ಚಳುವಳಿಯಲ್ಲಿ ಮಹಿಳೆಯ ಪಾತ್ರ ಪುರುಷರಷ್ಟೇ

ಮುಖ್ಯವಾಗಿದೆ. ಆ ಚಳುವಳಿಯಲ್ಲಿ ಬೆಂಬಲಿಗರಾಗಿ, ಅಲ್ಪಾವಧಿ ಕಾರ್ಯಕರ್ತೆಯರಾಗಿ, ಪೂರ್ಣಾವಧಿ ಕಾರ್ಯಕರ್ತೆಯರಾಗಿ ಮತ್ತು ಡೆನ್ ಕೀಪರ್ ಆಗಿ ಮಹಿಳಾ ಕಾಮ್ರೇಡ್‌ಗಳ ಪಾತ್ರ ಅತಿ ಮುಖ್ಯವಾಗಿದೆ. ಇದಲ್ಲದೆ ಬುದ್ಧಿಜೀವಿ ಗುಂಪಿನಲ್ಲಿ, ಕಲಾತಂಡದಲ್ಲಿ, ಜನತಾ ಕ್ರಾಂತಿಕಾರಿ ಸೈನ್ಯದಲ್ಲಿ, ಸಾಹಿತ್ಯ ಪ್ರಕಾಶನ ಸಂಸ್ಥೆಗಳಲ್ಲಿ ಮಹಿಳಾ ಕಾಮ್ರೇಡ್‌ಗಳಿದ್ದಾರೆ. ಈ ವಿಭಾಗಗಳನ್ನೇ ಗಮನಿಸಿದರೆ ಸಾಕು, ಕರ್ನಾಟಕದ ಪ್ರಗತಿಪರ ಎಂದು ಕರೆಯಲಾಗುವ ಯಾವುದೇ ಚಳುವಳಿಯಲ್ಲಿ ಇವು ಇಲ್ಲ. ಸಿದ್ಧಾಂತ, ಆಚರಣೆ ಮತ್ತು ರಚನಾತ್ಮಕತೆಯಲ್ಲಿ ನಕ್ಸಲೀಯ ಚಳುವಳಿ ಉಳಿದೆಲ್ಲ ಪ್ರಗತಿಪರ ಚಳುವಳಿಗಳಿಗಿಂತ ಮುಂದಿದೆ. ಇದರಿಂದಾಗಿ ಅಲ್ಲಿ ಮಹಿಳೆಯರ ಪಾತ್ರ ನಗಣ್ಯವಾಗಿಲ್ಲ. ಯಾವ ಚಳುವಳಿಯಲ್ಲಿ ಮಹಿಳೆಯರ ಪಾತ್ರ ನಗಣ್ಯವಾಗಿರುತ್ತದೋ ಆ ಚಳುವಳಿ ಪ್ರಬುದ್ಧಾವಸ್ಥೆ ತಲುಪಿಲ್ಲವೆಂದೇ ಹೇಳಬೇಕು.

ನಕ್ಸಲೀಯ ಚಳುವಳಿಯಲ್ಲಿ ಇರುವ ಹಾಗೆ ಬೇರೆ ಯಾವುದೇ ಪ್ರಗತಿಪರ ಚಳುವಳಿಯಲ್ಲಿ ಬೇರೆ ಬೇರೆ ವಿಭಾಗಗಳಿಲ್ಲ. ಹಾಗಾಗಿ ಚಳುವಳಿಯೊಂದರಲ್ಲಿ ಮಹಿಳೆ ಇಲ್ಲ ಎಂದು ಹೇಳುವಾಗ, ಚಳುವಳಿಯ ಯಾವ ವಿಭಾಗದಲ್ಲಿ ಇಲ್ಲ ಎಂದು ಕೇಳಬೇಕಾಗುತ್ತದೆ. ಇದು ಚಳುವಳಿಯ ದೃಷ್ಟಿಕೋನದಲ್ಲಿ ಚಳುವಳಿಯನ್ನು ಅವಲೋಕಿಸುವ ವಿಮರ್ಶಿಸುವ ವಿಧಾನ. ಸರಿ, ಚಳುವಳಿಯಲ್ಲಿ ತುಂಬಾ ಸಂಘಟನಾತ್ಮಕವಾದ ವಿಭಾಗಗಳೇ ಇಲ್ಲವೆಂದಾದಾಗ ಪ್ರಶ್ನೆಯ ಮಾದರಿಯೇ ದುರ್ಬಲವಾಗುತ್ತದೆ. ಉಳಿದೆಲ್ಲ ಪ್ರಗತಿಪರ ಚಳುವಳಿಗಳಿಗೂ ಈ ಮಾತು ಅನ್ವಯಿಸುತ್ತದೆ. ಪ್ರಶ್ನೆಯೇ ದುರ್ಬಲವಾದಾಗ, ಅದನ್ನು ಕುರಿತ ಚರ್ಚೆಯೂ ದುರ್ಬಲವಾಗುವ ಅಪಾಯವಿರುತ್ತದೆ. ಈ ಎಚ್ಚರಿಕೆಯನ್ನು ಗಮನದಲ್ಲಿಟ್ಟುಕೊಂಡೇ ಇಲ್ಲಿನ ಚರ್ಚೆಯನ್ನು ಬೆಳೆಸಬೇಕಾಗಿದೆ.

ದಲಿತ ಚಳುವಳಿಯಲ್ಲಿ ಸಂಘಟನ್ಮಾಕ ವಿಭಾಗಗಳು ಇಲ್ಲ. ಇಂದು ಈ ಚಳುವಳಿಯಲ್ಲಿ ದಲಿತ ಮಹಿಳೆಯರ ಪಾತ್ರ ಪರಿಣಾಮಕಾರಿಯಾಗಿ ಇಲ್ಲ. ಆದರೆ ಚಳುವಳಿಯ ಆರಂಭಿಕ ಹಂತದಿಂದ ಇಲ್ಲಿಯವರೆಗಿನ ಬೆಳವಣಿಗೆಯನ್ನು ಗಮನಿಸಿದರೆ, ದಲಿತ ಮಹಿಳೆಯರ ಪಾತ್ರ ಬೇರೆ ಬೇರೆ ಹಂತಗಳಲ್ಲಿ ಇತ್ತು ಎಂಬುದು ಸ್ಪಷ್ಟ. ಅದರ ಸ್ವರೂಪವನ್ನು ಖಚಿತಮಾಡಿಕೊಳ್ಳಬೇಕು.

ಚಳುವಳಿಯ ಆರಂಭಿಕ ಹಂತದಲ್ಲಿ ಪ್ರಕರಣದ ಆಧಾರದ ಮೇಲೆ, ಭಾವನಾತ್ಮಕವಾಗಿ ಜನರನ್ನು ಸಂಘಟಿಸಿ ಹೋರಾಟಕ್ಕೆ ಇಳಿಸಲಾಯಿತು. ಅದು ದಲಿತರ ಮೇಲೆ ನಡೆದ ಹಲ್ಲೆ, ದೌರ್ಜನ್ಯ, ಕೊಲೆ, ಮಾನಭಂಗ, ಬಹಿಷ್ಕಾರ ಮುಂತಾದುವು. ಇವುಗಳಿಗೆ ಪ್ರತಿಭಟನೆ ರೂಪದಲ್ಲಿ ಚಳುವಳಿಯು ಕಾರ್ಯಕ್ರಮಗಳನ್ನು ರೂಪಿಸುತ್ತಿತ್ತು. ಅಂತಹ ಕಾರ್ಯಕ್ರಮಗಳು ಪ್ರತಿಭಟನೆ, ಪ್ರತಿಭಟನಾ ಮೆರವಣಿಗೆ, ಬಹಿರಂಗ ಸಭೆ, ಧರಣಿ ಸತ್ಯಾಗ್ರಹ, ಸಮಾವೇಶ ಮತ್ತು ಜಾಥಾ ಮುಂತಾದುವುಗಳ ರೂಪದಲ್ಲಿ ನಡೆಯುತ್ತಿದ್ದವು. ಇದರ ಜೊತೆಗೆ ಅಧ್ಯಯನ ಶಿಬಿರಗಳೂ ನಡೆಯುತ್ತಿದ್ದವು. ಈ ಎಲ್ಲಾ ಕಾರ್ಯಕ್ರಮಗಳಲ್ಲಿ

ದಲಿತ ಮಹಿಳೆಯರು ನೇರವಾಗಿ ಭಾಗವಹಿಸಿದ್ದಾರೆ. ಪ್ರಕರಣ(Issue)ದ ಸ್ವರೂಪಕ್ಕೆ ಅನುಗುಣವಾಗಿ ಭಾಗವಹಿಸುವಿಕೆಯ ಪ್ರಮಾಣ ಇರುತ್ತಿತ್ತು. ದಲಿತ ಮಹಿಳೆಯರ ಮೇಲೆ ನಡೆಯುತ್ತಿರುವ ಶೋಷಣೆಯ ನಾನಾ ರೂಪಗಳನ್ನು ಚಳುವಳಿಯು ಮನವರಿಕೆ ಮಾಡಿದೆ. ಅವರಲ್ಲಿ ಸ್ವಾಭಿಮಾನ, ಪ್ರತಿಭಟನೆ ಮತ್ತು ಹೋರಾಟದ ಬೀಜಗಳನ್ನು ಬಿತ್ತಿದೆ. ಈ ಮೂಲಕ ದಲಿತ ಮಹಿಳೆಯರನ್ನು ಹೋರಾಟದ ತೆಕ್ಕೆಗೆ ತೆಗೆದುಕೊಂಡಿದೆ. ಅನೇಕ ಹೋರಾಟಗಳಲ್ಲಿ ಸಾವಿರಾರು ದಲಿತ ಮಹಿಳೆಯರು ಎದೆಗಾರಿಕೆಯಿಂದ ಹೋರಾಡಿದ್ದಾರೆ. ಸಂಘಟನೆಯ ಸಂಪರ್ಕವಿರುವ ಕಾರಣಕ್ಕೆ ದಲಿತ ಮಹಿಳೆಯರ ಮೇಲೆ ದೌರ್ಜನ್ಯಗಳು ನಡೆದಿವೆ. ಕೆಲವು ಕಡೆ ಕೂಲಿ ಕೆಲಸ ಕೊಡದಂತೆ ಬಹಿಷ್ಕಾರ ಹಾಕಲಾಗಿದೆ. ಮತ್ತೆ ಕೆಲವು ಕಡೆ ಊರಿನಲ್ಲಿ ಸಾರ್ವಜನಿಕ ಸವಲತ್ತುಗಳನ್ನು ಬಳಸದಂತೆ ಬಹಿಷ್ಕಾರ ಹಾಕಲಾಗಿದೆ. ಜಮೀನ್ದಾರಿ ವರ್ಗದವರೇ ಈ ಎಲ್ಲಾ ದೌರ್ಜನ್ಯಗಳನ್ನು ನಡೆಸಿದ್ದಾರೆ. ಅನೇಕ ಮಹಿಳೆಯರು ಹೋರಾಟಕ್ಕೆ ಇಳಿದು ಪ್ರಾಸಂಗಿಕವಾಗಿ ಪೋಲೀಸರ ಲಾಠಿ ಏಟು ತಿಂದಿದ್ದಾರೆ. ಪೋಲೀಸರ ಬಂಧನಕ್ಕೂ ಒಳಗಾಗಿದ್ದಾರೆ. ಕೆಲವರ ಮೇಲೆ ಕೋರ್ಟಿನಲ್ಲಿ ಕೇಸು ಕೂಡ ಇದೆ.[೩]

ಆರಂಭಿಕ ಹಂತದಿಂದ ಮೊದಲುಗೊಂಡು, ಅನಂತರದ ದಿನಗಳವರೆಗೆ ಚಳುವಳಿಯಲ್ಲಿ ದಲಿತ ಮಹಿಳೆಯರ ಪಾತ್ರ ಇತ್ತು. ಆದರೆ ಇಂದು ನಿಂತು ನೋಡಿದರೆ, ಈ ಹಿಂದೆ ಇದ್ದಂತಹ ಪರಿಣಾಮಕಾರಿ ಪಾತ್ರ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಚಳುವಳಿಯಲ್ಲಿ ಮಹಿಳೆಯರು ನಿರಂತರವಾಗಿ ಇರುವಂತೆ ಕಾಯ್ದುಕೊಳ್ಳಲು ಚಳುವಳಿಗೆ ಆಗಿಲ್ಲ. ಇದು ಯಾಕೆ ಎಂಬ ಪ್ರಶ್ನೆ ಎದುರಾಗುತ್ತದೆ. ಈ ಪ್ರಶ್ನೆಯನ್ನು ಪ್ರಧಾನವಾಗಿ ನಾಲ್ಕು ನಿಟ್ಟಿನಿಂದ ಪರಿಶೀಲಿಸಬಹುದು.

೧. ದಲಿತ ಕೌಟುಂಬಿಕ ನೆಲೆಯಿಂದ,
೨. ದಲಿತ ಸ್ತ್ರೀಯರ ನೆಲೆಯಿಂದ
೩. ಹಳ್ಳಿಗಳ ಪರಿಸ್ಥಿತಿಯಿಂದ ಮತ್ತು
೪. ದಲಿತ ಚಳುವಳಿಯ ನೆಲೆಯಿಂದ

**ದಲಿತ ಕೌಟುಂಬಿಕ ನೆಲೆಯಿಂದ :** ದಲಿತ ಕುಟುಂಬಗಳ ಆದಾಯ ಮತ್ತು ಅವುಗಳ ನಿರ್ವಹಣೆ ಮುಖ್ಯವಾಗಿ ಮಹಿಳೆಯರನ್ನೇ ಅವಲಂಬಿಸಿದೆ. ಈ ಅತಿಯಾದ ಅವಲಂಬನೆಯಿಂದಾಗಿ ಮಹಿಳೆ ಕೌಟುಂಬಿಕೇತರ ಚಟುವಟಿಕೆಗಳಲ್ಲಿ ತೊಡಗಲು ಅಡ್ಡಿಯಾಗಿದೆ. ಈ ಕುಟುಂಬಗಳ ಸಾಮಾನ್ಯವಾದ ಸ್ವಭಾವವೆಂದರೆ, ಹೋರಾಟ, ಚಳುವಳಿ ಮುಂತಾದುವುಗಳಿಗೆ ಗಂಡಸರು ಮಾತ್ರ ಅರ್ಹರು; ಮಹಿಳೆಯರಲ್ಲ ಎಂಬುದಾಗಿದೆ. ಕುಟುಂಬದಲ್ಲಿ ಪ್ರಧಾನ ದುಡಿಮೆಯನ್ನು ಹೊರತುಪಡಿಸಿದರೂ, ಇದಲ್ಲದ ಅನೇಕ ಚಟುವಟಿಕೆಗಳು ಮಹಿಳೆಯರನ್ನೇ ಅವಲಂಬಿಸಿವೆ. ಕುಟುಂಬಗಳಲ್ಲಿ ದಲಿತ ಮಹಿಳೆ ಅನುಭವಿಸುತ್ತಿರುವ ಸಂಕಟಗಳ ಸ್ವರೂಪಕ್ಕೂ-ದಲಿತ ಚಳುವಳಿ

ಎದುರಿಸುತ್ತಿರುವ ಸಮಸ್ಯೆಗಳ ಸ್ವರೂಪಕ್ಕೂ ತಾಳೆಯಾಗುತ್ತಿಲ್ಲ. ದಲಿತ ಮಹಿಳೆಯರ ಸ್ಥಿತಿ ತಕ್ಷಣದ ಪ್ರತಿಫಲವನ್ನು ನಿರೀಕ್ಷಿಸುವಂತಿದ್ದರೆ ಚಳುವಳಿಯದು ಹಾಗಿಲ್ಲ.

**ದಲಿತ ಸ್ತ್ರೀಯರ ನೆಲೆಯಿಂದ :** ದಲಿತ ಚಳುವಳಿಗೆ ಇಂದಿಗೂ ಕೂಡ ಮುಖ್ಯ ಭೌತಿಕ ಸಂಪನ್ಮೂಲ ಇರುವುದು ಹಾಸ್ಟೆಲ್ ಗಳಲ್ಲಿ. ಅಂದರೆ S.C, S.T ಹಾಸ್ಟೆಲ್ ಗಳಲ್ಲಿ. ಸಾಮಾನ್ಯವಾಗಿ ಶಿಕ್ಷಣ ಪಡೆದವರೇ ದಲಿತ ಚಳುವಳಿಯಲ್ಲಿರುವುದೊಂದು ವಿಶೇಷ.

ಬಾಲಕರ ಪುರುಷರ ಹಾಸ್ಟೆಲ್ ಗಳಿಗೆ ಬಾಲಕಿಯರ ಮಹಿಳೆಯರ ಹಾಸ್ಟೆಲ್ ಗಳನ್ನು ಹೋಲಿಸಿದರೆ ಇವುಗಳ ಸಂಖ್ಯೆ ಕಡಿಮೆ. ಗಂಡು ಮಕ್ಕಳಿಗಿಮತ ಹೆಣ್ಣು ಮಕ್ಕಳು ಶಿಕ್ಷಣದಲ್ಲಿ ಅತ್ಯಂತ ಕಡಿಮೆ ಪ್ರಮಾಣದಲ್ಲಿದ್ದಾರೆ. ಹೆಣ್ಣು ಮಕ್ಕಳು ನೇರವಾಗಿ ಚಳುವಳಿಯಲ್ಲಿ ಪಾಲ್ಗೊಳ್ಳುವುದರ ಬಗ್ಗೆ ಅನೇಕ ದಲಿತ ಕುಟುಂಬಗಳ ವಿರೋಧವಿದೆ.

ದಲಿತ ಪುರುಷರಿಗೆ ಹೋಲಿಸಿದರೆ, ಮಹಿಳೆಯರಲ್ಲಿ ಕೀಳರಿಮೆ, ಮುಜುಗರ, ಹಿಂಜರಿಕೆ, ನಾಚಿಕೆ, ಭಯ ಮುಂತಾದ ಸಂಘಟನೆ ಹೋರಾಟಗಳಿಗೆ ಪೂರಕವಾಗದ ಪ್ರವೃತ್ತಿಗಳು ಹೆಚ್ಚಿವೆ. ಇವು ಶಿಕ್ಷಣ ಪಡೆಯದ ಮಹಿಳೆಯರಲ್ಲಿ ಒಂದು ರೀತಿ ಇದ್ದರೆ, ಶಿಕ್ಷಣ ಪಡೆಯುತ್ತಿರುವ ಮತ್ತು ಗೌರವಸ್ಥ ಮಹಿಳೆಯರಲ್ಲಿ ಇನ್ನೊಂದು ರೀತಿ ಇವೆ. ಈ ವರ್ಗದಲ್ಲಿ ತಾವು 'ದಲಿತರು' ಎಂದು ಹೇಳಿಕೊಳ್ಳುವುದೇ ಒಂದು ಮಹಾನ್ ಅಪರಾಧ ಎಂಬ ಪ್ರಜ್ಞೆ ಆಳವಾಗಿ ಬೇರೂರಿದೆ. ಈ ವರ್ಗದವರು ಅಂದಾಜಿನಲ್ಲಿ ಹೇಳುವುದಾದರೆ ನೂರಕ್ಕೆ ೯೯ರಷ್ಟು ಮಹಿಳೆಯರು 'ತಾವು ದಲಿತರಲ್ಲ' ಎಂಬುದಾಗಿ ತಮ್ಮ ಜಾತಿಯನ್ನು ಮುಚ್ಚಿಟ್ಟುಕೊಳ್ಳುತ್ತಾರೆ.

ದಲಿತ ನೌಕರಸ್ಥ ಮಹಿಳೆಯರಲ್ಲಿ ಮಧ್ಯಮ ವರ್ಗದ ಮೇಲರಿಮೆ, ನಿಜ ಜಾತಿಯನ್ನು ಹೇಳಿಕೊಂಡರೆ ಬಾಡಿಗೆ ಮನೆ ಸಿಗದಿರುವುದು, ಕೆಳಜಾತಿ ಎಂದು ಗೊತ್ತಾದಾಗ ನೆರೆಹೊರೆಯವರು ಸ್ಪಂದಿಸದೇ ಇರುವುದು ಈ ಮುಂತಾದ ಕಾರಣಗಳಿಗೆ ತಮ್ಮ ಜಾತಿಯನ್ನು ಹೇಳಿಕೊಳ್ಳದಿರುವ ಸ್ಥಿತಿ ಇದೆ.

ವಿದ್ಯಾರ್ಥಿನಿಯರಲ್ಲಿ - ಅಥವಾ ಹಾಸ್ಟೆಲ್ ವಿದ್ಯಾರ್ಥಿನಿಯರಲ್ಲಿ ಈ ಕಾರಣದ ಸ್ವರೂಪ ಇನ್ನಷ್ಟು ಸಂಕೀರ್ಣವಾಗಿದೆ. ಬೇರೆ ಜಾತಿಯರೊಂದಿಗಿನ ಒಡನಾಟ, ಪ್ರತಿಭೆ ಎಂಬುದನ್ನು ಮೇಲ್ಜಾತಿಗೆ ಸಮೀಕರಿಸಿರುವ ಧೋರಣೆ, ಪಠ್ಯ ಕ್ರಮಗಳಲ್ಲಿರುವ ಮೇಲ್ಜಾತಿ ಪರವಾದ ಹಿತಸಕ್ತಿ ಇದಕ್ಕೆ ವ್ಯತಿರಿಕ್ತವಾಗಿ ಕೆಳಜಾತಿಗಳ ಬಗ್ಗೆ ಇರುವ ನಿಕೃಷ್ಟ ಭಾವನೆ, ಭೋಧಕ ಮತ್ತು ಆಡಳಿತ ವರ್ಗದಲ್ಲಿರುವ ಮೇಲ್ಜಾತಿ ಪರವಾದ ಸಾಮಾಜಿಕ ಒಲವು, ಭೋಧನೆಯ ಕ್ರಮದೊಳಗೇ ಅಡಗಿರುವ ಜಾತಿ ಪ್ರಜ್ಞೆ ಮತ್ತು ಭೋಧನೆಯ ಭಾಷೆಯ ಬಳಕೆಯಲ್ಲಿ ಅಂತರ್ಗವಾಗಿರುವ ಜಾತಿ ಭಾವನೆ ' ಮುಂತಾದವುಗಳೆಲ್ಲ ದಲಿತ ಮಕ್ಕಳನ್ನು ಅದರಲ್ಲೂ ಹೆಣ್ಣು ಮಕ್ಕಳನ್ನು ಮಾನಸಿಕವಾಗಿ ಮತ್ತು ಬೌದ್ಧಿಕವಾಗಿ ಕುಗ್ಗಿಸುತ್ತಿವೆ; ಮೆಟ್ಟಿ ತುಳಿಯುತ್ತಿವೆ. ಇವುಗಳನ್ನು ಎದುರಿಸಲಾರದೆ ಅಥವಾ ಪರ್ಯಾಯ ತಿಳಿಯದೆ ಹತಾಶೆಯ ಸ್ಥಿತಿಯಲ್ಲಿ ಈ ಕೀಳರಿಮೆಯಿಂದ ತಾತ್ಕಾಲಿಕವಾಗಿ ಹೊರಬರುವ

ಹುನ್ನಾರವಾಗಿ ತಮ್ಮ ಜಾತಿಯನ್ನು ಹೇಳಿಕೊಳ್ಳದಿರುವ ಸ್ಥಿತಿ ಇದೆ. ಅನೇಕ ಸಲ ತಾವು ಹಾಸ್ಟೆಲ್ ನಿವಾಸಿಯೇ ಅಲ್ಲ ಎಂದು ಹೇಳಿಕೊಳ್ಳುವ ಸ್ಥಿತಿ ಇದೆ. ದಲಿತ ಚಳುವಳಿ ಯಾವ ಶಿಕ್ಷಣವನ್ನು ಸಂಘಟನೆಗೆ ಜ್ಞಾನ, ವರ ಎಂದು ಪರಿಗಣಿಸಿದೆಯೋ ಅದರೊಳಗೇ ಸಂಘಟನೆಗೆ ಶಾಪವಾಗಿರುವ ಗುಣಗಳಿರುವುದು ಒಂದು ವ್ಯಂಗ್ಯ.

ದಲಿತ ನೌಕರಸ್ಥ ಮಹಿಳೆಯರಲ್ಲಿ ಮತ್ತು ವಿದ್ಯಾರ್ಥಿನಿಯರಲ್ಲಿ ದಲಿತ ಚಳುವಳಿಯಲ್ಲಿ ತಾವು ತೊಡಗಿದರೆ, ತಮ್ಮ ಜಾತಿ ಗೊತ್ತಾಗುತ್ತದೆ ಎಂಬ ಅದಮ್ಯ ಕೀಳರಿಮೆ ಇದೆ. ಇದರಿಂದಾಗಿ ಇವರು ಚಳುವಳಿಗೆ ಹೋಗದಂತೆ ಆಗಿದೆ. ಇವರ ಪ್ರಮಾಣ ಕಡಿಮೆ ಇದ್ದರೂ ಚಳುವಳಿಯಲ್ಲಿ ಮಹಿಳೆಯರನ್ನು ಸಂಘಟಿಸಲು ಈ ವರ್ಗದವರು ಮಾರ್ಗದರ್ಶನ ಮತ್ತು ನಾಯಕತ್ವ ಕೊಡಬೇಕಾಗಿತ್ತು. ದುರಂತವೆಂದರೆ ಇವರೇ ಕೀಳರಿಮೆಯಿಂದಾಗಿ ಚಳುವಳಿಗೆ ಬೆನ್ನು ಮಾಡಿದ್ದಾರೆ. ಈ ಕೀಳರಿಮೆಗೆ ಕೇವಲ ಇವರೇ ಕಾರಣರಲ್ಲ. ಮೇಲ್ಜಾತಿ ಪರ ಹಿತಾಸಕ್ತಿಯು ಒಂದು ಮೌಲ್ಯವೆಂತಲೂ, ಕೆಳಜಾತಿಗಳ ಪರ ಹಿತಾಶಕ್ತಿಯು ಒಂದು ಮೌಲ್ಯವಲ್ಲ ಎಂತಲೂ ಸಮಾಜದಲ್ಲಿ ಒಪ್ಪಿತವಾಗಿದೆ. ದಲಿತ ಚಳುವಳಿ ಕೇವಲ ಜಾತಿಯ ಸಂಕುಚಿತ ನೆಲೆಯಲ್ಲಿ ಅಸಹ್ಯವೆಂಬಂತೆ ಗಿರಕಿ ಹೊಡೆಯುತ್ತಿದೆ. ಇವು ದಲಿತ ಮಹಿಳೆಯರು ದಲಿತ ಚಳುವಳಿಗೆ ಬಾರದಂತೆ ಅಡ್ಡಿಯಾಗಿವೆ.

**ಹಳ್ಳಿಗಳ ಪರಿಸ್ಥಿತಿಯಿಂದ :** ದಲಿತರು ಇರುವುದೇ ಹಳ್ಳಿಗಳಲ್ಲಿ. ಹಳ್ಳಿಗಳ ರಾಜಕೀಯಾರ್ಥಿಕ ಪರಿಸ್ಥಿತಿ ಎಂದರೆ ಅದು ಜಮೀನ್ದಾರಿ ವ್ಯವಸ್ಥೆಯೇ ಆಗಿದೆ. ಈ ವ್ಯವಸ್ಥೆಯಲ್ಲಿ ದುಡಿಯುವ ಜನವರ್ಗ ಕೂಲಿಗಾಗಿ ಜಮೀನ್ದಾರಿ ವರ್ಗವನ್ನು ಅವಲಂಬಿಸಿದೆ. ಜಮೀನ್ದಾರಿ ವರ್ಗ ತನ್ನ ಲಾಭಕ್ಕಾಗಿ ಮತ್ತು ಶೋಷಣೆಯ ಕಾರಣಕ್ಕಾಗಿ ದುಡಿಯುವ ವರ್ಗವನ್ನು ಅವಲಂಬಿಸಿದೆ. ಹಳ್ಳಿಗಳಲ್ಲಿ ಜಮೀನ್ದಾರರೇ ಕೋರ್ಟು-ಕಛೇರಿ-ಕಾನೂನು-ಪೋಲೀಸು ಎಲ್ಲಾ ಅವರೇ. ದಲಿತರ ಮೇಲೆ ದೌರ್ಜನ್ಯ ನಡೆಸುವವರೂ ಅವರೇ. ನ್ಯಾಯ ಹೇಳುವವರೂ ಅವರೇ. ಈ ವಸ್ತುಸ್ಥಿತಿಯಲ್ಲಿ ದಲಿತರು, ದಲಿತ ಮಹಿಳೆಯರು ನಲುಗಿ ಹೋಗಿದ್ದಾರೆ. ಹಳ್ಳಿಗಳಲ್ಲಿರುವ ಜಮೀನ್ದಾರಿ ವ್ಯವಸ್ಥೆಯ ಕ್ರೌರ್ಯವನ್ನು ದಲಿತ ಚಳುವಳಿಗೆ ಎದುರಿಸಲು ಆಗುತ್ತಿಲ್ಲ. ಎದುರಿಸದೆ ಬಿಡಲು ಆಗುತ್ತಿಲ್ಲ. ದಲಿತ ಚಳುವಳಿಯಲ್ಲಿ ಭಾಗವಹಿಸುವುದೆಂದರೆ, ಮತ್ತೊಂದು ರೀತಿಯಲ್ಲಿ ಜಮೀನ್ದಾರಿ ವರ್ಗದ ವಿರುದ್ಧ ಹೋರಾಟಕ್ಕಿಳಿದಂತೆಯೇ. ಜಮೀನ್ದಾರರನ್ನು ಎದುರು ಹಾಕಿಕೊಳ್ಳದ ಹೊರತು ದಲಿತ ಚಳುವಳಿಗೆ ಚಲನೆಯೇ ಇಲ್ಲ. ಜಮೀನ್ದಾರರಿಗೆ ಎದುರಾಗುವ ವಿಷಯದಲ್ಲಿ ಪುರುಷರಿಗಿಂತ ಮಹಿಳೆಯರಿಗೆ ಅವಕಾಶಗಳು ಕಡಿಮೆ. ದುಡಿಮೆಯ ಸಂಬಂಧ ಅವರನ್ನು ಹಾಗೆ ಬಂಧಿಸಿ ಬಿಟ್ಟಿದೆ. ಈ ಸಂಬಂಧ ಸಡಿಲಗೊಳ್ಳದ ಹೊರತು ದಲಿತ ಮಹಿಳೆಯರು ಚಳುವಳಿಯಲ್ಲಿ ಭಾಗವಹಿಸುವುದು ಸುಲಭವಿಲ್ಲ. ಬೇರೆ ಮಾತುಗಳಲ್ಲಿ ಹೇಳುವುದಾದರೆ, ಜಮೀನ್ದಾರರ ಮನೆಗಳಲ್ಲಿ ಕೂಲಿ, ಜೀತ ಮುಂತಾದುವುಗಳ ಮೇಲೆಯೇ ಎಷ್ಟೆಷ್ಟು ಅವಲಂಬನೆ ಇರುತ್ತದೋ-ಅಷ್ಟಷ್ಟೂ ಚಳುವಳಿ ಹುಟ್ಟಲು ಕಾವು ಇರುತ್ತದೆ ನಿಜ. ಆದರೆ

ಆ ಪರಿಸ್ಥಿತಿಯ ಪಕ್ವತೆಯನ್ನು ಮಹಿಳೆಯರು ಪಡೆಯುವಲ್ಲಿ ವಿಫಲರಾಗಿದ್ದಾರೆ. ಅಥವಾ ಮಹಿಳೆಯರು ವಿಫಲರಾಗಲು ಸಂಘಟನೆ ಕಾರಣವಾಗಿದೆ.

**ದಲಿತ ಚಳುವಳಿಯ ನೆಲೆಯಿಂದ :** ಈ ಮೊದಲು ಚರ್ಚಿಸಿದ ಮೂರು ಅಂಶಗಳ ಹಿಂದೆ ದಲಿತ ಚಳುವಳಿಯ ಮೂಲ ಜವಾಬ್ದಾರಿ ಇದೆ. ಚಳುವಳಿಯು ಕೇವಲ ಜಾತಿ ಭಾವನೆಗಳ ಅಡಿಯಲ್ಲಿ, ಕೇವಲ ಜಾತಿ ಸಂಬಂಧಿ ನೆಲೆಯಲ್ಲಿ ಮಾತ್ರ ಕ್ರಿಯಾಶೀಲವಾಗಿದೆ. ಸಮಾಜದ ವಾಸ್ತವ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿದೆ. ದಲಿತ ಸಮಸ್ಯೆ ಎಂಬುದು ಕೇವಲ ಜಾತಿಯ ಪರಿಧಿಗೆ ಸೀಮಿತವಾಗಿಲ್ಲ. ಅದರ ಹಿಂದೆ ಬಲವಾದ ಆರ್ಥಿಕ ಆಯಾಮವಿದೆ. ಈ ನಿಟ್ಟಿನಲ್ಲಿ ಅಧ್ಯಯನ, ಕಾರ್ಯಕ್ರಮಗಳಿಲ್ಲ. ಚಳುವಳಿಯ ವಿಚಾರಗಳನ್ನು ಕೌಟುಂಬಿಕ ನೆಲೆಗೆ ಕೊಂಡೊಯ್ಯುವ ಅಗತ್ಯತೆ ಮತ್ತು ಅನಿವಾರ್ಯತೆಗಳನ್ನು ಮನಗಂಡಿಲ್ಲ. ಇದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳಿಲ್ಲ. ಹಳ್ಳಿಗಳಲ್ಲಿ ಜಮೀನ್ದಾರಿ ಶೋಷಣೆ ಪ್ರಬಲವಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಪ್ರಕರಣ ಆಧಾರಿತ ಹೋರಾಟಗಳನ್ನು ಬಿಟ್ಟರೆ ಬೇರೆ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿಲ್ಲ. ಜಮೀನ್ದಾರಿ ಶೋಷಣೆಯಲ್ಲಿ ಜಮೀನ್ದಾರಿ ವರ್ಗವೇ ದಲಿತರ ಪ್ರಧಾನವಾದ ಶತ್ರು. ಜಮೀನ್ದಾರಿ ವರ್ಗವೇ ಮೊದಲ-ನೇರ ಮತ್ತು ಪ್ರತ್ಯಕ್ಷ ಶತ್ರು. ಆದರೆ ಚಳುವಳಿಯ ಕೇಂದ್ರಗಳು ಮತ್ತು ಹೋರಾಟಗಳು ಪಟ್ಟಣ ನಗರ ಕೇಂದ್ರಿತವಾಗುತ್ತಿವೆ. ಬಹುತೇಕ ಹೋರಾಟಗಳು ದಲಿತ ನೌಕರರ ಹಿತಾಸಕ್ತಿ ಕಾಪಾಡಲು ಮುಂದಾಗುತ್ತಿವೆ. ಉದಾ: ಜಾಗತೀಕರಣದಿಂದ, ಖಾಸಗೀಕರಣದಿಂದ ದಲಿತರು ನಾನಾ ರೀತಿಯಲ್ಲಿ ನಲುಗಿ ಹೋಗುತ್ತಿದ್ದರೂ ಈ ಕಡೆ ಗಮನವಿಲ್ಲ. ಬದಲಾಗಿ ಎಂಜಿನಿಯರುಗಳಿಗೆ ಮುಂಬಡ್ತಿಯಲ್ಲಿ ಮೀಸಲಾತಿ ಹೋರಾಟವು ಪ್ರಮುಖವಾಗಿದೆ. ದಲಿತ ಎಂಜಿನಿಯರು (ಹಾಗೆ ಕರೆಯುವುದಾದರೆ)ಗಳಿಗೆ ಊಟ ಬಟ್ಟೆಯ ಸಮಸ್ಯೆಯಿಲ್ಲ. ಆದರೆ ದಲಿತ ಚಳುವಳಿ ಇವರಿಗೆ ಕೊಟ್ಟ ಪ್ರಾಮುಖ್ಯತೆಯನ್ನು ಊಟ-ಬಟ್ಟೆಗಾಗಿ ಒದ್ದಾಡುತ್ತಿರುವ ಕೂಲಿ ಮಾಡುವ ದಲಿತರಿಗೆ ಕೊಡುತ್ತಿಲ್ಲ ಎಂಬುದು ವಿಷಾದದ ಸಂಗತಿ.

ದಲಿತರ ಪರಿಸ್ಥಿತಿ ಇರುವುದು ಹಳ್ಳಿಗಳಲ್ಲಿ. ಹಳ್ಳಿಗಳಲ್ಲಿ ಮೊದಲಿಗೇ ಎದುರಾಗುವುದು ಜಮೀನಿನ ಸಂಬಂಧ. ಇಲ್ಲಿ ಎದುರಾಗುವವರು ಭೂಮಾಲೀಕರು. ಆದರೆ ದಲಿತ ಚಳುವಳಿ ಕಳೆದ ೨೫ ವರ್ಷಗಳಿಂದ ಪುರೋಹಿತಶಾಹಿ, ಬ್ರಾಹ್ಮಣಶಾಹಿ ನಮ್ಮ ಶತ್ರು ಎಂದು ಹೇಳುತ್ತ ಬಂತು. ಜಮೀನ್ದಾರಿ ವರ್ಗಗಳಿಂದ ಬಂದ ಅಥವಾ ಆ ವರ್ಗವನ್ನು ಪ್ರತಿನಿಧಿಸುವ ಬುದ್ಧಿ ಜೀವಿಗಳು ದಲಿತರ ಆಲೋಚನೆಯನ್ನು ದುರುಪಯೋಗಪಡಿಸಿ ಕೊಂಡರು. ಅವರೂ ಇವರೊಂದಿಗೆ ಕೈಜೋಡಿಸಿ-ಧ್ವನಿಗೂಡಿಸಿ 'ಹೌದು ನಿಮ್ಮ(ದಲಿತರ) ಶತ್ರುಗಳು ಪುರೋಹಿತಶಾಹಿಗಳು, ಬ್ರಾಹ್ಮಣಶಾಹಿಗಳು' ಎಂಬುದಾಗಿ ಕಂಠಪಾಠ ಮಾಡಿಸಿದರು. ದಲಿತರು ಇದನ್ನು ಬಲವಾಗಿ ನಂಬಿದರು. ಇದರಿಂದ ಜಮೀನ್ದಾರಿ ವರ್ಗ ತನ್ನ ಶತ್ರುತ್ವವನ್ನು ನಯವಾಗಿ ಕಲ್ಪಿತ ಬ್ರಾಹ್ಮಣಶಾಹಿಗೆ ವರ್ಗಾಯಿಸಿತು. ಪರಿಣಾಮವಾಗಿ ಜಮೀನ್ದಾರಿ ಶೋಷಣೆ ನಿರಂತರವಾಗಿ ಮುಂದುವರಿಯಲು ಅನುವಾಯಿತು.

ದಲಿತರ ಮೇಲೆ ಹಲ್ಲೆ-ಕೊಲೆ-ದೌರ್ಜನ್ಯಗಳು ನಡೆದಾಗ ಮಾತ್ರ ದಲಿತರನ್ನು ಕುರಿತು ಆಲೋಚಿಸಲಾಯಿತು. ಅದನ್ನು ಹೊರತುಪಡಿಸಿ ದಲಿತರ ಮೂಲಭೂತ ಸಮಸ್ಯೆಗಳು ಯಾವುವು? ಸವಾಲುಗಳು ಯಾವುವು? ಎಂಬುದನ್ನು ಕುರಿತು ಆಲೋಚನೆ ನಡೆಯಲೇ ಇಲ್ಲ. ದಲಿತರಲ್ಲೇ ಬೇರೆ ಬೇರೆ ಸಮೂಹಗಳಿರುವುದನ್ನು ಗಂಭೀರವಾಗಿ ಪರಿಗಣಿಸಲಿಲ್ಲ. ದಲಿತರಲ್ಲಿ ಕೃಷಿಕೂಲಿ ಕಾರ್ಮಿಕರು, ಜೀತದಾಳುಗಳು, ಕೈಗಾರಿಕಾ ಕಾರ್ಮಿಕರು, ನೌಕರರು, ನಾಲ್ಕನೇ ದರ್ಜೆ ನೌಕರರು, ವಿದ್ಯಾರ್ಥಿಗಳು, ಯುವಜನರು ಹೀಗೆ ವಿಭಾಗ ಮಾಡಿಕೊಂಡು ದಲಿತ ಸಮೂಹದ ಸ್ಥಿತಿಗತಿಗಳನ್ನು ಅರಿಯುವ ಗೋಜಿಗೆ ಹೋಗಲಿಲ್ಲ. ಇಲ್ಲಿ ವಿಶೇಷವಾಗಿ ಹೇಳಬೇಕೆಂದರೆ, 'ದಲಿತ ಮಹಿಳೆ'ಯರನ್ನು ಕುರಿತು ಪ್ರತ್ಯೇಕವಾಗಿ ಎಂದೂ ಚಿಂತನೆ ನಡೆಸಲೇ ಇಲ್ಲ. ಈ ಮೇಲೆ ಸೂಚಿಸಿದ ಎಲ್ಲಾ ಸಮೂಹಗಳಿಗೂ ಒಂದೊಂದು ಪ್ರತ್ಯೇಕ ಅಸ್ತಿತ್ವ-ಪ್ರತ್ಯೇಕ ಸಮಸ್ಯೆಗಳಿವೆ. ಅದೇ ಕಾಲಕ್ಕೆ ಅವುಗಳೊಳಗೆ ನಿರಂತರವಾದ ಅಂತರ್ ಸಂಬಂಧಗಳಿದ್ದು ದಲಿತ ವರ್ಗಕ್ಕೆ ಇಡಿಯಾದ ಅಸ್ತಿತ್ವ-ಇಡಿಯಾದ ಸಮಸ್ಯೆ ಕೂಡ ಇದೆ. ಈ ಎರಡನ್ನೂ ಭಿನ್ನವಾಗಿಯೂ ಅಭಿನ್ನವಾಗಿಯೂ ಪರಿಗಣಿಸುವುದು ಪ್ರಬುದ್ಧ ಚಳುವಳಿಯೊಂದರ ಸಾಮಾನ್ಯ ತಿಳುವಳಿಕೆ.

ದಲಿತ ಚಳುವಳಿಯು ಇಡೀ ದಲಿತ ಸಮಸ್ಯೆಯ ಒಂದು ಭಾಗವಾಗಿ ದಲಿತ ಮಹಿಳಾ ಸಮಸ್ಯೆಯನ್ನು ಪರಿಗಣಿಸಬೇಕು. ದಲಿತ ಮಹಿಳಾ ಲೋಕದಲ್ಲಿರುವ ಅದಮ್ಯ ಕೀಳರಿಮೆಯನ್ನು ಹೋಗಲಾಡಿಸುವಂತಹ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಮಹಿಳೆಯರನ್ನು ವೈಚಾರಿಕವಾಗಿ ಬೆಳೆಸಬೇಕು. ಸ್ವಾಭಿಮಾನ ಮತ್ತು ಸ್ವಂತಿಕೆಗಳನ್ನು ಅವರಲ್ಲಿ ಹುಟ್ಟುಹಾಕಬೇಕು. ದಲಿತ ಮಹಿಳೆಯರಿಗೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಸಂಯುಕ್ತವಾಗಿ ಸಂಯೋಜಿಸಬೇಕು. ಸಂಘಟನೆಯ ಬಗ್ಗೆ ವಿಶ್ವಾಸ ಮತ್ತು ಬದ್ಧತೆ ಬರುವಂತೆ ಸಂಘಟನಾತ್ಮಕ ಶಿಕ್ಷಣವನ್ನು ಅವರಿಗೆ ನೀಡಬೇಕು. ಬೇರೆ ಬೇರೆ ಹೋರಾಟ ಮತ್ತು ಚಳುವಳಿಗಳ ಬಗ್ಗೆ ಅಧ್ಯಯನ ನಡೆಸಬೇಕು. ಅಲ್ಲೆಲ್ಲ ಮಹಿಳೆಯರ ಪಾತ್ರ, ತ್ಯಾಗ-ಬಲಿದಾನಗಳ ವೀರೋಚಿತವಾದ ಪರಂಪರೆ ಇದೆ. ಇದನ್ನು ದಲಿತ ಮಹಿಳೆಯರಿಗೆ ಮನವರಿಕೆ ಮಾಡಿಕೊಡಬೇಕು.

ದಲಿತ ಚಳುವಳಿಯು ದಲಿತರಲ್ಲೇ ಅಲ್ಪಸಂಖ್ಯಾತರ ಹಿತಾಸಕ್ತಿಗಾಗಿ ಹೋರಾಡುವುದನ್ನು (ಉದಾ : ಇಂಜಿನಿಯರ್ ಗಳ ಮುಂಬಡ್ತಿಯಲ್ಲಿ ಮೀಸಲಾತಿ) ನಿಲ್ಲಿಸಬೇಕು. ಕೇವಲ ಜಾತಿ ಸಮಸ್ಯೆಗೆ ಸೀಮಿತವಾಗಿರುವುದನ್ನು ಕೈಬಿಡಬೇಕು. ದಲಿತ ಸಮಸ್ಯೆಯನ್ನು ರಾಜಕೀಯ ಆರ್ಥಿಕ ನೆಲೆಯಲ್ಲಿ ಪರಿಗ್ರಹಿಸಬೇಕು. ಇದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕು.

ದಲಿತ ಚಳುವಳಿಯು ಇತರೆ ಸ್ತ್ರೀವಾದಿ ಚಳುವಳಿಗಳೊಂದಿಗೆ ಸಂವಾದ ನಡೆಸಬೇಕು. ಸೈದ್ಧಾಂತಿಕ ಸಂಬಂಧವನ್ನು ಬೆಳೆಸಿಕೊಳ್ಳಬೇಕು. ದಲಿತೇತರ ಮಹಿಳೆಯರ ಸಮಸ್ಯೆಯ

ಸ್ವರೂಪಗಳು ಮತ್ತು ಪರಿಹಾರೋಪಾಯದ ಸಾಧ್ಯತೆಗಳ ಬಗ್ಗೆ ಅರಿವು ತಂದುಕೊಳ್ಳಬೇಕು. ಇತರೆ ಸ್ತ್ರೀವಾದಿ ಚಳುವಳಿಗಳೊಂದಿಗೆ ನಿರ್ದಿಷ್ಟ ಷರತ್ತುಗಳ ವ್ಯಾಪ್ತಿಗೊಳಪಟ್ಟು ಸಾಮಾನ್ಯ ಹೋರಾಟಗಳನ್ನು ರೂಪಿಸಬೇಕು. ಆಗ ಎರಡೂ ಕಡೆಯ ಆಚರಣಾತ್ಮಕ ವಿಮರ್ಶೆ ನಡೆಯುತ್ತದೆ. ಇದು ಆಗಬೇಕು.

ದಿನೇ ದಿನೇ ದಲಿತರ ಸ್ಥಿತಿ ಬಿಕ್ಕಟ್ಟಿಗೆ ಒಳಗಾಗುತ್ತಿದೆ. ಇದರಲ್ಲಿ ಮಹಿಳೆಯರ ಸ್ಥಿತಿ ಇನ್ನೂ ಸಂಕೀರ್ಣವಾಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ದಲಿತ ಚಳುವಳಿ ಮಹಿಳಾ ಸಮಸ್ಯೆಯ ಸ್ವರೂಪವನ್ನು ಮುಖ್ಯ ಪ್ರಶ್ನೆಯಾಗಿ ಎತ್ತಿಕೊಳ್ಳಬೇಕಾಗಿದೆ. ಸಾಮ್ರಾಜ್ಯಶಾಹಿಯ ನವವಸಾಹತು ಲೂಟಿಯು ಮಹಿಳೆಯರನ್ನು ನಾನಾ ಕಾರಣಗಳಿಗಾಗಿ ಸರಕಿನಂತೆ ಬಳಸುತ್ತಿರುವುದು ಎಂದಿಗಿಂತ ಇಂದು ತೀವ್ರವಾಗಿ ನಡೆದಿದೆ. ಇದರ ಕಾವು ಇಡಿಯಾಗಿ ಮಹಿಳಾ ಲೋಕಕ್ಕೆ ಹೇಗೋ ಅದೇ ರೀತಿಯಲ್ಲಿ ನಿರ್ದಿಷ್ಟವಾಗಿ ದಲಿತ ಮಹಿಳಾ ಜಗತ್ತಿಗೂ ತಾಗುತ್ತಿದೆ. ಹಾಗಾಗಿ ಇಂದು ದಲಿತ ಮಹಿಳಾ ಪ್ರಶ್ನೆಯನ್ನು ಕೇವಲ ಜಾತಿ ನೆಲೆಯೊಳಗೆ, ಪುರುಷ ವಿರೋಧಿ ನೆಲೆಯೊಳಗೆ ಪರಿಭಾವಿಸಲು ಬರುವುದಿಲ್ಲ. ಇದನ್ನು ನಿರ್ಣಾಯಕವಾಗಿ ಸಾಮ್ರಾಜ್ಯಶಾಹಿ ವಿರೋಧಿ ಪ್ರಜಾಸತ್ತಾತ್ಮಕವಾದಿ ಸೈದ್ಧಾಂತಿಕತೆಯ ನೆಲೆಯಲ್ಲಿ ಪರಿಭಾವಿಸುವುದರ ಮೂಲಕ ಪ್ರಕ್ರಿಯಾತ್ಮಕ ಪರ್ಯಾಯವನ್ನು ಕಂಡುಕೊಳ್ಳಬೇಕಾಗಿದೆ. ಈ ನಿಟ್ಟಿನಲ್ಲಿ ದಲಿತ ಚಳುವಳಿ ಮಹಿಳಾ ಪ್ರಶ್ನೆಯನ್ನು ನಿರ್ವಹಿಸುವುದು ಮಾತ್ರವಲ್ಲ; ಈ ಮೂಲಕ ತನ್ನನ್ನೇ ತಾನು ವಿಸ್ತರಿಸಿಕೊಳ್ಳುವ, ಪರಿವರ್ತಿಸಿಕೊಳ್ಳುವ, ಸಮಕಾಲೀನ ಒತ್ತಡಗಳಿಗೆ ಅನುಗುಣವಾಗಿ ಪುನರ್ ನವೀಕರಣವಾಗುವ ಚಾರಿತ್ರಿಕ ಒತ್ತಡಗಳಿವೆ.

**ಉಲ್ಲೇಖಿಕ್ಕೆ ವಿವರಗಳು**

೧. ಇಂಥ ಅನೇಕ ಹಾಡುಗಳಿದ್ದರೂ, ಚರ್ಚೆಗಾಗಿ ಎರಡು ಹಾಡುಗಳ ಎರಡೆರಡು ಸಾಲುಗಳನ್ನು ಉದ್ಧರಿಸಲಾಗಿದೆ. ದಲಿತ ಹೆಣ್ಣುಗಳ ಮೇಲೆ ಅತ್ಯಾಚಾರ ನಡೆದಾಗ ಹುಟ್ಟಿದ ಹಾಡುಗಳಿವು.

೨. ದೇವನೂರ ಮಹಾದೇವ ಅವರ ಸಮಗ್ರ ಕೃತಿಗಳು, ಪುಟ-೬

೩. ಭದ್ರಾವತಿ ಸಮೀಪದ ಕಾರೇಹಳ್ಳಿ ಎಂಬ ಗ್ರಾಮದಲ್ಲಿ ದಲಿತ ಚಳುವಳಿ ಭೂಹೋರಾಟವನ್ನು ನಡೆಸಿತು. ಆಗ ಅನೇಕರ ಮೇಲೆ ಪೋಲೀಸರು ಕೇಸು ದಾಖಲಿಸಿದರು. ಅನಂತರ ಅದು ಕೋರ್ಟಿಗೆ ಹೋಯಿತು. ಅದರಲ್ಲಿ ಯಶೋದಮ್ಮ ಎಂಬುವವರ ಮೇಲೆ ಕೇಸು ಇದೆ. ಕಳೆದ ೧೦-೧೨ ವರ್ಷಗಳಿಂದ ಈ ಕೇಸು ನಡೆಯುತ್ತಿದೆ.

೪. ಇವುಗಳನ್ನು ಕುರಿತು ಪ್ರತ್ಯೇಕ ಅಧ್ಯಯನದ ಅವಶ್ಯಕತೆ ಇದೆ.

## ಗೋಡೆಯ ಅಡಿಯಲ್ಲಿ......

ಚಂದ್ರಮತಿ ಸೋಂದಾ

ಸಮಾಜ ರಚನೆಯ ಒಂದು ಹಂತದಲ್ಲಿ ಅಂದಿನ ಅಗತ್ಯಕ್ಕನುಗುಣವಾಗಿ ರೂಪುಗೊಂಡ ವರ್ಣವ್ಯವಸ್ಥೆಯು ಮನುಷ್ಯನ ಅಗತ್ಯತೆ ಹೆಚ್ಚಿದಂತೆ, ಬದುಕು ಸಂಕೀರ್ಣಗೊಳ್ಳುತ್ತ ಬಂದಂತೆ ನೂರಾರು ಜಾತಿಗಳಾಗಿ ಒಡೆಯುತ್ತ ಬಂದಿರಬೇಕು. ಕೆಲಸದ ಭಾಗವಾಗಿದ್ದ ವರ್ಣವ್ಯವಸ್ಥೆಯು ಕಾಲಾಂತರದಲ್ಲಿ ಹುಟ್ಟಿನಿಂದ ಗುರುತಿಸುವಂತಾಗಿ ತನ್ನ ಉದ್ದೇಶವನ್ನು ಕಳೆದುಕೊಂಡು ಮನುಷ್ಯ ಮನುಷ್ಯನ ನಡುವಿನ ಗೋಡೆಯಾಗಿ ಈಗಿನ ರೂಪ ತಳೆದಿರುವಂತೆ ಕಾಣುತ್ತದೆ. ನಮ್ಮ ದೇಶದಲ್ಲಿ ಬಹಳ ಹಿಂದಿನಿಂದಲೂ ವರ್ಣಸಂಕರವನ್ನು ವಿರೋಧಿಸುತ್ತಲೇ ಬರಲಾಗಿದೆ. ವರ್ಣಸಂಕರವನ್ನು ವಿರೋಧಿಸಿರುವ ದಾಖಲೆ ನಮಗೆ ಸಿಗುವುದು ಅರ್ಜುನನು 'ಜಾಯತೆ ವರ್ಣಸಂಕರಃ' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನಿಗೆ ಯುದ್ಧದಿಂದ ಇಂತಹ ಅನಾಹುತವಾಗುತ್ತದೆಂದು ತಿಳಿಸುವಲ್ಲಿ. ಮಹಾಭಾರತದಲ್ಲಿ ಬರುವ ಶಂತನು ಸತ್ಯವತಿಯರ ಮದುವೆಯೇ ವರ್ಣಸಂಕರಕ್ಕೆ ಅತ್ಯುತ್ತಮ ಉದಾಹರಣೆಯಾಗಿದೆ. ಅವರ ಮಕ್ಕಳಿಗೆ ಕ್ಷತ್ರಿಯರೆಂಬ ಮಾನ್ಯತೆಯೂ ದೊರಕುತ್ತದೆ. ಅರ್ಜುನನ ವಂಶವೇ ವರ್ಣಸಂಕರದ ಮುಂದುವರಿಕೆಯದಾಗಿದೆ. ಮಹಾಭಾರತದ ಕತೆ ನಡೆದ ಕಾಲಕ್ಕಿದ್ದ ಉದಾರತೆ ಭವದ್ಗೀತೆ ರಚಿತವಾಗುವ ಕಾಲಕ್ಕೆ ಕಾಣೆಯಾಗಿ ವರ್ಣಸಂಕರವು ಸಾಮಾಜಿಕ ನಿಷೇಧಕ್ಕೆ ಒಳಗಾಗಿರಬೇಕು. ಸಾಮುದಾಯಿಕ ಜೀವನ ಪದ್ಧತಿ ಶಿಥಿಲವಾಗಿ ವೈಯಕ್ತಿಕ ಬದುಕಿಗೆ ಒತ್ತು ಬಿದ್ದಂತೆಲ್ಲ ಸ್ವಾರ್ಥ ಮೇಲುಗೈ ಪಡೆದು ತಾನು ಮಾಡುವ ಕೆಲಸವೇ ಶ್ರೇಷ್ಠವೆಂಬ ಭಾವನೆ ಮೊಳೆತು ಮೇಲುಕೀಳೆಂಬ ತಾರತಮ್ಯ ಸಾಮಾಜಿಕ ಬದುಕನ್ನು ಆವರಿಸಿದಂತೆ ತೋರುತ್ತದೆ.

ಧರ್ಮ ಧರ್ಮಗಳ ನಡುವಿನ ಭಿನ್ನತೆಗೆ ಒಂದು ತಾರ್ಕಿಕ ಸಂಬಂಧವಿದೆ. ಆಯಾ ಧರ್ಮ ಪ್ರತಿಪಾದಕರ ಜೀವನದೃಷ್ಟಿ. ಬದುಕಿನ ಸಿದ್ಧಾಂತಗಳ ಹಿನ್ನೆಲೆ ಅವರವರ ಅನುಯಾಯಿಗಳ ಗ್ರಹಿಕೆಯ ಹಿಂದೆ ಕೆಲಸ ಮಾಡಿರುತ್ತದೆ ಎಂದು ನಂಬಬಹುದು. ಆದರೆ ಜಾತಿ-ಜಾತಿಯ ನಡುವಿನ ಅಂತರಕ್ಕೆ ಇಂತಹ ಯಾವ ಹಿನ್ನೆಲೆಯೂ ಇಲ್ಲ. ಆದಾಗ್ಯೂ ಭಾರತದಲ್ಲಿ ಈ ವ್ಯವಸ್ಥೆಯು ಮಾನವೀಯತೆಯನ್ನು ನುಂಗಿ ನೊಣೆಯುತ್ತಿದೆ. ಮನುಷ್ಯ-ಮನುಷ್ಯರ ನಡುವೆ ಗೋಡೆಯನ್ನು ನಿರ್ಮಿಸಿ ರಾಕ್ಷಸೀ ಪ್ರವೃತ್ತಿಯ ರುದ್ರನರ್ತನದಿಂದ

ನಾಗರಿಕತೆಗೆ ಒಂದು ಶಾಪವಾಗಿ ಪರಿಣಮಿಸಿದೆ. ಈ ಹಿಂದೆ ಪ್ರಸ್ತಾಪಿಸಿದಂತೆ ಮತಧರ್ಮಗಳಲ್ಲಿ ವಿಭಿನ್ನ ದೃಷ್ಟಿಕೋನ ಇದ್ದಿರಬಹುದಾದರೂ ಪರಸ್ಪರ ಗೌರವಯುತ ಸಹಬಾಳ್ವೆಯನ್ನು ಒಪ್ಪಿಕೊಳ್ಳುವುದೇ ನಿಜವಾದ ಧರ್ಮದ ಉದ್ದೇಶವಾಗಿರಬೇಕು. ಆದರೆ ಚಾರಿತ್ರಿಕ, ಸಾಂಸ್ಕೃತಿಕ ಕಾರಣಗಳಿಂದಾಗಿ ಇಂದು ವಿಶ್ವದಾದ್ಯಂತ ಧರ್ಮ-ಧರ್ಮದ ನಡುವೆ ಅವಿಶ್ವಾಸ, ಅಪನಂಬಿಕೆಗಳೂ ಮನುಷ್ಯತ್ವವನ್ನು ಮೀರಿ ಅಟ್ಟಹಾಸಗೈಯುತ್ತಿವೆ. ವೈಜ್ಞಾನಿಕ ಬೆಳವಣಿಗೆಯ ಕಾರಣದಿಂದ ಈಗ ಭೂಮಂಡಲವೆಲ್ಲ ಒಂದು ಚಿಕ್ಕ ಗೋಳವಾಗಿ ಕಾಣಿಸುತ್ತದೆ ಎನ್ನುವುದು ನಿಜವಾದರೂ, ಜಾತಿ, ವರ್ಗ, ಧರ್ಮ, ವರ್ಣಗಳು ಮನುಷ್ಯನನ್ನು ಇನ್ನಷ್ಟು ಸಂಕುಚಿತ ಪ್ರವೃತ್ತಿಗೆ ತಳ್ಳುತ್ತಿವೆ ಎನ್ನುವುದೂ ಅಷ್ಟೇ ಸತ್ಯ. ಇವನ್ನೆಲ್ಲ ಮೀರಿದ ಶಾಂತಿಯುತ ಸಹಬಾಳ್ವೆಯ ಅಗತ್ಯವನ್ನು ಶತಮಾನಗಳಿಂದ ಸಮಾಜ ವಿಜ್ಞಾನಿಗಳು, ಸಮಾಜ ಸುಧಾರಕರು ಮಾನವ ಬದುಕಲ್ಲಿ ಆಸ್ಥೆಯುಳ್ಳವರೆಲ್ಲ ತಿರಸ್ಕರಿಸಿದ್ದರು. ಅಸ್ಪೃಶ್ಯತೆಯನ್ನಂತೂ ನಮ್ಮ ಸಮಾಜಕ್ಕೆ ತಟ್ಟಿದ ಶಾಪವೆಂದೇ ಪರಿಗಣಿಸಿದ್ದರು. ಮೇಲು ಕೀಳೆಂಬ ಭಾವನೆಯನ್ನು ಖಂಡಿಸಿದ್ದರು. ಸುಧಾರಣಾವಾದಿ ಆಂದೋಲನದ ನೇತಾರರು ಮನುಷ್ಯ ಪ್ರೀತಿಗೆ ಪ್ರಾಮುಖ್ಯ ನೀಡಿ ಜಾತೀಯತೆಯನ್ನು ಕ್ಷುಲ್ಲಕವಾಗಿ ಕಂಡಿದ್ದರು. ಈ ಎಲ್ಲ ಹಿನ್ನೆಲೆಯನ್ನು ಗಮನಿಸಿದಾಗ ಇಂದಿನ ಸಮಾಜದ ದುಸ್ಥಿತಿಗೆ ಆರ್ಥಿಕತೆ, ರಾಜಕಾರಣ ಹಾಗೂ ಸ್ವಾರ್ಥಪರತೆ ಕಾರಣವಾಗಿರುವಂತೆ ತೋರುತ್ತದೆ.

ದೇಹದ ಅಂಗವೊಂದಕ್ಕೆ ರೋಗ ತಗಲಿದರೆ ಚಿಕಿತ್ಸೆ ಅಗತ್ಯ. ಅದರಿಂದ ಗುಣವಾಗದಿದ್ದಲ್ಲಿ ಅಂಗವನ್ನೇ ಕತ್ತರಿಸಬೇಕಾಗುತ್ತದೆ. ಮನಸ್ಸು ಸರಿಯಿಲ್ಲದಿದ್ದಲ್ಲಿ ಮಾನಸಿಕ ಚಿಕಿತ್ಸೆಯೂ ಅನಿವಾರ್ಯವೇ. ಈಗ ನಮ್ಮ ಸಮಾಜಕ್ಕೆ ಬೇಕಾಗಿರುವುದು ಸಂಪೂರ್ಣ ಚಿಕಿತ್ಸೆ. ಮಾನವ ಪ್ರೀತಿಯನ್ನು ಉದ್ಬೋಧಗೊಳಿಸಿ ಅಂತರವನ್ನು ಮುಚ್ಚಿಹಾಕಬೇಕಾಗಿದೆ. ಇದಕ್ಕಾಗಿ ಬದುಕಿನ ಬಗೆಗೆ ಆಸಕ್ತಿ ಇರುವವರೆಲ್ಲ ಶ್ರಮಿಸಬೇಕಾಗಿದೆ. ಇದಕ್ಕೆ ಪೂರಕವಾಗಿ ಅನೇಕರು ತಮ್ಮ ಸಾಹಿತ್ಯ ಕೃತಿಗಳ ಮೂಲಕ ಈಗಾಗಲೇ ಚಾಲನೆಯನ್ನು ನೀಡಿದ್ದಾರೆ. ನನ್ನ ಅಧ್ಯಯನದ ಮಿತಿಗೊಳಪಟ್ಟಂತೆ ಈ ಕುರಿತಿರುವ ಲೇಖಕಿಯರ ಬರವಣಿಗೆಯ ನೆಲೆಯನ್ನು ಗುರುತಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗುತ್ತದೆ.

ಹೆಣ್ಣು-ಗಂಡಿನ ನಡುವಿನ ಆಕರ್ಷಣೆಗೆ, ಪ್ರೀತಿಗೆ ಜಾತಿ-ಧರ್ಮಗಳ ಅಡತಡೆಗಳಿಲ್ಲ. ಪುರಾಣಗಳಲ್ಲಿ, ಚರಿತ್ರೆಯಲ್ಲಿ ಇದಕ್ಕೆ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಈ ಪ್ರೀತಿ ಸಾರ್ವಕಾಲಿಕವಾದ್ದರಿಂದ ಎಲ್ಲ ಕಾಲಕ್ಕೂ ಒಲಿದ ಜೀವಿಗಳು ಒಂದಾಗಲು ಪ್ರಯತ್ನಿಸುವುದೂ ಅಷ್ಟೇ ಸಹಜವಾದುದಾಗಿದೆ. ಧರ್ಮ-ಜಾತಿಗಳ ಗೋಡೆಗಳು ಹೀಗೆ ಒಂದಾಗುವುದನ್ನು ತಡೆಯಲು ಏನೇನೋ ಹುನ್ನಾರ ಮಾಡುವುದು ಎಂದಿನಿಂದಲೂ ನಡೆದೇ ಇದೆ. ಆತ್ಮೀಯರು. ಬಂಧುಗಳು, ಸ್ನೇಹಿತರು, ಊರಿನ ಮುಂದಾಳುಗಳು

ಯಾರಾದರೂ ಇರಬಹುದು. ತಮ್ಮ ಜಾತಿ-ಧರ್ಮಗಳ ಪಾವಿತ್ರ್ಯವನ್ನು ಉಳಿಸಿಕೊಳ್ಳಲು ಪ್ರೀತಿಸಿದವರು ಮದುವೆಯಾಗಿ ಒಟ್ಟಾಗಿ ಬದುಕದಂತೆ ಮಾಡುವುದು ಅವರ ಘನೋದ್ದೇಶವಾಗಿರುತ್ತದೆ. ತನ್ನ ಸಂಗಾತಿಯನ್ನು ತಾನೇ ಆರಿಸಿಕೊಳ್ಳುವ ಪರಿಕಲ್ಪನೆಯನ್ನು ಸತ್ಯವಾನ-ಸಾವಿತ್ರಿಯ ಕತೆಯಲ್ಲಿ ಕಾಣುತ್ತೇವಾದರೂ ಅದೊಂದು ಅಪವಾದವೆಂದೇ ಗ್ರಹಿಸಬೇಕಾಗುತ್ತದೆ. ಹಿರಿಯರು ನಿಶ್ಚಯಿಸಿದ ವರ-ವಧುವನ್ನು ಕೈಹಿಡಿಯುವುದು ಒಂದು ವ್ಯವಸ್ಥೆಯಾಗಿ ನಡೆದು ಬಂದಿದೆ. ಹೀಗಿರುವಾಗ, ತಾನು ಬಯಸಿದ ವ್ಯಕ್ತಿಯೊಡನೆ ಮದುವೆಯಾಗುವುದನ್ನು ಸಮಾಜ ಸುಲಭವಾಗಿ ಒಪ್ಪಿಕೊಳ್ಳದು. ಜಾತಿಯೊಳಗಿನ ಮದುವೆಯೇ ಉತ್ತಮ, ಶ್ರೇಷ್ಠ, ಸರಿಯಾದ ಕ್ರಮ ಎಂಬ ಘನವಾದ ನಂಬಿಕೆ ವ್ಯಾಪಕವಾಗಿರುವಾಗ, ಅದಕ್ಕೆ ಹೊರತಾದ ವೈವಾಹಿಕ ಸಂಬಂಧ ಬೆಳೆಸಲು, ಸಾಮಾಜಿಕ ಮನ್ನಣೆ ನೀಡಲು ನಮ್ಮ ಸಾಂಪ್ರದಾಯಿಕ ಮನೋಭಾವ ಅಡ್ಡಿಯಾಗಿದೆ.

ಅಂತರ್ಜಾತೀಯ, ಅಂತರ್ಧರ್ಮೀಯ ಮದುವೆಗಳನ್ನು ತಿರಸ್ಕರಿಸುವವರು ತಮ್ಮ ವೈವಾಹಿಕ ಸಂಬಂಧವನ್ನು ಪರಶೀಲಿಸಿದಲ್ಲಿ ಅವರ ಒಣ ಪ್ರತಿಷ್ಠೆ ಎಷ್ಟು ಜೊಳ್ಳು ಎನ್ನುವುದೂ ಗೊತ್ತಾಗುತ್ತದೆ. ಆದರೆ ಆ ಬಗೆಗೆ ಕಿಂಚಿತ್ತೂ ಅರಿವಿರದೆ, ಈಚನೂರು ಜಯಲಕ್ಷ್ಮಿಯವರ 'ತಿರುವು'(ಆವರಣ) ಕತೆಯ ವೇಣುಗೋಪಾಲನಂತೆ ಇಷ್ಟಪಟ್ಟವರೊಡನೆ ಮದುವೆಯಾಗುವವರನ್ನು ವಿರೋಧಿಸುವವರೇ ಹೆಚ್ಚು. ಆತನ ತಂಗಿ ಭಾಗೀರಥಿ ಕಾಲೇಜಿನಲ್ಲಿ ಉಪನ್ಯಾಸಕಿಯಾಗಿದ್ದವಳು. ಆರ್ಥಿಕವಾಗಿ ಸ್ವಾವಲಂಬಿ. ಆಕೆ ಪ್ರೀತಿಸುತ್ತಿದ್ದುದು ಅನ್ಯಜಾತಿಯವನನ್ನು, ಆತ ಸದ್ಗುಣಿಯಾಗಿದ್ದರೂ ವೇಣುಗೋಪಾಲನ ದೃಷ್ಟಿಯಲ್ಲಿ ಅವನು ಯೋಗ್ಯನಲ್ಲ. ಆತನ ಹೆಂಡತಿ ಅರುಂಧತಿ ಅವರಿಬ್ಬರೂ ಮದುವೆಯಾಗಲು ಸಹಾಯ ಮಾಡುತ್ತಾಳೆ. ಇದರಿಂದ ಕುಪಿತನಾಗುವ ವೇಣುಗೋಪಾಲ ಅರುಂಧತಿ ಮನೆಬಿಟ್ಟು ಹೋಗುವಂತೆ 'ಅಪ್ಪಣೆ' ಮಾಡುತ್ತಾನೆ. ಅವನಿಂದ ಸಾಕಷ್ಟು ಹಿಂಸೆ ಅನುಭವಿಸಿದ್ದ ಅರುಂಧತಿ ಬ್ಯಾಂಕಿನಲ್ಲಿ ಉದ್ಯೋಗ ಹಿಡಿದು ಬದುಕುವ ದಾರಿ ಕಂಡುಕೊಳ್ಳುತ್ತಾಳೆ. ತನ್ನ ಅಧಿಕಾರವನ್ನು ಸ್ಥಾಪಿಸುವ, ಮುಖಾಮುಖಿಯಾಗುವ ಸನ್ನಿವೇಶಕ್ಕೆ ಎಳ್ಳಷ್ಟೂ ಅಳುಕದ ಅರುಂಧತಿ "ಸಾವಿರ ರುಪಾಯಿ ಸಂಬಳ ಬರ್ತಿದ್ದ ಉದ್ಯೋಗವನ್ನು ಯಾವತ್ತು ಬಿಟ್ಟೆನೋ ಅವತ್ತೇ ನಾನು ಈ ಮನೆ ಅಧಿಕಾರ ತಗೊಂಡೆ".(ಪು-೩೨) ಎಂದು ನಿರ್ಭೀತಿಯಿಂದ ಗಂಡನಿಗೆ ಹೇಳುವುದರಲ್ಲಿ ಅವಳ ಗಟ್ಟಿತನವನ್ನು ಕಾಣಬಹುದು. ಜಾತಿಯೊಳಗೇ ಮದುವೆಯಾದ ಅರುಂಧತಿ ಗಂಡನಿಂದ ಬೇರೆಯಾಗಿ ಬದುಕುವ ಪರಿಸ್ಥಿತಿ ಎದುರಾದುದನ್ನು ಚಿತ್ರಿಸುವ ಕತೆಯ ವ್ಯಂಗ್ಯ ಪರಿಣಾಮಕಾರಿಯಾಗಿದೆ. ಎಷ್ಟೋ ವರ್ಷಗಳ ಕಾಲ ಒಟ್ಟಾಗಿ ಬದುಕಿದ್ದರೂ ತನ್ನ ಮಾತನ್ನು ಧಿಕ್ಕರಿಸಿದಳೆಂಬ ಕಾರಣಕ್ಕೆ ಮನೆ ಬಿಟ್ಟು ಹೋಗುವಂತೆ ಮಾಡುವ ವೇಣುಗೋಪಾಲನ 'ಜಾತಿಪ್ರಜ್ಞೆ'ಯ ಅಮಾನವೀಯತೆಯನ್ನು ಕೃತಿ ಸೂಕ್ಷ್ಮವಾಗಿ ಲೇವಡಿ ಮಾಡುತ್ತದೆ. ಅಂತರ್ಜಾತೀಯ ವಿವಾಹಕ್ಕೆ ತೋರಿದ ಪ್ರತಿಕ್ರಿಯೆಯ ಸಂದರ್ಭ ಜಾತಿಯೊಳಗಿನ ಮದುವೆಯ

'ಸಾರ್ಥಕತೆ'ಯನ್ನು ತೆರೆದಿಡಲು ಸಹಕಾರಿಯಾಗುತ್ತದೆ. ಮಹಿಳೆಯರ ನಡುವಿನ ಸಹೋದರಿತ್ವಕ್ಕೆ ಕತೆ ಒತ್ತು ನೀಡುತ್ತದೆ.

ವಿದ್ಯಾವಂತರು ಕೂಡ ಅಂತರ್ಜಾತೀಯ ವಿವಾಹವನ್ನು ಒಪ್ಪುವುದು ವಿರಳ. ಕೆಲವೊಮ್ಮೆ ಪ್ರೀತಿ, ಪ್ರೇಮ ಎನ್ನುವುದೆಲ್ಲ ಯೌವ್ವನದ ಆಕರ್ಷಣೆ, ಅದರಿಂದ ವಿಮುಖರನ್ನಾಗಿಸುವುದು ಸುಲಭ ಎಂದು ಲೆಕ್ಕಾಚಾರ ಹಾಕುವುದೂ ಇದೆ. ಇಂತಹ ಲೆಕ್ಕಾಚಾರ ತಪ್ಪಿದಾಗ ಆಗುವ ಅನಾಹುತವನ್ನು ಎಂ.ಎಸ್ .ವೇದಾ ಅವರ 'ಪ್ರೀತಿ ಕಡಲು ಬದುಕು ಇತ್ಯಾದಿ' (ಪ್ರೀತಿ ಮತ್ತು ಸಾವು) ಕತೆ ಕಂಡರಿಸುತ್ತದೆ. ಮಯೂರ ತಾನು ಅನ್ಯಜಾತಿಯ ಹುಡುಗನನ್ನು ಪ್ರೀತಿಸುತ್ತಿರುವುದಾಗಿ ತಿಳಿಸಿದಾಗ ನರಸಿಂಹಾವತಾರ ತಾಳಿ ಮಗಳನ್ನು ಹೊಡೆದಿದ್ದ ಶ್ರೀನಿವಾಸರಿಗೆ ಮಗ ತಾನು ಪ್ರೀತಿಸುತ್ತಿರುವ ಹುಡುಗಿ ತಮ್ಮ ಜಾತಿಯವಳಲ್ಲವೆಂದು ತಿಳಿಸಿದಾಗ ಸಿಟ್ಟು ಮಾಡಲು ಸಾಧ್ಯವಾಗುವುದಿಲ್ಲ. "ನನ್ನ ಮುದ್ದು ಮಯೂರಳನ್ನು ನುಂಗಿ ನೊಣೆದ ದುರಂತಕ್ಕೆ ಜೀವಂತ ಸಾಕ್ಷಿಯಾಗಿದ್ದುಕೊಂಡೂ ಮತ್ತೆಯೂ ನನ್ನ ಮುಂದೆ ಪ್ರೀತಿಯ ಮಾತನಾಡ್ತೀಯಾ ರವಿ?" ಎಂದು ಹೇಳಲಿಕ್ಕಷ್ಟೇ ಅವರಿಗೆ ಶಕ್ಯವಾಗುತ್ತದೆ. ಅಪ್ಪನ ಆರ್ಭಟಕ್ಕೆ ಹೆದರಿ ಮಗಳು ಕಡಲ ಒಡಲಿಗೆ ತನ್ನನ್ನು ಅರ್ಪಿಸಿದ ನೆನಪು ಅವರನ್ನು ಸಾಕಷ್ಟು ಘಾಸಿಗೊಳಿಸಿರುತ್ತದೆ. ಪ್ರೀತಿಯ ಬಗೆಗೆ ಅಪ್ಪ ಹೇಳುವ ಮಾತನ್ನು ರವಿ ಒಪ್ಪುವುದಿಲ್ಲ. "ಪ್ರೀತಿ ಸೃಷ್ಟಿಶೀಲ ಪ್ರಕ್ರಿಯೆಯುಳ್ಳ ವಸ್ತು ಕಣಪ್ಪಾ, ಅದು ಯಾವತ್ತೂ ನಾಶವನ್ನು ಪ್ರತಿಪಾದಿಸಿಲ್ಲ" (ಪು೧-೧೩೬) ಎನ್ನುವ ಅಭಿಪ್ರಾಯವೇ ಕತೆಯ ತಾತ್ವಿಕ ನಿಲುವೂ ಆಗಿದೆ. 'ಅದು ನಾಶದ ಮೌಲ್ಯಾನ ಪ್ರತಿಪಾದಿಸಿದ್ದೇ ಆದರೆ ಅದು ನಿಮ್ಮಂತಹವರಿಂದ' ಎನ್ನುವ ರವಿಯ ಅನಿಸಿಕೆ ಕತೆ ಪ್ರತಿಪಾದಿಸುವ ಸಿದ್ಧಾಂತವೇ ಆಗಿದೆ. ಹಿಂದಿನ ಕಹಿನೆನಪು ರವಿಯ ಆಶಯವನ್ನು ಮೊಟಕುಗೊಳಿಸದಂತೆ ಶ್ರೀನಿವಾಸರನ್ನು ತಡೆಯುತ್ತದೆ. "ನಿನ್ನ ಬದುಕಿಗೆ ನಾನೂ ಬೆಲೆ ಕೊಡ್ತೀನಿ. ಬದುಕನ್ನು ಕೊಟ್ಟೆ ಅನ್ನೋ ತಂದೆಯ ಅಧಿಕಾರದಿಂದ ಅದನ್ನು ಕಸಿದುಕೊಳ್ಳುವ ಪ್ರಯತ್ನವನ್ನು ನಾನು ಎರಡನೆಯ ಬಾರಿಯೂ ಮಾಡಲಾರೆ, ಹಾಗೆ ಮಾಡಿ, ಪ್ರಾಣಿಗೂ ಕಡೆಯಾಗಲಾರೆ"(ಪುಟ-೧೪೮) ಎಂದು ರವಿಯೊಂದಿಗೆ ಶ್ರೀನಿವಾಸರು ಆಡುವ ಮಾತುಗಳಲ್ಲಿ ಅವರ ಬದಲಾದ ಮನೋಭಾವ ಹಾಗೂ ಮಗಳ ವಿಷಯದಲ್ಲಿ ತಾವು ತಪ್ಪು ಮಾಡಿರುವ ಬಗೆಗಿನ ಪಶ್ಚಾತ್ತಾಪ ಎರಡೂ ಮಿಳಿತವಾಗಿರುವುದನ್ನು ಕಾಣಬಹುದು. ಪ್ರೀತಿಯ ಎದುರಿಗೆ ಜಾತಿ-ಧರ್ಮಗಳಾಗಲೀ, ಹಿರಿಯರ ಒತ್ತಡಗಳಾಗಲೀ ಮುಖ್ಯವಾಗುವುದಿಲ್ಲ ಎನ್ನುವುದನ್ನು ರವಿಯ ಆಲೋಚನೆ ಹಾಗೂ ಮಯೂರಳ ಕ್ರಿಯೆ ತೆರೆದಿಡುತ್ತವೆ. ತಂದೆಯನ್ನು ಎದುರಿಸಲಾಗದ ಮಯೂರಳ ಅಸಹಾಯಕತೆ ಅವಳನ್ನು ಸಾವಿಗೆ ದೂಡಿದ್ದರೆ, ರವಿಯನ್ನು ಪ್ರೀತಿಸುತ್ತಿದ್ದ ನಂದಾಳ ಗಟ್ಟಿತನದೆದುರು ಅವಳ ಹೆತ್ತವರು ಸೋಲುವಂತಾಗುತ್ತದೆ. ಯಾವುದೇ ಸನ್ನಿವೇಶ ಎದುರಾದಾಗಲೂ ಅದನ್ನು ಎದುರಿಸುವ ತಾಕತ್ತಿದ್ದಾಗ, ಎಂತಹ ಪರಿಸ್ಥಿತಿಯಲ್ಲೂ ತನ್ನ ನಿಲುವಿಗೇ ಬದ್ಧವಾಗಿರುವ ಅಚಲ

ವಿಶ್ವಾಸ ಹೊಂದಿದ್ದಾಗ ವ್ಯಕ್ತಿ ಬದುಕಿನಲ್ಲಿ ಗೆದ್ದೇ ಗೆಲ್ಲುತ್ತಾನೆನ್ನುವುದು ಕತೆಯ ದನಿಯಾಗಿದೆ.

ಮದುವೆಯಾಗಲು ಬೇರೆ ಜಾತಿಯವಳೆಂದು ನಿರಾಕರಿಸುವ ಜನ ಅವಳೊಂದಿಗಿನ ಲೈಂಗಿಕ ಸಂಬಂಧವನ್ನು ನಿರಾಕರಿಸುವುದಿಲ್ಲ. ಪುರುಷನ ತುರ್ತಿಗೆ ಯಾವ ಜಾತಿಯ ಮಹಿಳೆಯಾದರೂ ಅಡ್ಡಿಯೇನಿಲ್ಲ. ಆದರೆ ವಂಶ ಮುಂದುವರಿಸುವಂತಹ ಪುತ್ರನನ್ನು ಹೆರಲು ಮಾತ್ರ ಆತನ ಜಾತಿಯ ಹೆಣ್ಣೇ ಆಗಬೇಕು. ಇಂತಹ ವ್ಯವಸ್ಥೆಯನ್ನು ಪುರುಷ ತನ್ನ ಸ್ವಾರ್ಥಕ್ಕಾಗಿ ಮಾಡಿಕೊಂಡ. ಗೀತಾ ಕುಲಕರ್ಣಿಯವರ 'ವಿಕೃತಿ'(ಪಾತಾಳ) ಕತೆಯ ವಾಸುಮಾವನಂತೆ ಅನ್ಯ ಜಾತಿಯ ಹುಡುಗಿಯೆಂದು ಆಕೆಯನ್ನು ಬಳಸಿಕೊಳ್ಳಲು ಪ್ರಯತ್ನಿಸುವವರೂ ಇರುತ್ತಾರೆ. ಬೇರೆ ಜಾತಿಯ ಹುಡುಗಿ ವೃಂದಾಳನ್ನು ಮದುವೆಯಾಗಿರುವ ಗೋಪಾಲ ತಂದೆ, ತಾಯಿ, ಸೋದರಮಾವ ಇರುವ ಮನೆಯಲ್ಲಿಯೇ ವೃಂದಾಳೊಂದಿಗೆ ವಾಸವಾಗಿರುತ್ತಾನೆ. ಜಾತಿಯ ಕಾರಣದಿಂದ ಅವಳನ್ನು ತುಚ್ಛೀಕರಿಸಿ ಮಾತನಾಡುತ್ತಿದ್ದ ವಾಸುಮಾವ ಸದಾ ಪೂಜೆಯಲ್ಲಿ ಮುಳುಗಿರುವವನು. ಗೋಪಾಲ ಟೂರಿಗೆ ಹೋದಾಗ ಸದ್ದಿಲ್ಲದೆ ವೃಂದಾಳ ಕೋಣೆಗೆ ಬರುವ ವಾಸುಮಾವ ಅವಳಿಗೆ ಗೊತ್ತಾಗುತ್ತಿದ್ದಂತೆ ನಾಚಿಕೊಂಡು ಕ್ಷಮೆ ಯಾಚಿಸುತ್ತಾನೆ. ಮೂರನೆಯ ದಿನ ಪ್ರಸಾದ ಸ್ವೀಕರಿಸಲು ಅವಳನ್ನು ದೇವರ ಮನೆಗೆ ಕರೆಯುತ್ತಾನೆ. ಮಡಿಯೆಂದು ಹಾರಾಡುವವರ ಢೋಂಗಿತನವನ್ನು ಕತೆ ಬತ್ತಲುಗೊಳಿಸುತ್ತದೆ. ಕೀಳೆಂದು ಜರಿದಿದ್ದ ಹೆಣ್ಣೇ ಅಪಹಾಸ್ಯ ಮಾಡಿದವನ ಮರ್ಯಾದೆ ಉಳಿಸಿ, ಔದಾರ್ಯದಿಂದ ವರ್ತಿಸಿದುದು ಶ್ರೇಷ್ಠ ಕನಿಷ್ಠ ಎಂಬ ಸಾಂಪ್ರದಾಯಿಕ ಪರಿಕಲ್ಪನೆಯ ಬುನಾದಿಯನ್ನು ಅಲುಗಾಡಿಸಿದಂತಾಗುತ್ತದೆ. ಜಾತಿಗಿಂತ ಮನುಷ್ಯ ಸಂಬಂಧ ದೊಡ್ಡದು ಎನ್ನುವುದು ಕತೆಯ ನಿಲುವಾಗಿದೆ.

ಜಾತಿಯೊಳಗಿನ ವಿವಾಹ ಎನ್ನುವುದು ಒಂದು ಒಪ್ಪಿತ ಮೌಲ್ಯ. ಅದಕ್ಕೆ ಹೊರತಾದ ಸಂಬಂಧವನ್ನು ಸಮಾಜವು ಸಾರಾ ಸಗಟಾಗಿ ತಿರಸ್ಕರಿಸುತ್ತದೆ. ಆಗೊಮ್ಮೆ ಈಗೊಮ್ಮೆ ಅಂತಹ ಮದುವೆಗಳು ನಡೆಯುತ್ತಿವೆಯಾದರೂ ಅದಕ್ಕೆ ಒಪ್ಪಿಗೆ ಮುದ್ರೆ ಬೀಳುವುದು ಅಪರೂಪ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬದುಕುತ್ತಿರುವುದರಿಂದ ಪ್ರಬುದ್ಧರಾದ ಗಂಡು-ಹೆಣ್ಣುಗಳು ಅಂತರ್ಜಾತೀಯ, ಅಂತರ್ಧರ್ಮೀಯ ವಿವಾಹವಾದಾಗ ಸುತ್ತಲಿನವರು ಅನಿವಾರ್ಯವಾಗಿ ಸುಮ್ಮನಿರಬೇಕಾಗುತ್ತದೆ. ನಮ್ಮ ಕಾನೂನಿನಲ್ಲಿ ಅಂತಹವರಿಗೆ ರಕ್ಷಣೆ ಇರುವುದು ಇದಕ್ಕೆ ಕಾರಣ. ಹಲವು ವೇಳೆ ಆರ್ಥಿಕವಾಗಿ ಸ್ವಾವಲಂಬಿಗಳಾಗಿದ್ದಲ್ಲಿ ಭಾವನಾತ್ಮಕ ಸಂಬಂಧವನ್ನು ಕಡಿದುಕೊಳ್ಳಲು ತಯಾರಾಗುವುದಿದೆ. ಅದು ಸಾಧ್ಯವೂ ಆಗುತ್ತದೆ. ತಾನು ಮೆಚ್ಚಿದ ಹುಡುಗಿಯನ್ನು ಮನೆಯವರ ಇಚ್ಛೆಗೆ ವಿರುದ್ಧವಾಗಿ ಒಬ್ಬ ಹುಡುಗ ಮದುವೆಯಾದಷ್ಟು ಸುಲಭವಾಗಿ ಒಬ್ಬ ಹುಡುಗಿಗೆ ಸಾಧ್ಯವಾಗುವುದಿಲ್ಲ. ಮಗನ ತಪ್ಪನ್ನು (ಅವರ ದೃಷ್ಟಿಯಲ್ಲಿ) ಮನ್ನಿಸಿದಷ್ಟು ಸುಲಭವಾಗಿ ಒಬ್ಬ ಹುಡುಗಿಗೆ ಮನ್ನಿಸಲಾರರು. ಗೀತಾ ಕುಲಕರ್ಣಿಯವರ 'ಮಂಥನ'(ಪಾತಾಳ) ಕತೆಯ ಸುಪರ್ಣಾಳಿಗಾದಂತೆ

ಅಪರೂಪವಾಗಿಯಾದರೂ ಹಿರಿಯರ ಒಪ್ಪಿಗೆ ದೊರೆಯುವುದೂ ಇದೆ. ತನ್ನ ಆಫೀಸಲ್ಲಿ ಕೆಲಸ ಮಾಡುತ್ತಿದ್ದ ಅನ್ಯಜಾತಿಯ ಹುಡುಗನನ್ನು ಪ್ರೇಮಿಸುತ್ತಿರುವುದಾಗಿ ಸುಪರ್ಣ ತಿಳಿಸಿದಾಗ ತಾಯಿ-ಅಜ್ಜಿಯರು ಮೌನವಹಿಸುತ್ತಾರೆ. ಅವಳಿಗೆ ಆರ್ಥಿಕ ಭದ್ರತೆ ಇದ್ದುದರಿಂದ ಇಬ್ಬರೂ ಯೋಚಿಸುವಂತಾಗುತ್ತದೆ. ತಮ್ಮ ಅಭಿಪ್ರಾಯವನ್ನು ಕೇಳದೆ ನಡೆದ ಮದುವೆಯಿಂದಾಗಿ ತಾವು ಅನುಭವಿಸಿದ ನೋವು ಯಾತನೆ ಎಷ್ಟೆನ್ನುವುದನ್ನು ನೆನೆಪಿಸಿಕೊಂಡ ಇಬ್ಬರೂ ಸುಪರ್ಣ ಇಚ್ಛಿಸಿದವನೊಂದಿಗೆ ಮದುವೆಯಾಗಿ ನೆಮ್ಮದಿಯಿಂದಿರಲೆಂಬ ತೀರ್ಮಾನಕ್ಕೆ ಬರುತ್ತಾರೆ. ಜಾತಿಯೊಳಗೇ ನಡೆಯುವ ಮದುವೆಯ ಸಾಫಲ್ಯದ ಬಗೆಗೆ ಚಿಂತನ-ಮಂಥನ ಮಾಡಿದ ಅಜ್ಜಿ-ತಾಯಿಯರಿಗೆ ಸಾಮಾಜಿಕ ಮೌಲ್ಯವನ್ನು ವೈಯಕ್ತಿಕವಾಗಿ ತಿರಸ್ಕರಿಸಲು ಸಾಧ್ಯವಾಗುತ್ತದೆ. ಒಲ್ಲದ ಮದುವೆಗಿಂತ ಒಲಿದವರು ಮದುವೆಯಾಗುವುದೇ ಉತ್ತಮ ಎಂಬ ಧೋರಣೆ ಕತೆಯ ಹಿಂದೆ ಕೆಲಸ ಮಾಡುತ್ತದೆ.

ಜಾತಿಯಂತೆಯೇ ಸಾಮಾಜಿಕ ಅಂತಸ್ತು ಕೂಡ ವೈವಾಹಿಕ ಸಂಬಂಧದಲ್ಲಿ ಮುಖ್ಯವಾಗುತ್ತದೆ. ತೀರ ಬಡವರ ಮನೆಯ ಹುಡುಗಿಯನ್ನು ಮಗನಿಗೆ ಮದುವೆ ಮಾಡಿಸಿಕೊಳ್ಳಲು ಹೆತ್ತವರು ಮುಂದಾಗುವುದಿಲ್ಲ. ಈ ವಿಷಯ ಗೊತ್ತಿರುವಾಗಲೂ ಬಡವರ ಮನೆಯ ಹುಡುಗಿಯೊಂದಿಗೆ ಲಲ್ಲೆಹೊಡೆದು ಆಮೇಲೆ ಕೈಕೊಡುವ ಶೂರರಿಗೇನು ಕೊರತೆಯಿಲ್ಲ. ಬೇರೆಯವರ ದೃಷ್ಟಿಯಲ್ಲಿ ತಪ್ಪು ಹುಡುಗಿಯದೇ ಆಗಿರುತ್ತದೆ ಎನ್ನುವುದು ಗೊತ್ತಿರುವ ಸಂಗತಿ. ಎಷ್ಟೇ ಗಟ್ಟಿತನ ಪ್ರದರ್ಶಿಸಿದರೂ ಅದಕ್ಕೆ ಪ್ರತಿಯೇಟು ಹಾಕುವ ಗಂಡಿನ ಸ್ವಾರ್ಥ ಹಾಗೂ ಗಂಡಸು ಏನು ಮಾಡಿದರೂ ನಡೆಯುತ್ತದೆ ಎನ್ನುವ ಸಾಮಾಜಿಕ ಧೋರಣೆಗಳು ಹೆಣ್ಣನ್ನು ಎಂಥ ಇಕ್ಕಟ್ಟಿಗೆ ಸಿಲುಕಿಸುತ್ತವೆ ಎನ್ನುವುದಕ್ಕೆ ಗಂಗಾ ಪಾದೇಕಲ್ ಅವರ 'ಜಾನಕಿಯ ಡೈರಿಯ ಪುಟುಗಳು' (ಪುಲಪೇಡಿ ಮತ್ತು ಇತರ ಕಥೆಗಳು) ಉದಾಹರಣೆಯನ್ನೊದಗಿಸುತ್ತದೆ. ದೇವಸ್ಥಾನದ ಅರ್ಚಕರ ಮಗಳು ಜಾನಕಿಯನ್ನು ಒಡೆಯನ ಮಗ ವಕೀಲ ಮಾಧವ ತನ್ನ ನವಿರಾದ ಮಾತುಗಳಿಂದ ಮರುಳುಗೊಳಿಸುತ್ತಾನೆ. ಮದುವೆಯಾಗುವುದಾಗಿ ನಂಬಿಸಿ ದೈಹಿಕ ಸಂಬಂಧವನ್ನೂ ಬೆಳೆಸುತ್ತಾನೆ. ಆಕೆ ಗರ್ಭಿಣಿಯೆಂದು ತಿಳಿಯುತ್ತಲೇ ಮದುವೆಯಾಗಲು ನಿರಾಕರಿಸುತ್ತಾನೆ. ಅಷ್ಟೇ ಅಲ್ಲದೆ, "ದಿನಾ ಕಡಲ ತೀರಕ್ಕೆ ಬರುವವಳು ನೀನು. ಯಾರಿಗೆ ಬಸುರಾದೆಯೋ ಏನೋ, ಈಗ ನಾನೊಬ್ಬ ಬಕರಾ ಸಿಕ್ಕಿದೆ ನಿನಗೆ, ಇವನನ್ನು ಹಿಡಿದರೆ ಸುಲಭವಾಗಿ ಅರಮನೆಯ ಒಡತಿಯಾಗಬಹುದೆಂದು ಲೆಕ್ಕಾಚಾರ ಹಾಕಿದೆ" (ಪು.೭೮) ಎನ್ನುವ ಭಂಡತನಕ್ಕೂ ಇಳಿಯುತ್ತಾನೆ. ಅನಿವಾರ್ಯವಾಗಿ, ಜಾನಕಿ ಮಗುವಿನ ರಕ್ತ ಪರೀಕ್ಷೆಯ ಮೂಲಕ ಪಿತೃತ್ವವನ್ನು ಕಂಡು ಹಿಡಿಯುವ ಬೆದರಿಕೆ ಒಡ್ಡಬೇಕಾಗುತ್ತದೆ. ಇದಕ್ಕೆ ಹೆದರಿ ಅವಳನ್ನು ಮದುವೆಯಾಗುವ ಮಾಧವ ವೈದ್ಯರೊಂದಿಗೆ ಕುತಂತ್ರ ಮಾಡಿ ಮಗುವನ್ನು ಸಾಯಿಸಿ ಅವಳನ್ನು ತವರಿಗೆ ಅಟ್ಟುತ್ತಾನೆ. ತಂದೆಗೂ ತನ್ನ ಮೇಲೆ ಗುಮಾನಿ ಎನ್ನುವುದು ತಿಳಿದಾಗ

ಜಾನಕಿ ಆತ್ಮಹತ್ಯೆಗೆ ಮುಂದಾಗುತ್ತಾಳೆ. ಆ ಹೊತ್ತಿನಲ್ಲಿ ತಾಯಿ "ಈಗ ನೀನು ನೀರಿಗೆ ಬಿದ್ದರೆ ನಿನ್ನ ಮೇಲಿನ ಅಪವಾದ ಹೋಗುತ್ತದೆಯೇ? ಈಸಬೇಕು ಇದ್ದು ಜೈಸಬೇಕು. ಯಾರು ನಿನ್ನನ್ನು ನಂಬದಿದ್ದರೂ ನಾನು ನಿನ್ನನ್ನು ನಂಬುತ್ತೇನೆ" ಎಂಬ ಭರವಸೆ ನೀಡಿ ಅವಳನ್ನು ಉಳಿಸಿಕೊಳ್ಳುತ್ತಾಳೆ. ಗಂಡನ ಪಿತೂರಿಯಲ್ಲಿ ಅತ್ತೆಯೂ ಸೇರಿರುತ್ತಾಳೆ. ಗಂಡಿನ ತಾಯಿಯೆಂಬ ಅಹಮಿಕೆ ಅವಳನ್ನು ಈ ಕೆಲಸಕ್ಕೆ ಪ್ರೇರೇಪಿಸುತ್ತದೆ. ಹೆಂಗಸಿಗೆ ಇನ್ನೊಂದು ಹೆಂಗಸಿನ ನೋವು ಅರ್ಥವಾಗಬೇಕು. ಮಧ್ಯೆ ಗಂಡಸಿನ ಸಂಬಂಧವಿದ್ದರೆ ಗಂಡಿನ ಕಡೆಗೇ ತಕ್ಕಡಿ ವಾಲುತ್ತದೆ. ಯಃಕಶ್ಚಿತ್ತ ಹೆಣ್ಣು ಹಿಂದಾಗಿ ವಂಶ ನಡೆಸುವ ಗಂಡಿನ ಮಾತು ಪ್ರಾಧಾನ್ಯವಾಗುತ್ತದೆ. ಯಾವ ವ್ಯಕ್ತಿಗೆ ಹೆಣ್ಣು ತನ್ನನ್ನು ತೆತ್ತು ಕೊಳ್ಳುತ್ತಾಳೋ ಆ ಗಂಡಸಿಗೂ ಅವಳ ನಡತೆ ಕಳಂಕದ್ದಾಗಿ ಕಾಣುತ್ತದೆ. ಗಂಡಸಿನ 'ಪಾವಿತ್ರ್ಯ'ಕ್ಕೆ ಮಾತ್ರ ಯಾವುದೇ ಧಕ್ಕೆ ಆಗುವುದಿಲ್ಲ.

ಸಮಾಜದ ಮೇಲುಸ್ತರದಲ್ಲಿರುವ ಜನ ಕೆಲಸ್ತರದವರನ್ನು ತಮ್ಮ ಸುಖಕ್ಕಾಗಿ, ಅನುಕೂಲಕ್ಕಾಗಿ ಇರುವವರೆಂದು ಭಾವಿಸುತ್ತ ಬಂದಿದ್ದಾರೆ. ಉಳ್ಳವರ ಅಟ್ಟಹಾಸಕ್ಕೆ, ಸ್ವಾರ್ಥಕ್ಕೆ ಬಲಿಯಾಗುವ ಕೆಳಗಿನ ಸ್ತರದ ಜನ ಅದನ್ನು ಪ್ರತಿಭಟಿಸಬೇಕೆನ್ನುವ ದನಿಯನ್ನು ಕಳೆದುಕೊಂಡು ಶತಶತಮಾನಗಳೇ ಕಳೆದಿವೆ. (ಇತ್ತೀಚಿನ ವರ್ಷಗಳಲ್ಲಿ ಪ್ರತಿಭಟನೆಯ ದನಿ ಕೇಳಿಬರುತ್ತಿದೆ) ಆಗೊಮ್ಮೆ ಈಗೊಮ್ಮೆ ದನಿಯೆದ್ದರೂ ಅದನ್ನು ಅಡಗಿಸುವ ಉಪಾಯ ಉಳ್ಳವರಿಗೆ ಕರಲಾಮಲಕ. ಜಮೀನ್ದಾರಿ ಪದ್ಧತಿಯಲ್ಲಂತೂ ಆತನ ಒಕ್ಕಲುತನ ಮಾಡುವ ಮನೆಯ ಹೆಂಗಸರು ಜಮೀನ್ದಾರನ ತೆವಲಿಗೆ ಬಲಿಯಾಗುವುದು ಸಹಜ ಎಂದು ಭಾವಸುವಂತಾಗಿತ್ತು. ಜಮೀನ್ದಾರಿ ಪದ್ಧತಿ ಅಳಿದರೂ ಅದರ ಪಳೆಯುಳಿಕೆಗಳು ಅಲ್ಲಲ್ಲಿ ಕಾಣಸಿಗುತ್ತವೆ. ಇಂತಹ ವ್ಯವಸ್ಥೆಯ ಕ್ರೌರ್ಯಕ್ಕೆ ಸಿಕ್ಕು ನಲುಗಿದ ಹೆಂಗಸಿನ ಸ್ಥಿತಿಯನ್ನು ಗೀತಾ ನಾಗಭೂಷಣರ ಹಲವು ಕೃತಿಗಳು ವಿವಿಧ ಕೋನಗಳಿಂದ ಅನಾವರಣಗೊಳಿಸುತ್ತವೆ.

'ನೀಲಗಂಗಾ' ಕಾದಂಬರಿಯ ಸ್ತ್ರೀಪಾತ್ರಗಳಿಗೆ ತಮಗಾಗುತ್ತಿರುವ ಅನ್ಯಾಯದ ಬಗೆಗೆ ಅರಿವಿದೆ. ಲಚ್ಚಿ, ನೀಲಗಂಗಾ, ಪಂಚಾಯಿತಿ ಕಟ್ಟೆಯಲ್ಲಿ ಮಾತಾಡುವ ಅಜ್ಜಿ ಇವರಿಗೆಲ್ಲ ಊರಿನ ಸಾಹುಕಾರರು ಕೆಳಜಾತಿಯ ಹೆಂಗಸರನ್ನು ಬೇಕಾದಂತೆ ಬಳಸಿ ಬಿಸಾಡುತ್ತಾರೆಂದು ಸಿಟ್ಟಿರುತ್ತದೆ. ಒಟ್ಟಾಗಿ ಪ್ರತಿಭಟಿಸಲಾರದ ತಮ್ಮ ಗಂಡಸರ ಮೇಲೂ ಆಕ್ರೋಶವಿರುತ್ತದೆ. ತನ್ನ ಆಳುಮಗ ಮಲ್ಲೇಶಿಯ ಹೆಂಡತಿಗೆ ಗಂಡನ ಜೀವಭಯವೊಡ್ಡಿ ತನ್ನ ತೆವಲಿಗೆ ಬಳಸಿಕೊಂಡ ಸಾವ್ಕಾರ ಕಾಳಿಂಗಪ್ಪನು ಪಂಚಾಯಿತಿ ಕಟ್ಟೆಯಲ್ಲಿ ಕೊಡುವ ನಿರ್ಣಯವು ಬೆಚ್ಚುವಂತೆ ಮಾಡುತ್ತದೆ. ರಾಮಪ್ಪ ಲಚ್ಚಿಯನ್ನು ಕೆಡಿಸಿದ್ದ ಎನ್ನುವುದೇ ಸುಳ್ಳೆಂದೂ, ಆತ ಹಳ್ಳಿಯಲ್ಲಿ ದೊಡ್ಡ ಮನುಷ್ಯನೆಂದೂ, ಗಂಡನಿಗೆ ಹಾಗೂ ರಾಮಪ್ಪನಿಗೆ ಲಚ್ಚಿ ಬದಲಾಮಿ ಮಾಡಿದ್ದಾಳೆಂದೂ ಹೇಳಿ ಆಕೆ ಹಳ್ಳಿ ಬಿಟ್ಟುಹೋಗಬೇಕೆಂಬುದಾಗಿ ನ್ಯಾಯ ನೀಡುತ್ತಾನೆ ಕಾಳಿಂಗಪ್ಪ. 'ಶೂದ್ರ ಹೆಂಗಸ್ರಿಗೆ ಬ್ರಾಂಬ್ರು ಮುಟ್ಟಿದರ ಅವ್ರು ಪವಿತ್ರ ಆಗ್ತಾರಂತ ನಮ್

ಪುರಾಣದೊಳಗೇ ಹೇಳ್ಯಾದ' ಎಂದು ಮಹಾಭಾರತದ ಉದಾಹರಣೆ ಕೊಡುವ ಕಾಳಿಂಗಪ್ಪ ತಮಗೆ ಬೇಕಾದಂತೆ ಪುರಾಣಗಳನ್ನು ಅರ್ಥೈಸುವ ಜನರ ಪ್ರತಿನಿಧಿಯಾಗಿ ಕಾಣುತ್ತಾನೆ. ಈ ನಿರ್ಣಯದಿಂದ ಆಘಾತಕ್ಕೊಳಗಾಗಿ ಲಚ್ಚಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ನೀಲಗಂಗಾ ಸಾವ್ಕಾರನ ಸಂಬಂಧ ತಿಳಿದ ಮಲ್ಲೇಶಿಯೂ ಅದೇ ದಾರಿ ಹಿಡಿಯುತ್ತಾನೆ. ಈ ಆಘಾತಕ್ಕೆ ಸಿಕ್ಕಿದ ನೀಲಗಂಗಾ ಹುಚ್ಚಿಯಾಗುತ್ತಾಳೆ. ಇದನ್ನೆಲ್ಲ ಕಂಡ ಅವಳ ತಮ್ಮ ವೀರಭದ್ರ ಕಾಳಿಂಗಪ್ಪನ ಮಗಳ ಸ್ನೇಹ ಗಳಿಸಿ, ಆತನನ್ನು ಸಾಯಿಸುವುದರ ಮೂಲಕ ಅಕ್ಕನಿಗಾದ ಅನ್ಯಾಯಕ್ಕೆ ಸೇಡು ತೀರಿಸಿಕೊಳ್ಳುತ್ತಾನೆ.

ಗಂಡನ ಎಲ್ಲ 'ಚಾಳಿ' ಗೊತ್ತಿದ್ದೂ ಏನನ್ನೂ ಮಾಡಲಾರದ ಅಸಹಾಯಕತೆ ಕಾಳಿಂಗಪ್ಪನ ಹೆಂಡತಿಯದು. ತಮ್ಮ ಹೆಂಗಸರು ಊರ ಸಾವ್ಕಾರರ ಕಾಮಕ್ಕೆ ಬಲಿಯಾಗುತ್ತಿರುವುದರ ಅರಿವಿದ್ದೂ ಏನನ್ನೂ ಮಾಡಲಾರದೆ ಸುಮ್ಮನಿರುವ ಗಂಡಸರ ನಿರ್ವೀರ್ಯತೆಯನ್ನು ಲಚ್ಚಿ ಮತ್ತು ನೀಲಗಂಗಾರ ನಡುವಿನ ಸಂಭಾಷಣೆ ಅನಾವರಣಗೊಳಿಸುತ್ತದೆ. ಲಚ್ಚಿಯನ್ನು ರಾಮಪ್ಪ ಕೆಡಿಸುತ್ತಿರುವುದನ್ನು ಕಣ್ಣಾರೆ ಕಂಡರೂ ಏನೂ ಮಾಡದೆ ಸುಮ್ಮನಿದ್ದ ಆಕೆಯ ಗಂಡನ ಮೇಲೆ ಅವರಿಬ್ಬರಿಗೂ ಅಸಾಧ್ಯ ಕೋಪ ಬರುತ್ತದೆ. 'ನಮ್ ಗಂಡಸರ ಮೀಸಿ ಅಂದ್ರ ಆಡಿನ ಕುತಿಗ್ಯಾನ ಮಲಿ ಇದ್ಹಾಂಗ. ಹೊಲಗೇರ್ಯಾಗ, ಕಬ್ಬಲಗೇರ್ಯಾಗ ಗಂಡಸಾಗಿ ಹುಟ್ಟದಕಿನ್ನ ಅಡವ್ಯಾಗ ಉಡು ಆಗಿ ಹುಟ್ಟಾದು ಬೇಸಿ... ಹಲ್ಲಾಗ ನಾಲ್ಗಿ ಇದ್ದೂ ನಮ್ ಗಂಡಗೋಳು ಗೋರ್ಯಾನ ಹೆಣಗೋಳ್ಹಂಗ ಬದುಕತಾವ. ದೊಡ್ಡ ಕುಲದವರ ಕಾಲಾನ ಕೆರು ಆಗಿ ಸಂವ್ಯಾದೇ ಇವುದರ ಬಾಳ್ಯಾ" (ಪು.೪೨) ಎನ್ನುವ ಲಚ್ಚಿಯ ಆಕ್ರೋಶದ ನುಡಿ ಇಡಿಯಾಗಿ ಆ ಪರಿಸರವನ್ನು ತೆರೆದಿಡುತ್ತದೆ. ಆರ್ಥಿಕ ಅಸಹಾಯಕತೆ, ಜಾತಿಯ ಕೀಳರಿಮೆ, ಅನಕ್ಷರತೆ, ಕುಡಿತ ಇವೆಲ್ಲ ಕೆಳಸ್ತರದ ಗಂಡಸರ ನಿರ್ವೀರ್ಯತೆಗೆ ಕಾರಣಗಳಾಗಿವೆ.ಇವಕ್ಕೆಲ್ಲ ಕಳಶವಿಟ್ಟಂತೆ ತಲೆತಲಾಂತರದಿಂದ ಮುಂದುವರಿಯುತ್ತ ಬಂದ ಜೀತಪದ್ಧತಿಯು ಅಶಕ್ತರ ಮೈಮನಗಳಲ್ಲಿ ಬೇರೂರಿ ಅವರ ಸ್ವಂತಿಕೆಯನ್ನು ಇಲ್ಲವಾಗಿಸಿ ಬಿಟ್ಟಿದೆ. ಕೆಲವು ಸಂದರ್ಭಗಳಲ್ಲಿ ಅಸಹಾಯಕತೆ ಅವರ ವಿವೇಚನೆಯನ್ನು ಕಬಳಿಸಿ ಲಚ್ಚಿಯ ಗಂಡನಂತೆ ತಮ್ಮ ಹೆಂಗಸರ ಮೇಲೇ ದಬ್ಬಾಳಿಕೆ ನಡೆಸುವುದೂ ಇದೆ. ಇಂತಹ ಇಕ್ಕಟ್ಟಿನಲ್ಲಿ ಬದುಕುವ ಹೆಣ್ಣು ಜೀವಗಳು ಉಸಿರೆತ್ತದೆ ನಲುಗಬೇಕಾಗುತ್ತದೆ. ಇಲ್ಲವೆ ಆತ್ಮಹತ್ಯೆ ಮಾಡಿಕೊಳ್ಳಬೇಕಾಗುತ್ತದೆ. ಧೈರ್ಯ, ಉಪಾಯಗಳಿದ್ದಲ್ಲಿ ಏಟಿಗೆ ಪ್ರತಿಯೇಟು ಕೊಡಲು ಸಾಧ್ಯ ಎನ್ನುವುದನ್ನು ವೀರನಭದ್ರನ ಕ್ರಿಯೆಯ ಮೂಲಕ ಕಾದಂಬರಿ ತೋರಿಸಿಕೊಡುತ್ತದೆ. ಇದರ ಅರಚನಾತ್ಮಕತೆ ಏನೇ ಇರಲಿ, ಉಳ್ಳವರಿಗೆ, ಅಟ್ಟಹಾಸದಿಂದ ಮೆರೆಯುವವರಿಗೆ ಇದೊಂದು ಎಚ್ಚರಿಕೆ ಎನ್ನುವುದನ್ನು ಮರೆಯುವಂತಿಲ್ಲ.

ತಂದೆ-ತಾಯಿಯರನ್ನು ಕಳೆದುಕೊಂಡ ಹೆಣ್ಣುಮಗಳೊಬ್ಬಳಿಗೆ ಆದ ಅನುಭವವನ್ನು 'ಹಸಿಮಾಂಸ ಮತ್ತು ಹದ್ದುಗಳು' ಕಾದಂಬರಿ ಕಂಡರಿಸುತ್ತದೆ. ಇಡಿಯಾಗಿ ಗಂಡಸು

ಜಾತಿಯನ್ನೇ ಹಸಿಮಾಂಸವನ್ನು ಕುಕ್ಕಿ ತಿನ್ನುವ ಹದ್ದುಗಳಿಗೆ ಹೋಲಿಸಲಾಗಿದೆ. ಲಚ್ಚಿಯ ಸಂಪರ್ಕಕ್ಕೆ ಬರುವ ಕಾಶಿನಾಥ, ಕುಲಕರ್ಣಿ, ಪೋಲೀಸರು, ಬಸಣ್ಣಿ ಎಲ್ಲರೂ ಅವಳನ್ನು ನಡೆಸಿಕೊಂಡಿದ್ದು ಹಾಗೆಯೇ. ಅವಳನ್ನು ಪ್ರೀತಿಸುತ್ತಿದ್ದ ಕಾಶಿನಾಥ ಅವಳ ಮೇಲೆ ಪೋಲೀಸರಿಂದ ಅತ್ಯಾಚಾರ ನಡೆದಿತ್ತೆಂಬ ವಿಷಯ ತಿಳಿಯುತ್ತಲೇ ಸಂಪೂರ್ಣ ವಿಮುಖನಾಗುತ್ತಾನೆ. ತನ್ನ ಮಾತಿಗೆ ಬೆಲೆಕೊಟ್ಟು ಮಗ್ಗಲಿಗೆ ಬರಲಿಲ್ಲವೆಂದು ಕುಲಕರ್ಣಿ ಸುಳ್ಳು ಆಪಾದನೆ ಹೊರಿಸಿ ಅವಳನ್ನು ಜೈಲಿಗೆ ಕಳುಹಿಸುವಲ್ಲಿ ಸಫಲನಾಗುತ್ತಾನೆ. ಅನಾಯಸವಾಗಿ ಸಿಕ್ಕ ಹರೆಯದ ಹೆಣ್ಣನ್ನು ಹಾಗೆಯೇ ಬಿಡಲು ಖಾಕಿಧಾರಿಗಳಿಗೆ ಮನಸ್ಸಾಗುವುದಿಲ್ಲ. ಜೈಲಿಸಿಂದ ಸ್ತ್ರೀನಿಕೇತನಕ್ಕೆ ವಾಸ್ತವ್ಯ ಬದಲಾದರೂ ದೇಹದಿಂದಷ್ಟೇ ಹೆಂಗಸಾಗಿದ್ದ ಅಲ್ಲಿನ ಅಧಿಕಾರಿ ಅಲ್ಲಿರುವ ಹೆಣ್ಣು ಮಕ್ಕಳನ್ನು ಬಯಸಿದ ಗಂಡಸರಿಗೆ ಒದಗಿಸಿ ದುಡ್ಡುಮಾಡುವ ದಂಧೆಯಲ್ಲಿ ಸಾಕಷ್ಟು ಪರಿಣಿತಳಿದ್ದುದರಿಂದ ಲಚ್ಚಿಗೆ ಅವಳನ್ನು ಕಂಡರೆ ಅತೀವ ಕೋಪ. ಸ್ತ್ರೀನಿಕೇತನದಲ್ಲಿ ಲಚ್ಚಿಯನ್ನು ಕಂಡು ಒಪ್ಪಿ ಮದುವೆಯಾಗುವ ಬಸಣ್ಣಿ ಅವಳ ಪೂರ್ವೇತಿಹಾಸ ತಿಳಿಯುತ್ತಲೇ ತನ್ನದೇ ಕುಡಿಯನ್ನು ಬಸಿರಲ್ಲಿ ಹೊತ್ತಿದ್ದಾಳೆನ್ನುವುದು ತಿಳಿದಿದ್ದರು ನಿರ್ಭಿಡೆಯಿಂದ ಅವಳನ್ನು ಮನೆಯಿಂದ ಹೊರಹಾಕುತ್ತಾನೆ. ಮಗುವಾದ ಮೇಲೆ ಅದನ್ನೂ ನಿರಾಕರಿಸುತ್ತಾನೆ. ಈ ಕಾರಣಗಳಿಂದ ಲಚ್ಚಿಯಲ್ಲಿ ಪುರುಷ ದ್ವೇಷ ಹೆಮ್ಮರವಾಗಿ ಬೆಳೆಯುತ್ತದೆ.

ಅದರ ಫಲವಾಗಿ ಅವಳು ಆ ಮಗುವಿನೊಂದಿಗೆ ಕಂದಕಕ್ಕೆ ಹಾರುತ್ತಾಳೆ. ಮಗು ಸತ್ತು ಅವಳು ಬದುಕುಳಿಯುತ್ತಾಳೆ. ಕೊಲೆ ಮತ್ತು ಆತ್ಮಹತ್ಯೆಯ ಪ್ರಕರಣವೆಂದು ಅವಳನ್ನು ನ್ಯಾಯಾಲಯದಲ್ಲಿ ಹಾಜರು ಪಡಿಸಿದಾಗ ಅವಳು ಕೊಡುವ ಉತ್ತರ ನಮ್ಮನ್ನು ದಂಗುಬಡಿಸುತ್ತದೆ. "ಅದರ ಅಪ್ಪ ಅದಕ ತಂದೆಂತ ತಗೋಲಿಲ್ರೀ...ಮ್ಯಾಲಾಗಿ ಅದು ಗಂಡಸ ಮಗ ಇತ್ತು. ನಾಳಿಗಿ ದೊಡ್ಡದಾಗಿ ಸಾವಿರ ಹೆಂಗಸರ ಬಾಳ್ಯಾ ಹಾಳಮಾಡಿ ಅವರ ಬದುಕಿಗಿ ಬೆಂಕಿಹಚ್ಚ ಗಂಡಮಗಾ... ಅದಕ... ಅದಕ್ಕನೂ ಕೊಲ್ಲಿ ನಾನು ಸಾಯ್ಬೇಕಂತ ಮಾಡಿದ್ದನ್ರಿ ಸಾಬ್ರೇ" (ಪು.೭೬) ಎಂಬಂತಹ ಮಾತನ್ನು ಆಡುವುದು ಲಚ್ಚಿಯಂತೆ ನೋವನ್ನು ಅನುಭವಿಸಿದವರಿಗೆ ಸಹಜವೇ ಇರಬಹುದು. ಸಾಮಾಜಿಕ ಮೌಲ್ಯ ವ್ಯವಸ್ಥೆಯ ಸುಳಿಯಲ್ಲಿ ಸಿಕ್ಕು, ಉಳ್ಳವರ ಅಟ್ಟಹಾಸಕ್ಕೆ ಬಲಿಯಾಗಿ ಸಾಕಷ್ಟು ನೋಯುವ ಲಚ್ಚಿಗೆ ಕಾನೂನಿನ ಸಹಾಯವೂ ಸಿಗುವುದಿಲ್ಲ. ನ್ಯಾಯಾಲಯವು ಅವಳದೇ ತಪ್ಪೆಂದು ತೀರ್ಮಾನಿಸಿ ಶಿಕ್ಷೆ ವಿಧಿಸುತ್ತದೆ. ಅವಳನ್ನು ಈ ಸ್ಥಿತಿಗೆ ತಳ್ಳಿದ ಧೂರ್ತರಿಗೆ ಸಮಾಜದಲ್ಲಿ ಸಂಭಾವಿತರೆಂದು ತಲೆಯೆತ್ತಿ ಮೆರೆಯಲು ಸಾಧ್ಯವಾಗುತ್ತದೆ. ಜಾತಿ, ವರ್ಗ, ಅಧಿಕಾರ ಮುಂತಾದ ಶಕ್ತಿಗಳಿಗೆಲ್ಲ ಯಾವತ್ತೂ ಮೊದಲು ಬಲಿಯಾಗುವುದು ಹೆಂಗಸೇ ಎನ್ನುವುದನ್ನು ಕೃತಿ ಮನಗಾಣಿಸುತ್ತದೆ. ಪುರುಷ ಪ್ರಧಾನ ವ್ಯವಸ್ಥೆಯು ನಿರ್ಮಿಸಿದ ಇಕ್ಕಟ್ಟು ಹೆಂಗಸನ್ನು ಹೇಗೆ ಉಸಿರುಗಟ್ಟಿಸಿ ಸಾಯುವಂತೆ ಮಾಡುತ್ತದೆ ಎನ್ನುವುದಕ್ಕೆ ಹಸಿಮಾಂಸ ಮತ್ತು ಹದ್ದುಗಳು ಉದಾಹರಣೆಯಾಗುತ್ತದೆ. ಹೆಣ್ಣಿಗೆ ಅನ್ಯಾಯ ಮಾಡುವ ಗಂಡಸರನ್ನೆಲ್ಲಾ

ಇಲ್ಲವಾಗಿಸಿ ಬಿಟ್ಟರೆ ಸಮಸ್ಯೆಗೆ ಪರಿಹಾರ ದೊರಕುತ್ತದೆ ಎನ್ನುವುದು ಒಂದು ಅಮಾನವೀಯ ನಿಲುವು ನಿಜ. ಆದರೆ ಲಚ್ಚಿಯ ಬದುಕಿನ ಸಂದರ್ಭ ಅವಳನ್ನು ಪ್ರೇರೇಪಿಸಿದ್ದು ಈ ರೀತಿಯಲ್ಲಿ ಎನ್ನವುದೂ ಅಷ್ಟೇ ಸತ್ಯ.

ಶ್ರೀಮಂತಿಕೆಯ ಸೊಕ್ಕಿನೆದುರು ಜಾತಿ ಗೌಣವಾಗುತ್ತದೆ. ಊರಿನ ಗೌಡ-ಸಾಹುಕಾರರು ತಮಗೆ ಬೇಕೆನಿಸಿದ ಹೆಣ್ಣನ್ನು ಅವಳಿಚ್ಛೆಗೆ ವಿರೋಧವಾಗಿ ಮೋಸದಿಂದಲೋ ಹೆದರಿಸಿಯೋ ಅತ್ಯಾಚಾರ ಮಾಡಿ ಖಾಯಂ ಆಗಿ ಇಟ್ಟುಕೊಳ್ಳುವ ಪರಿಪಾಠ ಹಳ್ಳಿಗಳಲ್ಲಿ ಬಹಳ ಹಿಂದಿನಿಂದಲೂ ನಡೆದುಬಂದಿತ್ತು. ಹೀಗೆ ಮಾಡುವಾಗ ಅವಳ ಜಾತಿ ಯಾವುದೆನ್ನುವ ಪ್ರಶ್ನೆ ಎದುರಾಗುತ್ತಿರಲಿಲ್ಲ. ಆದರೆ ಅವಳ ಮಕ್ಕಳ ವಿಷಯ ಬಂದಾಗ ಜಾತಿಯ ಪ್ರಶ್ನೆ ಎದುರಾಗುತ್ತಿತ್ತು. ಇಂದಿಗೂ ಕೆಲವು ಕಡೆ ಇಂತಹ ಪದ್ಧತಿಯ ಮುಂದುವರಿಕೆಯಿದೆ ಎನ್ನುವುದನ್ನು ಕೆಲವು ಕೃತಿಗಳು ಕಾಣಿಸುತ್ತವೆ. ಇಟ್ಟುಕೊಂಡವಳು ಎಷ್ಟೇ ನಿಯತ್ತಿನಿಂದಿದ್ದರೂ ಅವಳಿಗೆ ಹೆಂಡತಿಯ ಸ್ಥಾನ ಸಿಗುವುದಿಲ್ಲ. ಅವಳಿಗೆ ಹುಟ್ಟುವ ಹೆಣ್ಣುಮಕ್ಕಳೂ 'ಇಟ್ಟುಕೊಂಡವರಾ'ಗಿಯೇ ಬದುಕಬೇಕಾಗುತ್ತದೆ. ಇಂತಹ ಸ್ಥಿತಿಗೆ ಒಳಗಾದ ಹೆಂಗಸಿನ ನೋವು, ನಿರಾಶೆ, ಹತಾಶೆಗಳನ್ನು ಗೀತಾ ನಾಗಭೂಷಣರ 'ಬೆಳಕಿನೆಡೆಗೆ' (ಜ್ವಲಂತ) ಕಡೆ ಹಾಗೂ 'ದಂಗೆ' ಕಾದಂಬರಿ ಕಂಡರಿಸುತ್ತದೆ. ತಾವು ಅನುಭವಸಿದ ನೋವು, ಅಪಮಾನಗಳಿಂದ ನೊಂದ ತಾಯಂದಿರು ತಮ್ಮ ಮಗಳಿಗೆ ಇಂತಹ ಸ್ಥಿತಿ ಬರಬಾರದೆಂದು ಪ್ರತಿಭಟನೆ ತೋರುತ್ತಾರೆ. ಆ ಪ್ರತಿಭಟನೆಯ ಸ್ವರೂಪದಲ್ಲಿ ಭಿನ್ನತೆಯಿದೆ.

'ಬೆಳಕಿನೆಡೆಗೆ' ಕತೆಯಲ್ಲಿ ಸಾಹುಕಾರನ ಮಗ ಈರಣ್ಣ ಮನೆಗೆಲಸಕ್ಕೆ ಬರುತ್ತಿದ್ದ ಭವಾನಿಯ ಮೇಲೆ ಅತ್ಯಾಚಾರ ಮಾಡುತ್ತಾನೆ. ಮದುವೆಯಾಗಿ ಒಬ್ಬನ ಮಡದಿಯಾಗಿ ಬದುಕಬೇಕಾಗಿದ್ದ ಭವಾನಿ ಪರಿಸ್ಥಿತಿಯ ಒತ್ತಡಕ್ಕೆ ಸಿಲುಕಿ ಈರಣ್ಣನ 'ಇಟುಗೊಂಡವಳಾ'ಗಿ ಬದುಕು ಸವೆಸಬೇಕಾಗುತ್ತದೆ. ಅವಳ ಮಗಳು ಗೌರಿ ದೊಡ್ಡವಳಾದ ಮೇಲೆ ಅವಳಿಗೆ ಗಂಡು ಹುಡುಕುವಂತೆ ಸಾಹುಕಾರನಿಗೆ ತಾಕೀತು ಮಾಡುತ್ತಾಳೆ. ಆತನ ಕುಲದವರಾಗಲಿ, ಆಕೆಯ ಕುಲದವರಾಗಲಿ ಗೌರಿಯನ್ನು ಮದುವೆಯಾಗಲು ತಯಾರಿಲ್ಲವೆಂದು ಆತ ಹೇಳಿದಾಗ ಭವಾನಿಗೆ ಸಿಟ್ಟು ಉಕ್ಕುತ್ತದೆ. "ಆಕಿ ನಿಮ್ ಮಗಳಂಬಾದು ಸುಳ್ಳೇನು? ನೀವು ನನ್ನ ಕೊಳ್ಳಾಗ ತಾಳಿ ಕಟ್ಟಿಲ್ಲಂದ್ರೇನಾಯ್ತು? ನಾ ನಿಮ್ಮ ಹೆಣ್ತೆಕಿಂತಾ ಹೆಚ್ಚಿಗಿ ನಿಮ್ ಜೋಡಿ ನಡ್ಕೊಂಡಿಲ್ಲೇನು?... ಮಕ್ಕಳಿಗಿ ತಂದೆ ಜಾತಿನೇ ಬರ್ತವಂತ ಹೇಳ್ತಾರ. ಅಂದಮೇಲೆ ನಿಮ್ ಜಾತಿಯವ ಯಾವನಾದ್ರೂ ನನ್ ಮಗಳಿಗಿ ಲಗ್ನ ಆಗ್ಬೇಕು.." (೧೪೨) ಎನ್ನುವ ಭವಾನಿಯ ಮಾತುಗಳು ತರ್ಕಸಮ್ಮತವಾದವು, ನ್ಯಾಯಬದ್ಧವಾದವು. ಆದರೆ ಮೇಲು ಜಾತಿಯ ಗಂಡಸರಿಗೆ ಮದುವೆಯಾಗಿ ವಂಶಮುಂದುವರಿಸಲು ತಮ್ಮ ಜಾತಿಯ ಹುಡುಗಿಯೇ ಆಗಬೇಕು. ಇಟುಗೊಳ್ಳಲಿಕ್ಕೆ ಯಾವ ಜಾತಿಯ ಹೆಣ್ಣಾದರೂ ಆಗುತ್ತದೆ. ಹಾಗಾಗಿ ಸಾಹುಕಾರನ ತಂಗಿಯ ಮಗ ಗೌರಿಯನ್ನು ಇಟುಗೊಳ್ಳಲು ಮುಂದೆಬಂದಿರುವುದಾಗಿ ಸಾಹುಕಾರ ತಿಳಿಸುತ್ತಾನೆ. ತನ್ನ ಬದುಕಿನಿಂದ ಪಾಠ ಕಲಿತಿದ್ದ

ಭವಾನಿ ಆತನ ಈ ಪ್ರಸ್ತಾಪದಿಂದ ಸಿಡಿದು ನಿಂತು ಅವನಿಗೆ ಸವಾಲೆಸೆಯುತ್ತಾಳೆ. "ಹೆಂತಾ ಅಪ್ಪನೋ ನೀನು? ಈ 'ರಂಡಿ'ಯಾಗಿ ನಾ ಉಂಡ ದುಕ್ಕ, ಸಂಕಟ, ಚಿಂತಿ, ಅಪಮಾನಗೋಳೇ ಸಾಕು. ನನ್ನ ಮಗಳಿಗಿನೂ ನಾ ನನ್ನಂಗ ಮಾಡಂಗಿಲ್ಲಂತ ತಿಳಿ. ನಿನ್ನೆದಿ ಮ್ಯಾಲ ಬರ್ದು ಇಟಗೊ, ನನ್ ಮಗಳು ಆದರ ಒಂದು ಗಂಡಿನ ತಾಳಿಕಟ್ಟಿದ ಹೆಣ್ತಿ ಆಗ್ತಾಳ ಖರೆ, ಇಲ್ಲಂದ್ರ ತನ್ನ ಹೊಟ್ಟೆ ತಾ ತುಂಬಿಸಿಕೊಂಡು ಯಾವ ಗಂಡಸಿನ ಅನ್ನಕ್ಕ ಆಸಿ ಬೀಳಲಾರ್ದೆ ಸೊತಂತ್ರ ಆಗಿ ಬಾಳ್ತಾಳ ತಿಳಿತೇನು? (ಪು ೧೪೨) ಎನ್ನುವ ಅವಳ ಮಾತುಗಳು ಅವಳ ಬದುಕನ್ನು ತೆರೆದಿಡುತ್ತದೆ. ಜೊತೆಗೆ ಆಕೆ ಎಚ್ಚೆತ್ತುಕೊಂಡಿದ್ದಾಳೆನ್ನುವುದು ಗೊತ್ತಾಗುತ್ತದೆ. ಹೇಳಿದಂತೆಯೇ ಭವಾನಿ ಗೌರಿಯನ್ನು ಕರೆದುಕೊಂಡು ನಗರಕ್ಕೆ ಹೊರಡುತ್ತಾಳೆ. ಕಳೆದುಹೋದ ತನ್ನ ಬದುಕಿನ ಬಗೆಗೆ ಆಕೆಗೆ ನೋವಿರುತ್ತದೆ. "ಈಸ ದಿನಾ ಎಲ್ಲಾ ಕತ್ತಲದಾಗ ಕಾಲ ಕಳದೇವಿ ಕೂಸು ತಿಳೀದಿಲ್ಲ.... ಈಗ ನನಗ ಅರುವು ಬಂತು ಮಗಾ... ನಿನಗ ಕರ್ಕೊಂಡು ಬೆಳಕಿನ ಕಡೀಗಿ ಹೊಂಟೇನಿ" (ಪು೧೪೪) ಎಂದು ಮಗಳೊಂದಿಗೆ ಆಡುವ ಮಾತುಗಳಲ್ಲಿ ಭವಿಷ್ಯದ ಬಗೆಗಿನ ಆಸೆ, ಆಶಯಗಳು ವ್ಯಕ್ತವಾಗುತ್ತವೆ. ತನಗಾದ ಅನ್ಯಾಯವನ್ನು ಬಾಯ್ಮುಚ್ಚಿ ಸಹಿಸಿದ್ದ ಭವಾನಿಗೆ ಮುಂದಿನ ತಲೆಮಾರಿಗೂ ಅದು ರವಾನೆಯಾಗುವುದಾಗಿ ತಿಳಿದಾಗ ಆಸ್ಫೋಟಿಸುವುದು ಅನಿವಾರ್ಯವಾಗುತ್ತದೆ. ಮದುವೆಯಾದ ಹೆಂಡತಿಯಲ್ಲಿ ಜನಿಸಿದ್ದ ಮಗಳನ್ನು ಮದುವೆ ಮಾಡಿಕೊಡುವ ಈರಣ್ಣ ಸಾಹುಕಾರ ಭವಾನಿಯ ಮಗಳನ್ನು ಯಾವುದೇ ಕಕ್ಕುಲಾತಿ ಇಲ್ಲದೆ ಸೋದರಳಿಯನಿಗೆ ಇಟುಗೊಂಡವಳಾಗಿ ಮಾಡಹೊರಡುವುದು ಗಂಡಸಿನ ಸ್ವಾರ್ಥದ ಪರಮಾವಧಿಯಾಗಿ ಕಾಣುತ್ತದೆ. ಸ್ವಂತ ಮಗಳೇ ಆಗಿದ್ದರೂ ತಾಯಿಯ ಕಾರಣದಿಂದ 'ಜಾತಿಪ್ರಜ್ಞೆ' ಭೂತವಾಗಿ ಕಾಡುತ್ತದೆ. ತನ್ನ ಲಾಲಸೆಗಾಗಿ ಒಬ್ಬ ಹೆಂಗಸಿನ ಬದುಕು ನಲುಗಿಹೋಯಿತೆನ್ನುವ ಯಾವ ಭಾವವೂ ಅವನನ್ನು ತಟ್ಟುವುದಿಲ್ಲ. ಈ ಹೆಣ್ಣುಗಳಿರುವುದೇ ತಮ್ಮಂತಹವರನ್ನು ತೃಪ್ತಿಪಡಿಸುವ ಸಲುವಾಗಿ ಎಂಬ ಧೋರಣೆ ಅವನದು. ತಮ್ಮ ಜಾತಿಯ ಬಡವನ ಮಡದಿಯಾಗಿ ಬದುಕುವುದಕ್ಕಿಂತ ಮೇಲು ಜಾತಿಯ ಶ್ರೀಮಂತನ 'ಇಟುಗೊಂಡವಳಾಗಿ' ಬಾಳುವುದು ಕೆಳಸ್ತರದ ಮಹಿಳೆಯರ ಭಾಗ್ಯ ಎಂದು ತಿಳಿಯಬೇಕೆಂದು ಒತ್ತಾಯಿಸುತ್ತ ಬರಲಾಗಿದೆ.

ಅವರದೇ ಕಾದಂಬರಿ 'ದಂಗೆ'ಯ ನಾಯಕಿ ದುರಗಿಯ ಬದುಕು ಹೆಂಗಸೊಬ್ಬಳು ಯಾವ್ಯಾವ ರೀತಿಯಲ್ಲಿ ಶೋಷಿತಳಾಗಬಹುದೆನ್ನುವುದಕ್ಕೆ ಉದಾಹರಣೆಯಾಗುತ್ತದೆ. ಅನಾಥಳಾದ ದುರಗಿಗೆ ಆಶ್ರಯಕೊಟ್ಟ ಭಾವನೇ ಅವಳ ಮೇಲೆ ಅತ್ಯಾಚಾರವೆಸಗುತ್ತಾನೆ. ಅವಳಿಗಿಂತ ಬಹಳ ದೊಡ್ಡವನಾದ ಮಾಳಪ್ಪನೊಂದಿಗೆ ಮದುವೆ ಮಾಡಿದಾಗಲೂ ತನಗೆ ಸಾಂಸಾರಿಕ ಬದುಕು ದೊರೆಯಿತೆಂಬ ಸಮಾಧಾನ ಅವಳದಾಗುತ್ತದೆ. ಆದರೆ ಗಂಡನ ಸೋಮಾರಿತನ ಹಾಗೂ ಕಚ್ಚೆಹರಕುತದಿಂದಾಗಿ ಅವಳಿಗೆ ಅಪಾರವಾದ ನೋವಾಗುತ್ತದೆ. ಮಗಳು ಹುಟ್ಟಿದ ಮೇಲೆ ಗಂಡ ದೇಶಾಂತರ ಹೋಗುತ್ತಾನೆ. ಅದಕ್ಕೆ ಅಂಜದೆ ತನ್ನ

ರಟ್ಟೆಯ ಬಲವನ್ನು ನಂಬಿ ಬದುಕುತ್ತಾಳೆ. ಒಬ್ಬಳೇ ಇರುವುದರಿಂದ ಕಾಮಣ್ಣರ ಕಾಟ ಅತಿಯಾಗಿ, ಮಗಳೊಂದಿಗೆ ಆ ಊರು ಬಿಟ್ಟು ನಡೆದ ದುರಗಿ ಇನ್ನೊಂದು ಹಳ್ಳಿಯಲ್ಲಿ ಊರ ಹಿರಿಯರ ಆಸರೆ ಪಡೆದು ಗುಡಿಸಲು ಕಟ್ಟಿ ಬಾಳ್ವೆ ಶುರು ಮಾಡುತ್ತಾಳೆ. ಆ ಊರಿನ ಸಾಹುಕಾರ ಕುಕ್ಕಣ್ಣೆ ಗೋಯಿಂದಪ್ಪನ ಬೇಡಿಕೆಯನ್ನು ನಿರಾಕರಿಸುತ್ತಾಳೆ. ಆದರೆ ಮುಂದೊಂದು ದಿನ ಅವನ ತೋಟದಲ್ಲಿ ಖಾಯಂ ಆಗಿ ಉಳಿಯುವ ಪರಿಸ್ಥಿತಿಯುಂಟಾಗುತ್ತದೆ. ಅವನಿಗೆ ಚೆನ್ನಾಗಿಯೇ ಹೊಂದಿಕೊಂಡು ಬದುಕುತ್ತಿದ್ದ ಅವಳ ಬಾಳಲ್ಲಿ ಬಿರುಗಾಳಿ ಬೀಸುತ್ತದೆ. ಒಟ್ಟಾಗಿ ಓದುತ್ತಿದ್ದ ಅವಳ ಮಗಳು ಸಾವಿತ್ರಿ ಮತ್ತು ಗೋಯಿಂದಪ್ಪನ ಮಗನ ನಡುವೆ ಪ್ರೀತಿಯುಂಟಾಗಿ ಇಬ್ಬರೂ ಮದುವೆಯಾಗಲು ನಿಶ್ಚಯಿಸುತ್ತಾರೆ. ವಿಷಯ ತಿಳಿದ ಕುಕ್ಕಣ್ಣೆಯು ಸಾವಿತ್ರಿಯನ್ನು ಮುಗಿಸಿಬಿಡುವ ಸಂಚು ಹೂಡುತ್ತಾನೆ. ಈ ಸೂಕ್ಷ್ಮ ತಿಳಿಯುತ್ತಲೇ ದುರಗಿಯ ಮನಸ್ಸು ಅವನ ವಿರುದ್ಧ ದಂಗೆಯೇಳುತ್ತದೆ. ಉಪಾಯವಾಗಿ ಆಕೆ ಕುಕ್ಕಣ್ಣೆಯನ್ನು ಸಾಯಿಸುತ್ತಾಳೆ.

ದುರಗಿ ಹೆಂಡತಿಯಷ್ಟೇ ನಿಷ್ಠೆಯಿಂದ ಕುಕ್ಕಣ್ಣೆಯೊಂದಿಗೆ ಬಾಳುವೆ ಮಾಡಿದ್ದರೂ ಅವಳು ಕುಕ್ಕಣ್ಣೆ 'ಇಟ್ಟುಕೊಂಡವಳೆಂದೇ ಸಮಾಜವು ನೋಡುತ್ತದೆ ಎನ್ನುವ ಅರಿವು ಸಾವಿತ್ರಿಗೆ ಇರುವುದರಿಂದ ಅವಳು ನೋಯುತ್ತಾಳೆ. ಪದವೀಧರೆಯಾದ ಸಾವಿತ್ರಿಗೆ ದೊಡ್ಡ ಜಾತಿಯವರೆನಿಸಿಕೊಂಡವರು ತಮ್ಮ ದೈಹಿಕ ಬಯಕೆ ತೀರಿಸಿಕೊಳ್ಳಲು ಕೆಳಜಾತಿಯ ಹೆಂಗಸರನ್ನು ಇಟ್ಟುಕೊಳ್ಳುತ್ತಿರುವುದರ ಬಗೆಗೆ ರೋಷವಿದೆ ಎನ್ನುವುದು ಅವಳು ತಾಯಿಗೆ ಹೇಳುವ ಮಾತುಗಳಿಂದ ತಿಳಿಯುತ್ತದೆ. "ಹಿಂದೆಲ್ಲಾ ನಾವು ಆ ಗಂಡಸರ 'ಇಟ್ಕೊಂಡಕ್ಕಿ' ಆಗೇ ನಮ್ಮೆದ್ಯಾಗಿನ ದುಕ್ಕ ನುಂಗಿ, ಆಸೆಗೋಳಿಗಿ ಸಾಯಿಸಿ, ಕನಸಗೋಳಿಗಿ ಕೊಲ್ಲಿಸಿ, ಅವರ ಖಾಸಾ ಹೆಂಡಿರಕ್ಕಿಂತ ಜಾಸ್ತಿ ಗರತೇರಾಗಿ ಬಾಳಿ ಬಾಳ್ಯಾ ಸವಸೀವಿ. ಆದರೆ ಈಗ ಅದೆಲ್ಲ ನಡೆಯಂಗಿಲ್ಲ. ನಾವು ದೊಡ್ಡ ಜಾತಿ ಗಂಡಸರಿಗಿ ಬೇಕು ಅನ್ನಿಸಿದರ ಅವರು ನಮಗ ಮದವಿ ಮಾಡ್ಕೊಂಡು ಹೆಣ್ತಿ ಅಂತೇ ತಮ್ಮ ವಾಡೇಕ್ಕ, ಅರಮನಿಗಿ, ಕರಿಕಲ್ಲಿನ ಗಚ್ಚಿನ ಮನೀಗಿ ಕೈಹಿಡ್ದು ಕರ್ಕೊಂಡು ಹೋಗಬೇಕು." (ಪು೧೩೬-೧೩೭) ಅವಳ ಈ ಆಲೋಚನೆಗಳೇ ಅವಳಿಗೆ ಸೀನೂನ ಜೊತೆಗೆ ಮದುವೆಯಾಗಿ ಬದುಕಬೇಕೆನ್ನುವ ಹಠಕ್ಕೆ ಚಾಲನೆ ನೀಡುತ್ತವೆ. ದುರಗಿಗೆ ಮಗಳು ಸುಖವಾಗಿ ಬದುಕಬೇಕೆನ್ನುವ ಆಸೆಯಿದ್ದರೂ ಈ ಬಗೆಯ ಸಂಬಂಧವನ್ನು ಸಮಾಜ ಒಪ್ಪುವುದಿಲ್ಲ ಎನ್ನುವುದೂ ಗೊತ್ತಿರುತ್ತದೆ. "ಜಾತಿ ಕುಲಾ ನೋಡಲಾರ್ದೆ ಹೆಣ್ಣು-ಗಂಡಾ ಹಾಸಗ್ಯಾಗ ಒಂದಾಗೋದು ಅಂದ್ರ ಗಂಡ ಹೆಣ್ತಿ ಆಗಿ ಅಲ್ಲ, ಸೂಳಿ ಮಿಂಡಗಾರ ಆಗೇ. ಅಂತದಕ್ಕ ಗಂಡಾಹೆಣ್ತಿ ಸಂಸಾರ ಅಂತ ಕರೆಂಗಿಲ್ಲ. ಈ ಪರಪಂಚದಾಗಿರೋ ಮಂದಿ 'ಹಾದರ' ಅಂತ ಕರೀತಾರ"(ಪು.೧೩೪) ಎನ್ನುವ ದುರಿಗಿಗೆ ಮಗಳ ಬದುಕು ತನ್ನದರಂತೆ ಆಗಬಾರದೆನ್ನುವ ಕಳಕಳಿ. ತನ್ನ ದುರಗಿಯ ಸಂಬಂಧದ ನಡುವೆ ಇಣುಕದ ಗೋಯಿಂದಪ್ಪನ 'ಜಾತಿಪ್ರಜ್ಞೆ' ಮಗ ಸಾವಿತ್ರಿಯನ್ನು ಮದುವೆಯಾಗುವುದಾಗಿ ತಿಳಿಸುತ್ತಲೇ ಎಚ್ಚರಗೊಳ್ಳುತ್ತದೆ. ಅನೈತಿಕ

ಸಂಬಂಧಕ್ಕೆ ಹೆಂಗಸು ಯಾವ ಜಾತಿಯವಳಾದರೂ ಅಡ್ಡಿಯಿಲ್ಲ. ಮದುವೆಯಾಗಿ ಹೆಂಡತಿಯ ಸ್ಥಾನ ನೀಡಲು ಮಾತ್ರ ಜಾತಿ ಅಡ್ಡಬರುತ್ತದೆ. ಇಂತಹ ತಾರತಮ್ಯ ತೋರುವ ಮೇಲು ಜಾತಿಯ ಗಂಡಸರ ಹುನ್ನಾರದ ವಿರುದ್ಧ ಸಾವಿತ್ರಿ ದಂಗೆಯೆದ್ದಿದ್ದರಿಂದ ಅವಳನ್ನು ಮುಗಿಸಲು ಕುಕ್ಕಣ್ಣಿ ಸಂಚು ಹೂಡುತ್ತಾನೆ. ತನ್ನ ಮಗಳನ್ನು ಸಾಯಿಸಲು ಹೊರಟ ಗೋಯಿಂದಪ್ಪನ ಯೋಜನೆ ತಿಳಿಯುತ್ತಲೇ ದಿಗಲಿಗೊಳ್ಳುವ ದುರಗಿ ಮಗಳನ್ನು ಉಳಿಸಿಕೊಳ್ಳಲು ಆತನ 'ದೋಕಬಾಜಿತನ'ಕ್ಕೆ ಎದಿರೇಟು ಹಾಕದೆ ಗತ್ಯಂತರವಿರಲಿಲ್ಲ. ಇತರ ಸಾಧ್ಯತೆಗಳು ಮುಚ್ಚಿದ್ದರಿಂದ ಗೋಯಿಂದಪ್ಪನ ವಿರುದ್ಧ ದಂಗೆಯೆದ್ದ ಅವಳ ಮನಸ್ಸು ತೆಗೆದುಕೊಳ್ಳುವ ನಿರ್ಣಯವು ಆಕೆಗೆದುರಾದ ಸನ್ನಿವೇಶದಲ್ಲಿ ಅನಿವಾರ್ಯವಾದುದಾಗಿತ್ತು. ಜಾತಿಯ ಕಾರಣದಿಂದ ಹೆಂಗಸಿನ ಮೇಲೆ ನಡೆಯುತ್ತಲೇ ಬಂದ ಅನ್ಯಾಯ, ದೌರ್ಜನ್ಯಗಳನ್ನು ಹತ್ತಿಕ್ಕಲು ಕೆಳಸ್ತರದ ಮಹಿಳೆಯರು ಸಾವಿತ್ರಿ ಮತ್ತು ದುರಗಿಯರಂತೆ ಕ್ರಿಯಾಶೀಲರಾಗಬೇಕಾದ ಅಗತ್ಯವಿದೆ ಎನ್ನುವುದಾಗಿ ಕತೆ ಪ್ರತಿಪಾದಿಸುತ್ತದೆ. ಎಲ್ಲವನ್ನೂ 'ಬಾಯ್ಮುಚ್ಚಿ'ಕೊಂಡು ಸಹಿಸುತ್ತಲೇ ಇದ್ದರೆ ಯಾವ ಬದಲಾವಣೆಯೂ ಸಾಧ್ಯವಾಗದು ಎನ್ನುವುದು ಲೇಖಕಿಯ ನಿಲುವು. ಸಾವಿತ್ರಿಯ ಬದುಕಿನ ಸಂದರ್ಭ ಹಾಗೂ ದುರಗಿಗೆದುರಾದ ಸನ್ನಿವೇಶದ ಇಕ್ಕಟ್ಟು ಅವರನ್ನು ಪ್ರತಿಭಟಿಸಲು ಪ್ರೇರೇಪಿಸುತ್ತದೆ. ಇಲ್ಲಿಯಂತೆ ಪ್ರತಿಭಟನೆ ಒಳಗಿನಿಂದ ಬಂದಾಗ ಮಾತ್ರ ವ್ಯವಸ್ಥೆಯಲ್ಲಿ ಚಲನಶೀಲತೆ ಉಂಟಾಗಲು ಸಾಧ್ಯವಾಗುತ್ತದೆ. ಆ ಮೂಲಕ ಅನ್ಯಾಯಕ್ಕೊಳಗಾಗುವ ವ್ಯಕ್ತಿಗಳಿಗೆ ನ್ಯಾಯ ದೊರಕಿಸಿಕೊಳ್ಳಲು ಶಕ್ಯವಾಗುತ್ತದೆ ಎನ್ನುವುದನ್ನು ಇತಿಹಾಸ ತೋರಿಸಿಕೊಟ್ಟಿದೆ.

ಜಾತಿ-ವರ್ಗಗಳ ಕಾರಣದಿಂದ ಹೆಂಗಸಿನ ಮೇಲೆ ನಡೆಯುವ ಅನ್ಯಾಯ, ಅತ್ಯಾಚಾರಗಳು ನಗರಗಳಿಗಿಂತ ಗ್ರಾಮೀಣ ಪ್ರದೇಶಗಳಲ್ಲಿಯೇ ಹೆಚ್ಚು. ಚಿಕ್ಕ ಭೂಪ್ರದೇಶ, ಪರಸ್ಪರ ಪರಿಚಯ, ಸಾಮುದಾಯಿಕ ಬದುಕಿಗಿರುವ ಪ್ರಾಶಸ್ತ್ಯ ಇವೆಲ್ಲವೂ ಉಳ್ಳವರು ತಮ್ಮ ಕೆಳಗಿನವರ ಮೇಲೆ ದೌರ್ಜನ್ಯ ನಡೆಸಲು ಪೂರಕವಾಗಿ ಕೆಲಸಮಾಡುವ ಅಂಶಗಳು. ರಾಜಕೀಯ, ಆರ್ಥಿಕ ಶಕ್ತಿಗಳನ್ನು ತಮ್ಮಲ್ಲಿ ಕೇಂದ್ರೀಕರಿಸಿಕೊಂಡ ಒಂದು ಚಿಕ್ಕ ಗುಂಪು ಇಡೀ ಹಳ್ಳಿಯನ್ನು ತಮ್ಮ ಪಾಳೆಗಾರಿಕೆಯ ಕೇಂದ್ರವನ್ನಾಗಿಸಿಕೊಂಡು ಆಳುತ್ತದೆ. ಜಾತಿ, ವರ್ಗ, ಧರ್ಮಗಳೆಂಬ ಗೋಡೆಯನ್ನು ನಿರ್ಮಿಸಿ ಅಬಲರನ್ನು ಒಡೆದು ತನ್ನ ಸ್ವಾರ್ಥ ಸಾಧಿಸಿಕೊಳ್ಳುವ ಈ ಗುಂಪಿನ ಜನಕ್ಕೆ ಮೊದಲು ಬಲಿಯಾಗುವವರು ಹೆಂಗಸರೇ. ಒಂದು ಕಡೆ ಅದೇ ಗುಂಪಿಗೆ ಸೇರಿದ ಹೆಂಗಸರು ತಮ್ಮ ಗಂಡಂದಿರು ನಡೆಸುವ ದಬ್ಬಾಳಿಕೆಯನ್ನು ಸಹಿಸಬೇಕಾದ, ಅವರ 'ಹೊರಚಾಳಿ' ಗೊತ್ತಿದ್ದೂ ಬಾಯ್ಮುಚ್ಚಿ ಕಣ್ಮುಚ್ಚಿ ಕುಳಿತಿರಬೇಕಾದ ಪರಿಸ್ಥಿತಿ, ಇನ್ನೊಂದೆಡೆ ಅಶಕ್ತರಾದವರು ತಮ್ಮ ಹೆಂಗಸರ ಮೇಲೆ ನಡೆಯುತ್ತಿರುವ ಅತ್ಯಾಚಾರವನ್ನು ಕಂಡೂ ತಡೆಯಲಾರದ ಅಸಹಾಯಕತೆ ಹಾಗೂ ಅದಕ್ಕೆ ಬಲಿಯಾಗುವ ಹೆಂಗಸರು ಪ್ರತಿಭಟಿಸಲಾರದೆ ನರಳುವ ದಯನೀಯ ಸ್ಥಿತಿ. ಈ ಎಲ್ಲ ಸೂಕ್ಷ್ಮಗಳನ್ನು ಗಂಗಾ ಪಾದೇಕಲ್ ಅವರ 'ಹೊನ್ನಳ್ಳಿ'ಯಲ್ಲೊಮ್ಮೆ' ಕಾದಂಬರಿ ತೆರೆದಿಡುತ್ತದೆ.

ನಗರದ ಕಾಲೇಜಿನಲ್ಲಿ ಒಟ್ಟಾಗಿ ಓದಿದ ಕುಸುಮ ಪ್ರಸಾದರು ಪರಸ್ಪರ ಪ್ರೀತಿಸುತ್ತಾರೆ. ಅವರ ಮದುವೆಗೆ ಜಾತಿ ಅಡ್ಡಬರುವುದಿಲ್ಲ. ಹಳ್ಳಿಯಲ್ಲಿದ್ದು ಬಡವರ ಸೇವೆಮಾಡಬೇಕೆಂಬ ಉದ್ದೇಶದಿಂದ ಅವರಿಬ್ಬರೂ ಹಳ್ಳಿಗೆ ಹೋಗಲು ನಿರ್ಧರಿಸಿ ಪ್ರಸಾದ ಅಲ್ಲಿ ವೈದ್ಯವೃತ್ತಿ ಆರಂಭಿಸುತ್ತಾನೆ. ರಾತ್ರಿ ಶಾಲೆ ನಡೆಸುವುದು, ಬಡವರಿಗೆ ತಿಳುವಳಿಕೆ ನೀಡುವುದು, ಅನ್ಯಾಯದ ವಿರುದ್ಧ ಪ್ರತಿಭಟಿಸಬೇಕೆಂಬ ಜಾಗೃತಿಯುಂಟು ಮಾಡುವುದು ಮುಂತಾದ ಪ್ರಸಾದನ ಕೆಲಸಗಳು ಅವನ ವಿರುದ್ಧ ಆ ಊರಿನ ಗೌಡರು ತಿರುಗಿ ಬೀಳಲು ಕಾರಣವಾಗುತ್ತದೆ. ಕುಸುಮ ಪ್ರಸಾದರರದು ಅಂತರ್ಜಾತಿಯ ವಿವಾಹವೆನ್ನುವುದನ್ನು ಪತ್ತೆಹಚ್ಚಿ ಅಪಪ್ರಚಾರ ಮಾಡುವ ಗೌಡರು, ಅಮಾಯಕ ಹೆಣ್ಣುಮಗಳೊಬ್ಬಳ ಮೇಲೆ ನಡೆದ ಅತ್ಯಾಚಾರಕ್ಕೆ ಸಂಬಂಧಿಸಿದ ಪಂಚಾಯಿತಿಯಲ್ಲಿ ಪ್ರಸಾದನ ಮಾತಿನಿಂದ ತನಿಖೆ ತಮ್ಮ ಮೂಲಕ್ಕೇ ತಿರುಗಿದಾಗ ಹೇಗೋ ಬಚಾವಾಗುತ್ತಾರೆ. ಪ್ರಸಾದನನ್ನು ಇರಗೊಟ್ಟರೆ ತಮ್ಮ ಸ್ವಾರ್ಥಲಾಲಸೆಯನ್ನು ಪೂರೈಸಿಕೊಳ್ಳಲು ಸಾಧ್ಯವಾಗದೆಂದು, ಪ್ರಸಾದನಿಗೆ ಕೆಂಪಿಯ ಜೊತೆ ಅನೈತಿಕ ಸಂಬಂಧವಿರುವುದಾಗಿ ಸುದ್ದಿ ಹಬ್ಬಿಸಿ ಅವನನ್ನು ಕೆಂಪಿಯ ಗಂಡನೇ ಕೊಲ್ಲುವಂತೆ ಕುತಂತ್ರಮಾಡಿ ಯಶಸ್ವಿಯಾಗುತ್ತಾರೆ. "ಈಗ ಹೊನ್ನಳ್ಳಿ ಮೊದಲಿನಂತೇ ತೀರ ಅಲಸಿಯಾಗಿ ಕೊಳೆಯುತ್ತದೆ, ಪ್ರಸಾದ ಸತ್ತ ಮೇಲೆ ಆಸ್ಪತ್ರೆ ಬಾಗಿಲು ತೆರೆದೇ ಇಲ್ಲ"(ಪು.೯೫) ಎನ್ನುವ ವಿವರಣೆ ಗೌಡರಂತಹ ಯಥಾಸ್ಥಿತಿವಾದಿಗಳ ಕುಮ್ಮಕ್ಕನ್ನು ಕಾಣಿಸುತ್ತದೆ. ಪ್ರಸಾದನಂತಹ ವಿದ್ಯಾವಂತ ಯುವಕರು ಹಳ್ಳಿಯನ್ನು ಸುಧಾರಿಸಲು ಪ್ರಯತ್ನಿಸಿ, ಹಳ್ಳಿಗಳು ಸುಧಾರಣೆಯಾದಲ್ಲಿ ಗೌಡರಂತಹವರ ಪಾಳೆಗಾರಿಕೆಗೆ ಕುತ್ತುಬರುತ್ತದೆ. ತಮ್ಮ ಮೇಲೆ ನಡೆಯುತ್ತಿರುವ ದೌರ್ಜನ್ಯ, ಅನ್ಯಾಯಗಳು ಜನಸಾಮಾನ್ಯರಿಗೆ ಅರ್ಥವಾದರೆ ಪ್ರಶ್ನಿಸಲು ಮುಂದಾಗುತ್ತಾರೆ; ಪ್ರತಿಭಟನೆ ಒಳಗಿನಿಂದ ಸಿಡಿಯುತ್ತದೆ. ಅದನ್ನು ತಡೆಯುವ ಕುತಂತ್ರ ಅಧಿಕಾರದ ಸವಿಯುಂಡವರಿಂದ ನಡೆಯುತ್ತಲೇ ಬಂದಿದೆ. ಪ್ರಜಾಪ್ರಭುತ್ವದಲ್ಲಿ ಎಲ್ಲರೂ ಸಮಾನರು, ಆದರೆ ಕೆಲವರು ಹೆಚ್ಚು ಸಮಾನರು ಎನ್ನವುದು ದೇಶಕ್ಕೆ ಸ್ವಾತಂತ್ರ್ಯ ದೊರೆತು ಅರ್ಧಶತಮಾನದ ನಂತರವೂ ದೇಶದ ಎಲ್ಲೆಡೆ ಕಾಣುತ್ತಿರುವ ಸಂಗತಿ. ಇಂತಹ ಶಕ್ತಿ ರಾಜಕಾರಣದ ಒಂದು ಮುಖವನ್ನು ಈ ಕಾದಂಬರಿ ಅನಾವರಣಗೊಳಿಸುತ್ತದೆ. ಜಾತಿ, ವರ್ಗ ಎನ್ನುವುದೆಲ್ಲ ಉಳ್ಳವರು ದುರ್ಬಲರ ಮೇಲೆ ನಡೆಸುವ ದೌರ್ಜನ್ಯಕ್ಕೆ ಒಂದು ನೆಪವಾಗಿ ಕೆಲಸಮಾಡುತ್ತಿರುವ ಸಂದರ್ಭವೇ ಹೆಚ್ಚು ಎನ್ನವುದು ಕೃತಿಯ ನಿಲುವಾಗಿದೆ.

ಅನಕ್ಷರತೆ, ಮೌಢ್ಯ, ಅಜ್ಞಾನಗಳಿಗೂ ಬಡತನಕ್ಕೂ ಭಾರೀ ನಂಟು. ಹಾಗಾಗಿಯೇ ಅಶಕ್ತರನ್ನು ಜಾತಿ, ವರ್ಗ, ಧರ್ಮ, ದೇವರುಗಳ ಹೆಸರಿನಲ್ಲಿ ಶಕ್ತರು ಶೋಷಿಸುವುದು ಮಾಮೂಲಾಗಿ ಹೋಗಿದೆ. ಈ ಸುಳಿಯಲ್ಲಿ ಸಿಲುಕಿ ನಲುಗುತ್ತಿರುವ ಜೀವಿಗಳು ತಮ್ಮ ಸ್ಥಿತಿಗೆ ಪ್ರಾರಬ್ಧವೇ ಕಾರಣವೆಂದು ನಂಬುತ್ತವೆ. ಎರಡು ಹೊತ್ತಿನ ಗಂಜಿಗೂ ಪರದಾಡುವ, ನೆರಳಿಗೂ ಗತಿಯಿಲ್ಲದ ಈ ಜನರ ಕಣ್ಣಲ್ಲಿ ಸುಖದ ಕನಸು

ಗರಿಗೆದರಿರುತ್ತದೆ. ಅದನ್ನೇ ಬಂಡವಾಳವಾಗಿಸಿಕೊಂಡು ಅವರನ್ನು ಇನ್ನಷ್ಟು ಆಳಕ್ಕೆ ತಳ್ಳುವ ಹುನ್ನಾರು ಅವರ ಸುತ್ತಲಿನವರಿಂದ ನಡೆಯುತ್ತದೆ. ಗಂಡಸು ಹೆಂಗಸರಿಬ್ಬರೂ ಈ ಅಡಕೊತ್ತಿನಲ್ಲಿ ಸಿಕ್ಕು ಜೀವಚ್ಛವವಾಗುತ್ತಾರೆ. ಈ ಎಲ್ಲ ವಿವರಗಳನ್ನೂ ಸೂಕ್ಷ್ಮವಾಗಿ ಹಿಡಿದಿಡುತ್ತದೆ ಅನುಪಮಾ ನಿರಂಜನ ಅವರ 'ಕೊಳಚೆಕೊಂಪೆಯ ದಾನಿಗಳು' ಕಾದಂಬರಿ. ಕೊಳಚೆ ಕೊಂಪೆಯಲ್ಲಿ ಬದುಕುತ್ತಿರುವವರನ್ನು ಸಂಕಪ್ಪ, ಗೌಡ, ದೇವಪ್ಪ ಈ ಮೂವರೂ ಬೇರೆ ಬೇರೆ ನೆಲೆಯಿಂದ ಶೋಷಿಸುವವರು. ಅವರ ಶೋಷಣೆಯು ಅಳವಿಗೆ ಸಿಗುವಂತಹುದು. ಆದರೆ ಭಾಗ್ಯ ದುಡಿಯುತ್ತಿರುವ ಮನೆಯ ಅಮ್ಮಾವ್ರು ಮೇರಿಗೆ ಆಶ್ರಯ ನೀಡಿದ ರಾಮಕ್ಕ, ಚಂದನಬಾಯಿ, ಸೆಲ್ವಿ ಮುಂತಾದವರ ಕ್ರಿಯೆ ಮೇಲುನೋಟಕ್ಕೆ ಸಹಾಯಮಾಡುತ್ತಿರುವಂತೆ ಕಾಣುತ್ತದೆ. ಪರಿಣಾಮದ ದೃಷ್ಟಿಯಿಂದ ಅದಕ್ಕೆ ವಿರುದ್ಧವಾದುದಾಗಿರುತ್ತದೆ. ಗಂಡನಿಂದ ಸಾಕಷ್ಟು ಹಿಂಸೆ ಅನುಭವಿಸಿದ್ದರೂ, ತಂಗಿ ಮೇರಿಯನ್ನು ಮನೆಯಿಂದ ಹೊರಹಾಕಲು ಸಾಧ್ಯವಾಗುತ್ತದೆಯೇ ವಿನಾ ಗಂಡ ಅಂಥೋಣಿಯನ್ನು ವಿರೋಧಿಸಲು ಸೆಲ್ವಿಗೆ ಸಾಧ್ಯವಾಗುವುದಿಲ್ಲ. ರಾಮಕ್ಕ ಗಂಡನಿಂದ, ಮಗನಿಂದ ಅನ್ಯಾಯಕ್ಕೊಳಗಾದವಳೇ ಆಗಿದ್ದರೂ ಕೈಯಲ್ಲಿ ನಾಲ್ಕು ಕಾಸು ಸೇರುತ್ತಿದ್ದಂತೆ ಇತರರನ್ನು ಬಲಿಗೆಡಹುತ್ತಾಳೆ. ಚಂದನಬಾಯಿ ಹೆಣ್ಣುಗಳನ್ನು ಬಂಡವಾಳವಾಗಿಸಿಕೊಂಡು 'ಧಂಧೆ' ನಡೆಸುತ್ತಿರುವವಳು. ಇವರೆಲ್ಲ ದೈಹಿಕವಾಗಷ್ಟೇ ಹೆಂಗಸರು. ಅವರ ಬದುಕಿನ ಧೋರಣೆ, ಆಲೋಚನೆಗಳೆಲ್ಲ ಪಿತೃಪ್ರಧಾನ ಸಂಸ್ಕೃತಿಯ ಉತ್ಪನ್ನಗಳೇ ಆಗಿವೆ. ಮೇರಿಯಂತೆ ಭಾಗ್ಯ ಕೂಡ ಬಣ್ಣಬಣ್ಣದ ಕನಸು ಕಾಣುತ್ತಿದ್ದವಳು. ಅವಳು ಅಮಾಯಕತೆ ಅವಳ ಮೇಲಾಗುತ್ತಿದ್ದ ಅತ್ಯಾಚಾರವನ್ನು ವಿರೋಧಿಸುವಂತೆ ಮಾಡಿ ಅವಳನ್ನು ಸಾವಿಗೆ ದೂಡುತ್ತದೆ. ಮೇರಿಯ 'ಎದೆಗಾರಿಕೆ' ಅವಳನ್ನು ಬದುಕಗೊಡುತ್ತದೆ. ಎಲ್ಲ ಬಗೆಯ ಸಾಮಾಜಿಕ ಶೋಷಣೆಗೆ ಒಳಗಾಗಿ ದಾರುಣ ಸ್ಥಿತಿಯಲ್ಲಿರುವ ಕೊಂಪೆಯ ಬದುಕಲ್ಲಿ ಹೆಂಗಸಿನ ಬಾಳ್ವೆ ಇನ್ನಷ್ಟು ದಮನೀಯತೆಗೆ ಒಳಗಾಗಿರುತ್ತದೆ. ಹೆಂಗಸು ಯಾವುದೇ ಜಾತಿ-ವರ್ಗ-ಧರ್ಮಗಳಿಗೆ ಸೇರಿರಲಿ, ಅದರೊಳಗೇ ಆಕೆಯ ಶೋಷಣೆ ಅವ್ಯಾಹತವಾಗಿ ನಡೆಯುತ್ತದೆನ್ನುವುದನ್ನು ಕೊಳಚೆಕೊಂಪೆಯ ದಾನಿಗಳು ಕಂಡರಿಸುತ್ತದೆ.

ಅಸ್ಪೃಶ್ಯತೆಯು ಭಾರತೀಯ ಸಮಾಜಕ್ಕಂಟಿದ ಒಂದು ಕಳಂಕ. ಭಾರತದ ಸುಧಾರಣಾವಾದಿ ಚಳವಳಿಯು ಅನೇಕ ಸಾಮಾಜಿಕ ಪಿಡುಗುಗಳ ನಿವಾರಣೆಗೆ ಶ್ರಮಿಸಿತಾದರೂ ಅಸ್ಪೃಶ್ಯತೆಯ ಬಗೆಗೆ ಹೆಚ್ಚು ಗಮನಹರಿಸಿರಲಿಲ್ಲ. ಗಾಂಧೀಜಿಯವರು ಅಸ್ಪೃಶ್ಯತೆಯ ನಿವಾರಣೆಗಾಗಿ ಅನೇಕ ವಿಧಾಯಕ ಕೆಲಸಗಳನ್ನು ಮಾಡಿದರು. ಅಂಬೇಡ್ಕರರು ಅದರ ಕಠೋರ ಮುಖಗಳನ್ನು ತೆರೆದಿಟ್ಟರು. ಪರಿಣಾಮವಾಗಿ ಅಸ್ಪೃಶ್ಯತೆಯ ಆಚರಣೆಯು ಅಮಾನವೀಯ ಎನ್ನುವ ವಿಚಾರ ಪ್ರಗತಿಪರ ಧೋರಣೆಯುಳ್ಳವರಿಗೆ ಮನವರಿಕೆಯಾಯಿತು. ದೇಶಕ್ಕೆ ಸ್ವಾತಂತ್ರ ದೊರೆತು ಸಂವಿಧಾನ ರಚನೆಯಾಗುವಾಗ ಅಸ್ಪೃಶ್ಯತೆಯ ಆಚರಣೆಯು ಒಂದು ಅಪರಾಧ ಎಂದು ಪರಿಗಣಿಸಲಾಯಿತು. ಇಷ್ಟಾದರೂ ಗ್ರಾಮೀಣ ಪ್ರದೇಶದಲ್ಲಿ

ಇಂದಿಗೂ ಅದನ್ನು ತೊಡೆದು ಹಾಕಲು ಸಾಧ್ಯವಾಗಿಲ್ಲ. ನಗರದ ವಿದ್ಯಾವಂತ ಸಮುದಾಯದಲ್ಲಿ ಬಾಹ್ಯವಾಗಿ ಇದಕ್ಕೆ ವಿರೋಧ ಕಂಡುಬರುತ್ತಿದೆ. ಆದರೆ ಆಂತರಿಕವಾಗಿ ಸವರ್ಣೀಯರು ಅವರನ್ನು ಒಪ್ಪಿಕೊಂಡಿಲ್ಲ. ಹಳ್ಳಿಗಳಲ್ಲಿ ಬಾಹ್ಯಾಚರಣೆಯಲ್ಲಿಯೂ ದಲಿತರನ್ನು ದೂರವೇ ಇಡಲಾಗುತ್ತಿದೆ. ಇಂತಹ ಮನೋಭಾವದ ನಡುವೆಯೂ ಜಾತಿಯನ್ನು ಮೀರಿದ ಪ್ರೀತಿ-ಪ್ರೇಮಗಳು ಹೆಣ್ಣು-ಗಂಡುಗಳನ್ನು ಒಂದುಗೂಡಿಸುತ್ತವೆ. ಪರಸ್ಪರರಲ್ಲಿ ಉಂಟಾಗುವ ಅನುರಾಗ ವ್ಯಕ್ತಿಗತವಾದ್ದರಿಂದ ಅಲ್ಲಿ ಜಾತಿ ಅಮುಖ್ಯವಾಗುತ್ತದೆ. ಈ ರೀತಿ ಮದುವೆಯಾದಾಗ ಮೇಲುಸ್ತರಕ್ಕೆ ಸೇರಿದ ವ್ಯಕ್ತಿಯ ಕುಟುಂಬದ ಇತರ ಸದಸ್ಯರು ಇದನ್ನು ಹೇಗೆ ಸ್ವೀಕರಿಸುತ್ತಾರೆ ಎನ್ನುವುದನ್ನು ವೈದೇಹಿಯವರ 'ಅಸ್ಪೃಶ್ಯರು' ಕಾದಂಬರಿ ತೆರೆದಿಡಲು ಪ್ರಯತ್ನಿಸುತ್ತದೆ. ಈ ಕೃತಿಯಲ್ಲಿ ವೈದೇಹಿಯವರು ಅಸ್ಪೃಶ್ಯತಾ ಆಚರಣೆಯ ವಿವಿಧ ಮಗ್ಗಲುಗಳನ್ನು ವಿಭಿನ್ನ ಪರಿಸರ, ಪಾತ್ರಗಳ ಮೂಲಕ ಅನಾವರಣಗೊಳಿಸುತ್ತಾರೆ.

ರತ್ನ ಹೆತ್ತಾಗಿನ ಸೂತಕದ ಅಸ್ಪೃಶ್ಯತೆ ಹನ್ನೊಂದು ದಿನ ಕಳೆಯುತ್ತಲೇ ಇಲ್ಲವಾಗುತ್ತದೆ. ನರಪಟೆಯ ನೋಟವೇ ನಿಷಿದ್ಧವಾದುದು. ಕೂಸಾಳು, ಕೊರಾತಿಯರು ಸ್ಪರ್ಶಕ್ಕೆ ಹೊರತಾದವರು. ಆದರೆ ಈ ಜನರ ಕೈಂಕರ್ಯ ವಾಸುದೇವರಾಯರ ಮನೆಯವರಿಗೆ ಬೇಕೇಬೇಕು. ಮಾನವ ಬದುಕಿನ ನಿರಂತರತೆಗೆ ಹೆರಿಗೆ ಅನಿವಾರ್ಯ. ಅಂತೆಯೇ ಕೂಸಾಳುಗಳು ಮಾಡುವ ಕೆಲಸವೂ ಆ ಪರಿಸರದ ಬದುಕಿಗೆ ಅತ್ಯಗತ್ಯ. ಹೆರಿಗೆಯ ಅಸ್ಪೃಶ್ಯತೆಗೆ ಕಾಲಮಿತಿಯುಂಟು. ಕೆಲಸದ ಕಾರಣದಿಂದುಂಟಾದ ಅಸ್ಪೃಶ್ಯತೆಯನ್ನು ವಂಶಪಾರಂಪರ್ಯವಾಗಿ ಮುಂದುವರಿಸಲಾಗುತ್ತಿದೆ. ಜಲಗಾರನ ಮಗ ಆಫೀಸರನಾದರೂ ಆತ ಜಲಗಾರನೇ! ಸಂಪ್ರದಾಯದ ನೆಲೆಯಲ್ಲಿಯೇ ಯೋಚಿಸುವ ಪಾರ್ವತಕ್ಕನಿಂದ ಹಿಡಿದು ಮಡಿ-ಮೈಲಿಗೆಯನ್ನು ಬೆರಳು ಚೀಪುತ್ತ ವಿಸ್ಮಯದಿಂದ ಪ್ರಶ್ನಿಸುವ ಪುಟ್ಟನವರೆಗೆ ಅಸ್ಪೃಶ್ಯತೆಯ ವ್ಯಾಖ್ಯಾನ ಭಿನ್ನ ನೆಲೆಯಿಂದ ನಡೆಯುತ್ತದೆ. ಭಾಸ್ಕರ ಕೊರಾತಿ ಹುಡುಗಿಯನ್ನು ಮದುವೆಯಾದದ್ದಕ್ಕಾಗಿ ನಡೆಯುವ ಚರ್ಚೆಗಳು ತಲೆಮಾರುಗಳ ದೃಷ್ಟಿಕೋನದಲ್ಲಿರುವ ಅಂತರವನ್ನು ಬಿಚ್ಚಿಡುತ್ತವೆ. ಸಾಂಪ್ರದಾಯಿಕತೆ ಮಾನವೀಯತೆಗಳ ಮುಖಾಮುಖಿಯಲ್ಲಿ ವಾಸುದೇವರಾಯರು ಮಾನವೀಯತೆಗೆ ಬೆಲೆಕೊಟ್ಟಿದ್ದರಿಂದ ಭಾಸ್ಕರ ಜೈಲಿಗೆ ಹೋದಾಗ ತುಂಬು ಗರ್ಭಿಣಿ ಕುಮುದಿನಿಯನ್ನು ಮನೆಗೆ ಕರೆತರಲು ಅವರಿಗೆ ಸಾಧ್ಯವಾಗುತ್ತದೆ. ಅಲ್ಲದೆ, ವಾಸುದೇವರಾಯರು ಸುಧಾರಣಾವಾದಿ ಆಲೋಚನೆಗೆ ತೆರೆದುಕೊಂಡವರಾಗಿದ್ದು ತಮ್ಮ ಬದುಕಲ್ಲಿ ಸಾಧಿಸಲಾಗದ್ದನ್ನು ಭಾಸ್ಕರ ಸಾಧಿಸಿದ್ದರಿಂದ ಅವನಲ್ಲಿ ತಮ್ಮ ಪ್ರತಿಬಿಂಬವನ್ನು ಕಾಣಲು ಬಯಸಿದವರು. ಹೊರಜಗತ್ತಿಗೆ ತುಸುವೂ ತೆರೆದುಕೊಳ್ಳದ ಪಾರ್ತಕ್ಕ, ಗೌರಮ್ಮನವರಿಗೆ ಕುಮುದಿನಿ ಕೊರಾತಿಯಾಗಷ್ಟೇ ಕಾಣುತ್ತಾಳೆ. ಗಂಡನ ಹೆದರಿಕೆಯಿಂದ ಗೌರಮ್ಮ ಅನಿವಾರ್ಯವಾಗಿ ಸುಮ್ಮನಾದರೂ, ಪಾರ್ತಕ್ಕ ಸೊಸೆಯನ್ನು ಮನೆಯೊಳಗೆ ಕರೆದುಕೊಳ್ಳುವ ಸಂಗತಿಯನ್ನೇ ಊಹಿಸಲಾರದ ಸ್ಥಿತಿಯಲ್ಲಿ

ಕತ್ತಲಕೋಣೆ ಸೇರುತ್ತಾರೆ. (ಅವರಿಬ್ಬರನ್ನೂ ಅರ್ಥಮಾಡಿಕೊಂಡು ಅವರನ್ನು ಮಾನಸಿಕವಾಗಿ ಸಿದ್ಧಗೊಳಿಸುವ ಪ್ರಯತ್ನವನ್ನು ಮಾಡದೆ ತಮ್ಮ ಮೂಗಿನ ನೇರಕ್ಕೆ ನಡೆದು ಅಭಿಪ್ರಾಯವನ್ನು ಹೇರುವ ವಾಸುದೇವರಾಯರ ನಡವಳಿಕೆ ಇಲ್ಲಿ ಆಕ್ಷೇಪಾರ್ಹವೇ) ಮಾನವೀಯ ಅನುಕಂಪದ ಸ್ಪರ್ಶವಿಲ್ಲದ ಮಡಿವಂತಿಕೆ ಪಾರ್ತಕ್ಕನನ್ನು ಅಸ್ಪೃಶ್ಯಳನ್ನಾಗಿ ಮಾಡುತ್ತದೆ. "ಜಾತಿ ಇಲ್ಲದ ಬಸುರು ಆ ಬಸುರಿಗೆ ಕಲ್ಲು ಬಿದ್ದು ಹೋಗಲಿ"(ಪು೧೨೭) "ನೀನು ಅವಳನ್ನು ಕರೆದುಕೊಂಡು ಬಂದೆಯೆಂದರೆ ನಾನು ದೇಶಾಂತರ ಹೊರಟು ಹೋಗುತ್ತೇನೆ. ಕೆರೆಯೋ ಬಾವಿಯೋ ಕಾಣುತ್ತೇನೆ"(ಪು೧೩೦) ಎನ್ನುವ ಪಾರ್ತಕ್ಕನಿಗೆ ಬಸುರಿ ಹೆಂಗಸಿನ ಸ್ಥಿತಿಗಿಂತ 'ಜಾತಿಪ್ರಜ್ಞೆ'ಯೇ ಹೆಚ್ಚಾಗುತ್ತದೆ. 'ಹೆಣ್ಣು ಮಕ್ಕಳು ಮುಚ್ಚಟೆಯಾಗಿದ್ದಷ್ಟು ಜಾತಿ ಧರ್ಮ ದೇಶ ಮನೆ ಉಳಿಯುತ್ತದೆ' ಎಂಬ ಉಪದೇಶ ಕೇಳಿ ಬೆಳೆದ ಗೌರಮ್ಮನಿಗೆ "ಹೆಂಗಸು ಎಷ್ಟಾದರೂ ಹೆಂಗಸೇ ಕಾಂಬ. ನಿನ್ನನ್ನು ಒಬ್ಬ ದಾರಿ ಮೇಲೆ ಒತ್ತಿ ಹಿಡಿದುಬಿಟ್ಟ ಅಂತೇಳಿ ತಿಳಕೋ. ಏನು ಮಾಡುತ್ತಿ? ಜನ ಅವನನ್ನು ಹೊಡೆಯಬಹುದು, ಇಲ್ಲ ಕೊಂದೇ ಹಾಕಬಹುದು. ಆದರೆ ನಿನ್ನ ಮರ್ಯಾದೆ ಹೋದದ್ದು ಹೋಯಿತ? ಮತ್ತೆ ಏನು ಕೊಟ್ಟರೂ ವಾಪಸ್ಸು ಬರಲಿಕ್ಕಿಲ್ಲ." ಎಂದು ಸರೋಜಳಿಗೆ ಹೇಳಲಿಕ್ಕಷ್ಟೇ ಬಲ್ಲಳು. ಯಾಕೆ? ಏನು? ಎಂಬ ಪ್ರಶ್ನೆಗಳಿಲ್ಲದೆ ಸಮಾಜ ನಿರ್ಮಿತ ಗೆರೆಯೊಳಗೇ ಇರಬೇಕೆನ್ನುವುದು ಅವಳ ತಿಳಿವಳಿಕೆ. ಸುಶಿಕ್ಷಿತಳಾದ ಸರೋಜ ಆಧುನಿಕ ವಿಚಾರಗಳಿಗೆ ತನ್ನನ್ನ ಒಡ್ಡಿಕೊಳ್ಳಲು ಹಿಂಜರಿಯುವಂಥವಳಲ್ಲ. "ಮರ್ಯಾದೆ ಎಂಬುದು ನಾವು ಅರ್ಥಮಾಡಿಕೊಂಡ ಹಾಗಿದೆ. ನನ್ನ ಮರ್ಯಾದೆ ಅವ ಕಸಿಯಲು ಹೊರಟರೆ ಅವನ ಮರ್ಯಾದೆ ಹೋದೀತೇ ವಿನಾ ನನ್ನದಲ್ಲ" ಎಂದು ರೂಢಿಗತ ಮೌಲ್ಯವನ್ನು ತಿರಸ್ಕರಿಸುವ, ಹೊಸ ಮೌಲ್ಯವನ್ನು ಸ್ವೀಕರಿಸುವ ಮನೋಭಾವ ಸರೋಜಳದು. ಹಾಗಾಗಿ ಅವಳಿಗೆ ಭಾಸ್ಕರ ಕುಮುದಿನಿಯರ ಮದುವೆ ತಪ್ಪೆನಿಸುವುದಿಲ್ಲ. ಅಸಮಾನತೆಯನ್ನು ಪ್ರಶ್ನಿಸುವ ಅವಳ ಆಲೋಚನಾ ಕ್ರಮವನ್ನು ಭಾವನ ಬಗೆಗೆ ಅವಳು ತೋರುವ ಪ್ರತಿಕ್ರಿಯೆಯಲ್ಲಿ ಕಾಣಬಹುದು. ಮುಟ್ಟಾದ ಹೆಂಗಸನ್ನು ದೂರವಿಡುವುದರ ವಿರುದ್ಧವೂ ಆಕೆ ದನಿಯೆತ್ತುತ್ತಾಳೆ.

ಜಾತಿಯ ಒಳಗಡೆಯೇ ಮೈನೆರೆದ ಹೆಣ್ಣಿನ ಮೇಲಿನ ನಿರ್ಬಂಧಗಳು ಅವಳ ಕ್ರಿಯಾಶೀಲತೆಗೆ ಕಡಿವಾಣ ಹಾಕುತ್ತವೆ. ಜಾತಿಯ ಕಾರಣದಿಂದ ಕೆಳಸ್ತರದ ಜನರ ಮೇಲೆ ಹೇರುವ ನಿಷೇಧಗಳು ಇಡೀ ಸಮುದಾಯದ ಚಲನಶೀಲತೆಯನ್ನು ನಿಯಂತ್ರಿಸುತ್ತವೆ. ಈ ರೀತಿಯಲ್ಲಿ ಅಸ್ಪೃಶ್ಯತೆಯು ಸಾಮಾಜಿಕ ಹಾಗೂ ಲಿಂಗಾಧರಿತ ಅಸಮಾನತೆಗೆ ಕಾರಣವಾಗಿರುವುದನ್ನು ಕಾದಂಬರಿಯು ಭಿನ್ನ ಆಯಾಮದಿಂದ ವಿಶ್ಲೇಷಿಸುತ್ತದೆ.

ಅಂತರ್ಜಾತಿಯ ಭಿನ್ನ ಅಂತಸ್ತಿನ ವೈವಾಹಿಕ ಸಂಬಂಧಗಳನ್ನು ತೀರ ಸಹಜವಾಗಿ ಒಪ್ಪಿಕೊಳ್ಳುವಂತಹ ವಾತಾವರಣವು ನಮ್ಮ ಸಮಾಜದಲ್ಲಿ ನಿರ್ಮಾಣವಾಗಿಲ್ಲ. ಆದಾಗ್ಯೂ, ಕೆಲವೊಮ್ಮೆ ಬದುಕಲ್ಲಿ ಎದುರಾಗುವ ಸನ್ನಿವೇಶಗಳು ಹೆತ್ತವರು ಇಂತಹ ಸಂಬಂಧಗಳನ್ನು

ಒಪ್ಪಿಕೊಳ್ಳುವಂತೆ ಮಾಡುವುದಿದೆ. ಗಂಗಾ ಪಾದೇಕಲ್ ಅವರ ಕತೆಗಳಲ್ಲಿ ಈ ರೀತಿಯ ಸಮಸ್ಯೆ ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. 'ವಾಸ್ತವ' ಸಂಕಲನದ ಮೂರು ಕತೆಗಳು ಈ ಸಮಸ್ಯೆಯ ಸುತ್ತ ಸುತ್ತುತ್ತವೆ. ಮೂರರಲ್ಲಿಯೂ ತಮ್ಮ ಮಕ್ಕಳ ಇಂತಹ ಸಂಬಂಧವನ್ನು ಒಪ್ಪುವ ತಂದೆ-ತಾಯಿಗಳು ಮಾನವೀಯತೆಗೆ ಒತ್ತು ನೀಡುತ್ತಾರೆ. ಜಾತಿ, ಅಂತಸ್ತುಗಳಿಗಿಂತ ಮಾನವೀಯತೆ ಹಿರಿದು ಎಂಬುದಾಗಿ ಈ ಕತೆಗಳು ಪ್ರತಿಪಾದಿಸುತ್ತವೆ.

'ಉತ್ತರಾರ್ಧ' ಕತೆಯಲ್ಲಿ ಅರವಿಂದನನ್ನು ತಂದೆ-ತಾಯಿ ಎರಡೂ ಆಗಿ ತಾಯಿ ಕಷ್ಟಪಟ್ಟು ಬೆಳೆಸುತ್ತಾಳೆ. ಓದಿಸುತ್ತಾಳೆ. ಮಗ ಅನ್ಯಜಾತಿಯ ಹುಡುಗಿಯನ್ನು ಪ್ರೀತಿಸಿ ಮದುವೆಯಾದಾಗ ದೊಡ್ಡಮ್ಮ(ತಾಯಿ)ನಿಗೆ ಆಘಾತವಾಗುತ್ತದೆ. ಆ ಸಂಬಂಧವನ್ನು ಒಪ್ಪಿಕೊಳ್ಳದ ಆಕೆ ಒಂಟಿಯಾಗಿ ಬದುಕುತ್ತಾಳೆ. ಆಗಾಗ ಮಗ ಮನೆಗೆ ಬಂದು ಹೋಗುತ್ತಾನಾದರೂ ಅವರಿಬ್ಬರ ನಡುವೆ ಸೊಸೆಯ ನೆರಳು ಸೋಂಕದಂತೆ ನೋಡಿಕೊಳ್ಳುತ್ತಾರೆ. ಬಾಡಿಗೆ ಮನೆಯಲ್ಲಿದ್ದ ಸರಳೆಗೆ ಅವಳ ಗಂಡನ ಅನುಪಸ್ಥಿತಿಯಲ್ಲಿ ಹೆರಿಗೆ ನೋವು ಶುರುವಾದಾಗ ಸಹಾಯಮಾಡುವುದು ದೊಡ್ಡಮ್ಮನಿಗೆ ಅನಿವಾರ್ಯವಾಗುತ್ತದೆ. ಆ ಹೊತ್ತಿನಲ್ಲಿ ಗರ್ಭಿಣಿಯಾಗಿರುವ ಸೊಸೆಯ ನೆನಪಾಗಿ ಅವಳ ಬಗೆಗೆ ಅನುಕಂಪ ಮೂಡುತ್ತದೆ. ಸೊಸೆಯನ್ನು ಕರೆತರುವಂತೆ ಮಗನಿಗೆ ಹೇಳುವ ಆಕೆ ಸೊಸೆ ತಿರುಗಿ ಹೋಗಲು ಬಿಡದೆ ಅಲ್ಲಿಯೇ ಇರುವಂತೆ ಆದೇಶಿಸುತ್ತಾಳೆ. ಮನೆಯವರ ಸಹಾಯವಿಲ್ಲದೆ ಸರಳೆ ಆಸ್ಪತ್ರೆಯಲ್ಲಿ ಹೆರುವಂತಾದ ಸ್ಥಿತಿಯನ್ನು ಕಂಡು ದೊಡ್ಡಮ್ಮನ ಹೆಣ್ತನ ಜಾಗೃತವಾಗಿ ಆರತಿಯನ್ನು ಸೊಸೆಯೆಂದು ಒಪ್ಪಿಕೊಳ್ಳಲು ನಿರ್ಧರಿಸುತ್ತಾಳೆ. ಆರತಿಯ ಜಾತಿ ಹಿಂದಾಗಿ ಬಸುರಿ ಹೆಣ್ಣು ಎನ್ನುವ ಭಾವನೆ ಬಲಿಯುತ್ತದೆ. ಮಗನ ತಪ್ಪನ್ನು ಕ್ಷಮಿಸಬೇಕೆನ್ನುವ ಔದಾರ್ಯಕ್ಕಿಂತ ಸೊಸೆಗೆ ಇಂತಹ ಹೊತ್ತಿನಲ್ಲಿ ಮಾತ್ರ ಹೃದಯದ ಆಸರೆ ಬೇಕೆನ್ನುವ ವಾತ್ಸಲ್ಯ ಭಾವ ಚಿಗುರುತ್ತದೆ. ಹಾಗಾಗಿ. "ಮುಸ್ಸಂಜೆ ಹೊತ್ತನಲ್ಲಿ ಲಕ್ಷ್ಮೀ ಹಾಗೆ ಬಂದ ಸೊಸೇನ ಯಾರಾದರೂ ಕಳಿಸುತ್ತಾರೇನೋ" ಎಂದು ಮಗನಿಗೆ ಹೇಳಲು ಸಾಧ್ಯವಾಗುತ್ತದೆ.

ವಾಸುದೇವರಾಯರಿಗೆ ಹಾಗೂ ದೊಡ್ಡಮ್ಮನಿಗೆ ಅನ್ಯಜಾತಿಯ ಹುಡುಗಿಯನ್ನು ಸಲೀಸಾಗಿ ಸ್ವೀಕರಿಸಲು ಸಾಧ್ಯವಾಗುವುದು ಸನ್ನಿವೇಶದ ತೀವ್ರತೆಯಿಂದಾಗಿ, ಎರಡೂ ಸಂದರ್ಭಗಳಲ್ಲಿ ಕುಸುಮ, ಆರತಿಯರ ತಾಯ್ತನದ ಸ್ಥಿತಿಯೇ ಅವರನ್ನು ಒಪ್ಪಿಕೊಳ್ಳಲು ಕಾರಣವಾಗುತ್ತದೆ. ಹುಟ್ಟಿನೊಂದಿಗೆ ಜಾತಿಯನ್ನು ತಳಕು ಹಾಕುತ್ತಲೇ ಬಂದ ಸಾಮಾಜಿಕ ಪರಿಸರದಲ್ಲಿ ಅಂತಹ ಹುಟ್ಟಿನ ಸನ್ನಿವೇಶವೇ ಬದಲಾವಣೆಗೆ ಕಾರಣವಾಗುವುದು ಒಂದು ರಚನಾತ್ಮಕ ಪ್ರತಿಕ್ರಿಯೆ ಎನಿಸುತ್ತದೆ.

ಅಂತಸ್ತಿನ ವ್ಯತ್ಯಾಸವೆಂದೋ, ಜಾತಿಯ ಭಿನ್ನತೆಯೆಂದೋ ಹಿರಿಯರಿಂದ ಆಕ್ಷೇಪಣೆ ಬಂದಾಗ ಅದನ್ನು ಮೀರಿಯೂ ಪರಸ್ಪರ ಒಲಿದವರು ಒಂದಾಗಲು ಸಾಧ್ಯವಾಗುವುದು ಇಬ್ಬರಲ್ಲಿಯೂ ದೃಢತೆ ಇದ್ದಾಗ ಮಾತ್ರ. ಸಾಮಾನ್ಯವಾಗಿ, ಹುಡುಗಿಯರು ಪ್ರೀತಿಸಿದವನನ್ನೇ

ಮದುವೆಯಾಗಿ ಸಂಸಾರ ನಡೆಸಲು ಬಯಸುತ್ತಾರೆ. ಕೆಲವೊಮ್ಮೆ ಹುಡುಗ ಹಾಗೆ ನಂಬಿಸಿ ಕೈಬಿಡುವುದಿದೆ. ಅಂತಹ ಸನ್ನಿವೇಶದಲ್ಲಿ ಆತನ ಹೆತ್ತವರ ಜವಾಬ್ದಾರಿ ಏನು? ವಿಷಯ ಗೊತ್ತಾದರೂ ಹಿರಿಯರು ಸುಮ್ಮನಿರಬೇಕೇ? ಯಾವ ನಿರ್ಧಾರ ಕೈಗೊಳ್ಳಬೇಕು ಎನ್ನುವುದರ ಕಡೆ ಗಂಗಾ ಪಾದೇಕಲ್ ಅವರ 'ಒಂದಾನೊಂದು ಊರಲಿ' ಹಾಗೂ 'ಬೆಲೆ' ಕತೆಗಳು ಗಮನ ಹರಿಸುತ್ತವೆ. ಒಂದಾನೊಂದು ಊರಲಿ ಕತೆಯಲ್ಲಿ ಅಪರಿಚಿತ ಕೈಬರಹವುಳ್ಳ ಕಾಗದದಿಂದ ಅನಂತಯ್ಯನವರಿಗೆ ತಮ್ಮ ಮಗ ಕುಮಾರ ಅವನ ಆಫೀಸಲ್ಲಿ ಕೆಲಸ ಮಾಡುತ್ತಿರುವ ಕ್ಲರ್ಕ್ ಒಬ್ಬಳ ಜೊತೆ ಪ್ರೇಮದಾಟ ಆಡಿ ಅದರ ಫಲ ಅವಳ ಹೊಟ್ಟೆಯಲ್ಲಿ ಬೆಳೆಯುತ್ತಿದೆ ಎಂದು ಗೊತ್ತಾಗುತ್ತಲೇ ಆ ಕಡೆ ಮುಖಹಾಕುವುದನ್ನು ನಿಲ್ಲಿಸಿರುವ ವಿಷಯ ತಿಳಿಯುತ್ತದೆ. ಇದಕ್ಕೆ ಮೊದಲೇ ಮಗ ಯಾವುದೋ ಹುಡುಗಿಯ ಜೊತೆ ಸುತ್ತಾಡುತ್ತಿರುವುದಾಗಿ ಯಾರಿಂದಲೋ ತಿಳಿದ ಅನಂತಯ್ಯ ಮಗನನ್ನು ವಿಚಾರಿಸಿದಾಗ 'ಮಾನ ಮರ್ಯಾದೆ ಇದ್ದ ಹೆಣ್ಣಾಗಿದ್ದರೆ ಹಾಗೆಲ್ಲ ಬರುತ್ತಿದ್ದಳೇ ಸಲೀಸಾಗಿ?' ಎಂದು ಉಡಾಫೆಯಾಗಿ ನುಡಿದಿರುತ್ತಾನೆ. ಆಗ ಈ ವಿಷಯವನ್ನು ಅನಂತಯ್ಯ ಗಂಭೀರವಾಗಿ ಪರಿಗಣಿಸಿರುವುದಿಲ್ಲ. 'ಕುಮಾರನು ಜವಾಬ್ದಾರಿಯಿಂದ ಜಾರಿದ ರೀತಿಗೆ ತನಗೆ ವ್ಯಥೆಯಾಗಿರುವುದಾಗಿಯೂ, ಆತನ ತಂದೆಗೆ ತಮ್ಮಿಬ್ಬರ ಸಂಬಂಧ ಕುರಿತು ತಿಳಿಸುವ ಅಗತ್ಯವಿದೆ ಎನಿಸಿದ್ದರಿಂದ ಪತ್ರ ಬರೆದಿರುವುದಾಗಿ ಬರೆದ ವಸುಧಳ ಬರವಣಿಗೆಯ ರೀತಿಗೆ ಅನಂತಯ್ಯನವರಲ್ಲಿ ತಳಮಳ ಶುರುವಾಗುತ್ತದೆ. ಅದೇ ವೇಳೆಯಲ್ಲಿ ಅವರ ಆಳು ಮಗ ಐತನ ಸೊಸೆ ಮದುವೆಯಾಗಿ ಏಳು ತಿಂಗಳಿಗೆಲ್ಲ ಸರಿಯಾಗಿ ಬೆಳವಣಿಗೆಯಾದ ಗಂಡುಮಗುವನ್ನು ಹೆರುತ್ತಾಳೆ. ಸುತ್ತಲಿನವರ ಕೊಂಕಿಗೆ ಬಲಿಯಾಗುವ ಐತನ ಬಗೆಗೆ ಅವರಿಗೆ ಅನುಕಂಪ ಮೂಡುತ್ತದೆ. ಈ ವಿಷಯ ಅರಿತಿದ್ದ ಅವರ ಹೆಂಡತಿ ಶಂಕರಿ "ನೀವೆಷ್ಟಾದರೂ ಗಂಡಸರು ತಾನೆ? ನಿಮಗೆ ಹೆಣ್ಣಿನ ನೋವು ಹೇಗೆ ತಿಳಿಯಲು ಸಾಧ್ಯ? ತಪ್ಪು ಮಾಡುವುದು ಇಬ್ಬರೂ ಸೇರಿಯೇ ಆದರೂ ಶಿಕ್ಷೆ ಅನುಭವಿಸುವವಳು ಹೆಣ್ಣು ಮಾತ್ರವೇ... ಅವಳನ್ನು ಈ ಸ್ಥಿತಿಗೆ ತಂದವನಿಗೇ ಕೊಟ್ಟು ವಿವಾಹ ಮಾಡಿದ್ದರೆ, ಅವಳು ಹೀಗೆಲ್ಲ ನರಕ ಅನುಭವಿಸಲಿಕ್ಕಿತ್ತೇ? ಅವಳೇನೋ ತಪ್ಪಿದಳು. ಹಾಗೆಂದು ಅವಳ ಹೆತ್ತವರೂ ತಪ್ಪಿದ್ದು ಸರಿಯೇ"(ಪು೨೨) ಎಂದು ಹೇಳುವ ಮಾತುಗಳಿಂದ ಹಾಗೂ 'ಮನಿಸಾ ಅಂದ ಮೇಲೆ ನಂಬಿಕೆ, ನಿಯತ್ತು ಮುಖ್ಯ ಆಯ್ಯ, ಯಾರ್ಗೆ ಹೆದರದಿದ್ರೂ ಅವ್ರವ್ರ ಮನಸ್ಸಿಗಾದ್ರೂ ಹೆದ್ರ ಬೇಕಲ್ಲಯ್ಯಾ?' ಎಂಬ ಐತನ ಹೇಳಿಕೆಯಿಂದ ಅನಂತಯ್ಯನವರಿಗೆ ತಾವು ತೆಗೆದುಕೊಳ್ಳಬೇಕಾದ ನಿರ್ಧಾರ ಏನೆನ್ನುವುದು ಸ್ಪಷ್ಟವಾಗುತ್ತದೆ. ಮಗನನ್ನು ಒಪ್ಪಿಸಿ ವಸುಧಳನ್ನು ಸೊಸೆಯಾಗಿ ಸ್ವೀಕರಿಸಲು ನಿರ್ಣಯಿಸುತ್ತಾರೆ.

ಮಗನ ನಡವಳಿಕೆಯ ಬಗೆಗೆ ಪುನಃ ಯೋಚಿಸುವ ಅನಂತಯ್ಯನವರಿಗೆ ವಸುಧಳೊಬ್ಬಳದೇ ತಪ್ಪು ಎನಿಸುವುದಿಲ್ಲ. ಮಗನ ತಪ್ಪನ್ನು ತಿದ್ದುವ ಅಗತ್ಯವಿದೆ ಎಂಬ

ಭಾವನೆ ಬರುತ್ತದೆ. ವಸುಧ ಅನ್ಯಾಯವಾಯಿತೆಂದು ದೂರಿದ್ದರೆ ಅವರಿಗೆ ಹಾಗೆನಿಸುತ್ತಿತ್ತೋ ಇಲ್ಲವೊ, ಆದರೆ ಅವಳ ಆಲೋಚನಾ ಕ್ರಮವು ಅವಳಿಗೆ ನ್ಯಾಯ ದೊರಕಿಸಿಕೊಡಬೇಕೆಂಬ ಪ್ರಜ್ಞೆಯನ್ನು ಅವರಲ್ಲಿ ಮೂಡಿಸುತ್ತದೆ. ಪ್ರೇಮ ಸಂಬಂಧಗಳಲ್ಲಿ ಮಹಿಳೆಗೆ ಅನ್ಯಾಯವಾಗುವ ಸನ್ನಿವೇಶ ನಿರ್ಮಾಣವಾದಲ್ಲಿ ಅದನ್ನು ಸರಿಪಡಿಸುವ ಜವಾಬ್ದಾರಿ ಹಿರಿಯರದೂ ಆಗಿರುತ್ತದೆ ಎನ್ನುವತ್ತ ಕತೆ ಒತ್ತು ನೀಡುತ್ತದೆ.

'ಬೆಲೆ'ಯಲ್ಲಿ ಮಗನ ಪ್ರೇಮಪ್ರಕರಣ ಗೊತ್ತಿದ್ದರೂ ಗೌಡ ಅವನನ್ನು ಆ ಹುಡುಗಿಯಿಂದ ವಿಮುಖನನ್ನಾಗಿಸಲು ಪ್ರಯತ್ನಿಸುತ್ತಾನೆ. ಗಂಡಸಿಗೆ ಇಂತಹ ಸಂಬಂಧಗಳು ಅಪರೂಪವೇನಲ್ಲ, ಅದನ್ನು ಅಲ್ಲಿಗೇ ಕಡಿದುಕೊಳ್ಳಬೇಕೆಂದು ರಾಜನಿಗೆ ಹೇಳುವ ಗೌಡ ಮಗನಿಗೆ ಬೇರೆ ಹುಡುಗಿಯೊಂದಿಗೆ ಮದುವೆಗೆ ಏರ್ಪಾಟು ಮಾಡುತ್ತಾನೆ. ಯೌವನದ ಉತ್ಸಾಹದಲ್ಲಿ ರಾಜನೊಡನೆ ಸಂಬಂಧ ಬೆಳೆಸಿರುವುದರ ಪರಿಣಾಮವಾಗಿ ಗರ್ಭ ಧರಿಸಿದ ಆ ಹುಡುಗಿ ರಾಜನ ಮನೆಗೆ ಬರುತ್ತಾಳೆ. ವಿಷಯ ತಿಳಿದ ರಾಜನ ತಾಯಿ ನಂಜಮ್ಮನಿಗೆ ಗೊಂದಲವಾಗುತ್ತದೆ. ಅವಿಭಕ್ತ ಕುಟುಂಬದ ಅನಭಿಷಿಕ್ತ ದೊರೆಯಾಗಿದ್ದ ಗೌಡನನ್ನು ಎದುರಿಸಲಾರದೆ ಆ ಮನೆಯ ಹೆಂಗಸರು ನೊಂದಿರುತ್ತಾರೆ. ಗಂಡನ 'ಹೊರಚಾಳಿ'ಯನ್ನು ಸಹಿಸುತ್ತ ಬಂದಿದ್ದ ನಂಜಮ್ಮ ಮಗನ ವಿಷಯದಲ್ಲಿ ತನ್ನದೇ ಆದ ನಿಲುವನ್ನು ಪ್ರಕಟಿಸುತ್ತಾಳೆ. ಆ ಹುಡುಗಿಗೆ ಹಣಕೊಟ್ಟು ಸಾಗಹಾಕಬೇಕೆಂಬ ಗೌಡನ ಮಾತಿಗೆ ಆಕೆ ತೋರುವ ಪ್ರತಿಕ್ರಿಯೆ ಗೌಡನನ್ನಷ್ಟೇ ಅಲ್ಲ, ಓದುಗರನ್ನೂ ದಂಗುಬಡಿಯುವಂತೆ ಮಾಡುತ್ತದೆ. "ನಿಮ್ಮಗನ ಬೆಲೆ ಎಷ್ಟು?" ಎಂದು ಪ್ರಶ್ನಿಸುವ ನಂಜಮ್ಮನ ಧೈರ್ಯಕ್ಕೆ ಬೆಚ್ಚಿದ ಗೌಡ 'ತಲೆ ನೆಟ್ಟಗಿದೆಯಾ ನಿಂಗೆ' ಎಂದು ಗುಡುಗುತ್ತಾನೆ. "ಗ್ಯಾನ ಸರೀಗಿದ್ದುದಕ್ಕ ಕೇಳ್ತಿದನಿ. ಹಂಗೂ ನಿಮ್ಗೆ ತಿಳಿಯಾಕುಲ್ಲಂದ್ರ ಇನ್ನಾ ಸರಿಯಾಗೇ ಹೇಳ್ತನಿ ನಮ್ ಮಗಾ ರಾಜನ ಬೀಜದ ಬೆಲೆ ಎಷ್ಟು?"(ಪು೧೩೦) ಎಂದೇ ಅವಳು ಗಂಡನನ್ನು ಪ್ರಶ್ನಿಸುತ್ತಾಳೆ. ಗೌರವಸ್ಥ ಮಹಿಳೆಯೊಬ್ಬಳ ಬಾಯಲ್ಲಿ ಇಂತಹ ಮಾತುಗಳು ಬರಲು ಸಾಧ್ಯವೇ? ಎನ್ನುವ ಪ್ರಶ್ನೆ ನಮ್ಮನ್ನು ಕಾಡಬಹುದು. ಗಂಡನ ಲೈಂಗಿಕ ಸ್ವೇಚ್ಛಾಚಾರದಿಂದ ಬೇಸತ್ತ ಹೆಂಡತಿ ಮಗನೂ ಅದೇ ದಾರಿ ಹಿಡಿಯಬಾರದೆಂದು, ಗಂಡನನ್ನು ಎದುರಿಸುವ ಉಪಾಯವೆಂದು ಅನಿವಾರ್ಯವಾಗಿ ಈ ಮಾತನ್ನು ಆಡಲು ಮುಂದಾಗಿರಬೇಕು. ದೈಹಿಕ ಭಿನ್ನತೆಯೇ ಗಂಡಸ್ತನ ಎಂದು ಆಲೋಚಿಸುತ್ತ ಬಂದ ಪರಿಸರದಲ್ಲಿ, ಗೌಡನಂತಹ ಮನೋಭಾವವಳ್ಳ ಪುರುಷನನ್ನು ಎದುರಿಸಲು ಇಂತಹ ಹಸಿಯಾದ ಮಾತಿನ ಅಗತ್ಯವಿದೆ ಎನ್ನುವುದನ್ನು ಕತೆ ತೆರೆದಿಡುತ್ತದೆ. ಗಂಡು-ಹೆಣ್ಣುಗಳ ನಡುವಿನ ತಾರತಮ್ಯಕ್ಕೆ, ಗಂಡಿನ ಹಿರಿಮೆಗೆ 'ಅದೇ' ಕಾರಣವೆಂಬ ಭಾವನೆ ಪ್ರಚಲಿತವಿರುವುದನ್ನು ವ್ಯಂಗ್ಯಮಾಡಲಾಗಿದೆ. ಅದೇ ಪರಿಭಾಷೆಯನ್ನೇ ಬಳಸಿ ಪೌರುಷತ್ವಕ್ಕೆ ಘಾಸಿಯಾಗುವಂತೆ ಮಾಡುವುದರ ಮೂಲಕ ಗಂಡಿನ ಅಹಮಿಕೆಯನ್ನು ತಗ್ಗಿಸುವುದು ಲೇಖಕಿಯ ಉದ್ದೇಶವಾಗಿದೆ.

ಒಂದೆಡೆ ನಂಜಮ್ಮನ ಪ್ರತಿಕ್ರಿಯೆ ಹೀಗಿದ್ದರೆ ಇನ್ನೊಂದೆಡೆ ಆ ಹುಡುಗಿ ಆಡುವ ಮಾತುಗಳು ಗೌಡನ ವ್ಯಕ್ತಿತ್ವವನ್ನು ಅಲ್ಲಾಡಿಸುತ್ತವೆ. "....ಆಗಿ ಹೋದುದನ್ನು ಒಪ್ಪಿಕೊಂಡು ಸರಿಪಡಿಸಿಕೊಳ್ಳುವ ನೈತಿಕ ಹೊಣೆಗಾರಿಕೆ ರಾಜನ ಹೆತ್ತವರಲ್ಲಾದರೂ ಇದ್ದೀತೇನೋ ಎಂಬ ನಿರೀಕ್ಷೆ ಹೊತ್ತು ನಾನಿಲ್ಲಿಗೆ ಬಂದೆನೇ ಹೊರತು, ನೀವು ಈಗ ತಾನೇ ಹೇಳಿದಂತೆ ಹಣಕ್ಕಾಗಿ ಅಲ್ಲ.... ನನ್ನ ನಿರೀಕ್ಷೆ ಒಂದೆಡೆ ವಿಫಲಗೊಂಡರೂ ಇನ್ನೊಂದೆಡೆ ಸಫಲಗೊಂಡಿದ್ದಕ್ಕಾಗಿ ಸಂತೋಷಪಡುತ್ತಿದ್ದೇನೆ. ನಡೆದುದನ್ನು ಒಪ್ಪಿಕೊಳ್ಳುವ ಸೌಜನ್ಯ, ಅಪರೂಪದ ಹೃದಯವಂತಿಕೆ ಈ ತಾಯಿಯಲ್ಲಿತ್ತಲ್ಲ ಅಷ್ಟೇ ಸಾಕು ನನಗೆ"(ಪು೧೩೦) ಈ ಮಾತುಗಳು ಅವಳ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತವೆ. ತನಗಾದ ಅನ್ಯಾಯಕ್ಕಾಗಿ ಆಕೆ ಯಾರನ್ನೂ ದೂರುವುದಿಲ್ಲ. ವಸುಧಳಂತೆಯೇ ಇವಳೂ ಮಗ ಮಾಡಿರುವ ತಪ್ಪನ್ನು ಅವನ ಹಿರಿಯರ ಗಮನಕ್ಕೆ ತರುತ್ತಾಳೆ. ಈ ಎರಡೂ ಕತೆಗಳಲ್ಲಿ ತಮಗೆ ಅನ್ಯಾಯವಾಯಿತೆಂದು ಆ ಹುಡುಗಿಯರು ಅಳುತ್ತ ಕೂರುವುದಿಲ್ಲ. ತಮ್ಮನ್ನು ನಂಬಿಸಿದ್ದ ಹುಡುಗರ ತಪ್ಪನ್ನು ಅವರ ಹೆತ್ತವರು ಸರಿಪಡಿಸಬಹುದೆಂಬ ನಿರೀಕ್ಷೆಯಿಂದ ಹಿರಿಯರಿಗೆ ತಿಳಿಸುತ್ತಾರೆ. ಅಲ್ಲಿ ತಂದೆ ತೀರ್ಮಾನ ಕೈಗೊಂಡರೆ ಇಲ್ಲಿ ರಾಜನ ತಾಯಿ "ಇಬ್ರೂ ಒಳೀಕ್ಕೆ ಓಗಿ ದ್ಯಾವ್ರಿಗೆ ಅಡ್ಡ ಬೀಳಿ" ಎಂದು ತನ್ನ ನಿರ್ಧಾರವನ್ನು ಪ್ರಕಟಿಸುತ್ತಾಳೆ. ಅನುಮಾನಿಸಿದ ಹುಡುಗಿಗೆ, 'ಎದರ್ಕೆ ವಿಚ್ನೆ ಯಾವ್ದೂ ಬ್ಯಾಕಿಲ್ಲ ಕಣವ್ವ, ರಾಜ ನನ್ ಮಗಾ' ಎಂದು ಹೇಳುತ್ತಾಳೆ. ಮಕ್ಕಳ ಬದುಕಿನ ಆಗುಹೋಗುಗಳ ನಿರ್ಣಯ ಬಹುಪಾಲು ತಂದೆಯದೇ ಆಗಿರುತ್ತದೆ. ಇಲ್ಲಿಯೂ ತಂದೆಯೇ ಆ ಕಾರ್ಯ ನಿರ್ವಹಿಸಿರುತ್ತಾನೆ. ಆದರೆ ದಿಢೀರನೆ ಎದುರಾಗುವ ಸನ್ನಿವೇಶದಿಂದ, ಕಣ್ಣೆದುರೇ ಹೆಣ್ಣೊಬ್ಬಳಿಗೆ ಅನ್ಯಾಯವಾಗುತ್ತಿರುವುದನ್ನು ಸಹಿಸಲು ಸಾಧ್ಯವಾಗದೆ ನಂಜಮ್ಮ ಗಂಡನನ್ನು ಎದುರಿಸಲು ಧೈರ್ಯತಾಳುತ್ತಾಳೆ. ಮಗನಿಗೆ ಸರಿದಾರಿಯಲ್ಲಿ ಸಾಗಲು ನಿರ್ದೇಶಿಸುತ್ತಾಳೆ.

ಪ್ರೀತಿಸಿದವನು ಕೈಕೊಟ್ಟಾಗ ಹುಡುಗಿಯರು ಆತ್ಮಹತ್ಯೆ ಮಾಡಿಕೊಳ್ಳುವುದೇ ಹೆಚ್ಚು. ಅನೇಕ ಸಂದರ್ಭಗಳಲ್ಲಿ ಈ ವಿಷಯ ಹುಡುಗನ ಹಿರಿಯರಿಗೆ ತಿಳಿದೇ ಇರುವುದಿಲ್ಲ. ಒಮ್ಮೆ ತಿಳಿದಿದ್ದರೂ ಹುಡುಗಿಗೆ ಬುದ್ಧಿ ಇರಬೇಕಾಗಿತ್ತು ಎಂದು ಅವಳ ಮೇಲೆ ತಪ್ಪನ್ನು ಹೊರಿಸಲಾಗುತ್ತದೆ. ಒಂದು ಹೆಣ್ಣು ಜೀವಕ್ಕೆ ಅನ್ಯಾಯವಾಯಿತೆಂದು ಭಾವಿಸುವುದು ತೀರ ವಿರಳ. ಅಂತಹ ಸನ್ನಿವೇಶದ ಎರಡು ಸಾಧ್ಯತೆಗಳನ್ನು ಮೇಲಿನೆರಡು ಕತೆಗಳು ತೆರೆದಿಡುತ್ತವೆ. ಹಿರಿಯರಿಗೆ ಇರಬೇಕಾದ ವಿವೇಚನಾಯುಕ್ತ ನಿರ್ಧಾರದ ಬಗೆಗೆ ಲೇಖಕಿ ಗಮನ ಸೆಳೆಯುತ್ತಾರೆ.

ಜಾತಿ-ವರ್ಗಗಳ ಕಾರಣದಿಂದ ಮಹಿಳೆಯ ವಿವಾಹಕ್ಕೆ ಉಂಟಾಗುವ ಅಡ್ಡಿ-ಆತಂಕಗಳು, ಅವಳ ವೈವಾಹಿಕ ಸ್ಥಿತಿ ಹಾಗೂ ಪ್ರೇಮ ಸಂಬಂಧಗಳನ್ನು ಕುರಿತಂತಿರುವ ಈ ಎಲ್ಲ ರಚನೆಗಳು ವಸ್ತು ಸ್ಥಿತಿಯನ್ನು ಚಿತ್ರಿಸಿ ಸುಮ್ಮನಾಗುವುದಿಲ್ಲ. ಆಯಾ ಸನ್ನಿವೇಶದಲ್ಲಿ ಅನ್ಯಾಯಕ್ಕೆ, ಶೋಷಣೆಗೆ ಒಳಗಾದ ಜೀವಗಳು ಪ್ರತಿಭಟಿಸಲು

ಸಾಧ್ಯವಾಗುವ ದಾರಿಯನ್ನು ಶೋಧಿಸುತ್ತವೆ; ಪರಿಹಾರ ಕಂಡುಕೊಳ್ಳಲು ಪ್ರಯತ್ನಿಸುತ್ತವೆ. ಪ್ರತಿಭಟನೆ ಒಳಗಿನಿಂದ ಬಂದಾಗ ಮಾತ್ರ ನ್ಯಾಯದೊರಕಿಸಿಕೊಳ್ಳಲು, ಹಕ್ಕನ್ನು ಸ್ಥಾಪಿಸಲು ಸಾಧ್ಯವಾಗುತ್ತದೆ ಎನ್ನುವುದು ಇವುಗಳ ನಂಬಿಕೆಯಾಗಿದೆ. ಇಂತಹ ಹೋರಾಟಕ್ಕೆ ಮಹಿಳೆಯಲ್ಲಿ ಧೈರ್ಯ, ಆತ್ಮವಿಶ್ವಾಸ, ದೃಢತೆ ಇರಬೇಕಾಗುತ್ತದೆ ಎನ್ನುವುದಕ್ಕೆ ಲೇಖಕಿಯರು ಒತ್ತು ನೀಡಿದ್ದಾರೆ. ತನಗೆ ಬೇಕಾದುದನ್ನು ಪಡೆಯಲು ಮಹಿಳೆ ಯಾರ ಮುಂದೂ ಕೈಚಾಚದೆ ತಾನೇ ಹೋರಾಡಿ ಪಡೆದುಕೊಳ್ಳಬೇಕೆನ್ನುವ ನಿಲುಮೆ ಇಲ್ಲಿ ವ್ಯಕ್ತವಾಗಿದೆ. ಬದಲಾಗುತ್ತಿರುವ ಮಹಿಳೆಯ ಆಲೋಚನಾ ಕ್ರಮವನ್ನು ದಾಖಲಿಸುವ ಕೆಲಸವನ್ನಷ್ಟೇ ಅಲ್ಲ, ಅವಳ ಮುಂದಿನ ದಾರಿಯ ಬಗೆಗೆ ಕೆಲವು ಹೊಳಹುಗಳನ್ನು ನೀಡುವ ಕಾರ್ಯವನ್ನೂ ಇವು ಮಾಡಿವೆ.

# ಊರ ಹೊರಗೊಂದು ದೇವೇಂದ್ರ ಮರಹುಟ್ಟಿ...

ವನಮಾಲಾ ಕಟ್ಟೀಗೌಡರ

'ಬೆಳವಣಿಗೆ' ಮನುಷ್ಯರಲ್ಲಿ ನಡೆಯುವ ಒಂದು ನಿರಂತರ ಪ್ರಕ್ರಿಯೆ. ಮನುಷ್ಯನ ದೈಹಿಕ ಬೆಳವಣಿಗೆ ಒಂದು ಹಂತಕ್ಕೆ ಬಂದಾದ ಮೇಲೆ ನಿಂತು ಹೋದರೂ ಆತನ ಮಾನಸಿಕ, ಬೌದ್ಧಿಕ, ವ್ಯಕ್ತಿತ್ವದ ಬೆಳವಣಿಗೆಯ ಸಾಧ್ಯತೆ ಬದುಕಿನ ಕೊನೆಯವರೆಗೂ ನಿರಂತರವಾಗಿರುತ್ತದೆ. ಆದರೆ ಇಲ್ಲಿ ಬೆಳವಣಿಗೆಗೆ 'ಪೂರಕ'ವಾದ ಅಂಶಗಳು ಸಾಂಸ್ಥೀಕರಣಗೊಳ್ಳುವುದರ ಮೂಲಕ ತರತಮದಿಂದ ಕೂಡಿದ್ದು ಮಹಿಳೆಗೆ ಈ 'ಸಂಸ್ಥೆ'ಯಲ್ಲಿ ಅವಕಾಶಗಳನ್ನು ಮೊಟಕುಗೊಳಿಸಲಾಗಿದೆ. ಅದಕ್ಕಾಗಿ ಪುರುಷ ಪ್ರಧಾನ ಸಮಾಜ ವ್ಯವಸ್ಥೆ ತನ್ನದೇ ಆದ ಕಾರಣಗಳನ್ನು ನೀಡಿ ಅವುಗಳನ್ನು ಸಮರ್ಥಿಸಿಕೊಂಡಿದೆ ಕೂಡ! ಆದರೆ ಈ 'ನೇಮಿತ' ಅವಕಾಶಗಳನ್ನು ಮೀರಿ ಅವಳು ಬೆಳೆಯುತ್ತಿರುವ ಪರಿಮಾತ್ರ ದಿಗ್ಭ್ರಮೆ ಹುಟ್ಟಿಸುವಂತಿದೆ! ಅವಳ ಚೇತನ ಹತ್ತಿಕ್ಕಿದಷ್ಟೂ ಪುಟಿದೇಳುವ ಚೈತನ್ಯದ ಚೆಲುಮೆಯೇ ಸರಿ! ಈ ಸಂಗತಿಗಳನ್ನು ವಿಶದಪಡಿಸುವ ಜಾನಪದ ಗೀತೆಯೇ ಈ ಕೆಳಗಿನ 'ನೀರ' ಪದ.

ಈ ಗೀತೆಯನ್ನು ನಾನು ಚಿಕ್ಕವಳಿದ್ದಾಗ ಅದೆಷ್ಟೋ ಬಾರಿ ಕೇಳಿದ್ದೇನೆ. ಇದೊಂದು ಹತ್ತು ನುಡಿಗಳ 'ಕಥನ ಗೀತ'ವಾಗಿದ್ದು ಇದನ್ನು ಹೆಚ್ಚಾಗಿ ಧಾರವಾಡ, ಗದುಗಿನ ಪರಿಸರದಲ್ಲಿ ಹಾಡುತ್ತಾರೆ. ಉತ್ತರ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಈ ಹಾಡು ಪ್ರಚಲಿತವಿರಬಹುದಾದರೂ ಸದ್ಯ ಇದನ್ನು ಸಂಗ್ರಹಿಸಿದ್ದು ಗದಗ್ ಬಳಿಯ ಬೆಟಗೇರಿಯಲ್ಲಿ. ಪ್ರಸ್ತುತ ಹಾಡಿನ ಪೂರ್ತಿ ಪಾಠ ಇಂತಿದೆ.

ಊರ ಹೊರಗೊಂದು ದೇವೇಂದ್ರ ಮರ ಹುಟ್ಟಿ
ಮರದ ತಳಗ ತಿಳಿನೀರ ಜಲಧಿ
ಸೌಭಾಗ್ಯದ ನುಡಿಯss

ನಾ ನೀರ ತರುವಾಗ ಅಲ್ಲೊಬ್ಬ ಪುರುಷನು
ರಂಭಿ ನಿನ್ನ ಕೊಡವ ಎತ್ತಲೇನಂದಾ
ಸೌಭಾಗ್ಯದ ನುಡಿಯss

ನನ್ನ ಕೂಡ ಎತ್ತಲು ನಿನ್ಯಾವ ಪುರುಷನು
ನಿನ್ನಂತ ಪುರುಷರ್ನ ಮನಿಯಾಗ ಜಡದಿನಿ
ಸೌಭಾಗ್ಯದ ನುಡಿಯSS

ನನ್ನಂತ ಪುರುಷರನು ಮನಿಯಾಗ ಜಡದರು
ರಂಭಾ ನಿನ್ನ ಸೆರಗ ಬಿಡಲಾರೆನಂದ
ಸೌಭಾಗ್ಯದ ನುಡಿಯSS

ಕೂಸು ಅಳತೈತಿ ಬಾಳತ್ತು ಆಗೈತಿ
ಇಷ್ಟೊಂದು ತಡವು ಯಾಕವ್ವ ಸೊಸಿಯ
ಸೌಭಾಗ್ಯದ ನುಡಿಯSS

ಬಾವಿ ನೀರು ಕೆಂಪಗ, ಕೆರಿ ನೀರು ಕರ್‍ರಗ
ವರತಿಯ ನೀರಿಗೆ ಹೋಗಿದ್ದೆನತ್ತಿ
ಸೌಭಾಗ್ಯದ ನುಡಿಯSS

ಕೂದಲು ಮಾಸ್ಯಾವ ನಿರಿಗಿ ತೊಡಕ್ಯಾವ
ಇಷ್ಟೊಂದು ತಡವು ಯಾಕವ್ವ ಸೊಸಿಯ
ಸೌಭಾಗ್ಯದ ನುಡಿಯSS

ನಾ ಬರು ಹಾದ್ಯಾಗ ಕಾರಿ ಮುಳ್ಳು ಕಂಟಿ ಮುಳ್ಳು
ಅದರ ಒಳಗ ನೆಗೆಬಿದ್ದೆನತ್ತಿ
ಸೌಭಾಗ್ಯದ ನುಡಿಯSS

ನಾ ನಿನ್ನ ತರುವಾಗ ನಿನೆಷ್ಟು ಚಿಕ್ಕವಳಿದ್ದಿ
ಇಷ್ಟೊಂದ ಮಾತ ಎಲ್ಲಿಂದ ಕಲ್ತೆ ಸೊಸಿಯ
ಸೌಭಾಗ್ಯದ ನುಡಿಯSS

ಹಾಕಿದ ಆ ಬಳ್ಳಿ ಹಾಕಿದಂಗ ಇರುವುದ?
ದಿನಕೊಂದು ಚೋಟ ಚಿಗುರುವುದತ್ತಿ
ಸೌಭಾಗ್ಯದ ನುಡಿಯSS

ಈ ಗೀತೆಯಲ್ಲಿ ಹೆಣ್ಣೊಬ್ಬಳು ನೀರು ತರಲು ಹೋದ ದೃಶ್ಯವಿದೆ. ಹಾಗೆ ನೀರು ತರಲು ಹೋದ ಅವಳನ್ನು ರಸಿಕ ಮಹಾಶಯನೊಬ್ಬ 'ಕೊಡ ಎತ್ತಲೆ?' ಎಂದು ಸಹಾಯ ಮಾಡುವ ನೆಪದಲ್ಲಿ ಕೆಣಕುತ್ತಾನೆ. ಅವಳು ಅದನ್ನು ಖಂಡಿಸಿ ನೀರು ಹೊತ್ತು ಮನೆಗೆ ಬರುತ್ತಾಳೆ. ಆದರೆ ಅಲ್ಲಿ ಅವಳತ್ತೆಯ ಪರಿ ಪರಿಯಾದ ಪ್ರಶ್ನೆಗಳಿಗೆ ಉತ್ತರಿಸಬೇಕಾಗಿ

ಬಂದರೂ ಧೃಡತೆಯಿಂದ ಎಲ್ಲ ಪ್ರಶ್ನೆಗಳನ್ನು ಎದುರಿಸಿ ಕೊನೆಯ ಉತ್ತರವಾಗಿ ತನ್ನ 'ಬೆಳವಣಿಗೆ'ಯ ಸಾಧ್ಯತೆಯನ್ನು 'ದಿನಕೊಂದು ಚೋಟ ಚಿಗುರು'ವುದರ ಮೂಲಕ ಮಾರ್ಮಿಕವಾಗಿ ಕಟ್ಟಿಕೊಡುತ್ತಾಳೆ. ಇದಿಷ್ಟು ಮೇಲ್ನೋಟಕ್ಕೆ ಕಾಣಬಹುದಾದ ಈ ಕವಿತೆಯ ಸಾರಾಂಶವಾದರೂ ಈ ಕವಿತೆ ಈ ಸಾರಾಂಶದಷ್ಟು ಸರಳವಾಗಿಲ್ಲ. ಈ ಕವಿತೆಯ ತುಂಬ 'ಪ್ರತಿಮೆ', 'ಸಂಕೇತ'ಗಳು ತುಂಬಿಕೊಂಡು ಅವುಗಳ ಮೂಲಕ ಆ ಹೆಣ್ಣಿನ ಒಳತೋಟಿಗಳನ್ನು ಅಭಿವ್ಯಕ್ತಿಸುತ್ತವೆ. ಮೊದಲು ಈ ಗೀತೆಯನ್ನು ಯಾವುದೋ ಅನಾಮಧೇಯ ಜಾನಪದ 'ಪಾಮರಿ' ಬರೆದ ಗೀತೆಯೆಂದು ಅಸಡ್ಡೆ ಮಾಡದೇ ಸೂಕ್ಷ್ಮವಾಗಿ ಪರಿಶೀಲಿಸಬೇಕು.

ಈ ಗೀತೆಯು ಮೊಟ್ಟಮೊದಲು 'ಊರ ಹೊರಗಿನ ದೇವೇಂದ್ರ ಮರದಿಂದ' ಪ್ರಾರಂಭವಾಗುತ್ತದೆ. ಈ ದೇವೇಂದ್ರ ಮರದ ಕೆಳಗೆ ಒಂದು ತಿಳಿನೀರ ಜಲಧಿ. ಅಲ್ಲಿ ನೀರು ತುಂಬಲು ಬರುವ ಹೆಂಗಸನ್ನು 'ರಂಭೆ' ಎಂದು ಕೆಣಕುವ ಒಬ್ಬ ಪುರುಷ. ಪೌರಾಣಿಕ ಆಕರದಿಂದ ಪ್ರತಿಮೆಯೊಂದನ್ನು ಹೆಕ್ಕಿ ಕಾವ್ಯಕಟ್ಟುವ ಈ ಜಾನಪದ ಕವಿಯಿತ್ರಿಯ ಉದ್ದೇಶವೇನಿರಬಹುದು? ದೇವೇಂದ್ರ ಎಲ್ಲರಿಗೂ ತಿಳಿದ ಹಾಗೆ ದೇವಲೋಕದ ಅಧಿಪತಿ. ಅಂಕೆಯಿಲ್ಲದ ಕಾಮಕ್ಕೆ ಹೆಸರಾದವ. ಸುಂದರ ಹೆಣ್ಣು ಕಂಡರೆ ಮಾರುವೇಷದಿಂದಾದರೂ(ಅಹಲ್ಯೆಯ ಪ್ರಸಂಗ) ಹೋಗಿ ಅವಳೊಂದಿಗೆ ಸುಖಿಸಿ ಬರುವ ಭೂಪ! ಇಲ್ಲಿ ದೇವೇಂದ್ರ ಮರದ ಪ್ರತಿಮೆ ಅಂಕೆಯಿಲ್ಲದ ಕಾಮದ ಬಯಕೆಗಳಿಗೆ ಪ್ರತೀಕವಾದರೆ ಅದರ ಕೆಳಗಿರುವ 'ತಿಳಿನೀರ ಜಲ' 'ನಿಷ್ಕಲ್ಮಶ ಪ್ರೀತಿ' ಹಾಗೂ 'ಸೃಜನಶೀಲ ಮನೋಭಾವನೆ'ಗೆ ಪ್ರತೀಕವಾದಂತಿದೆ. ಹೆಸರೇ ತಿಳಿಸುವಂತೆ 'ತಿಳಿನೀರು' ಅಂದರೆ 'ಸ್ವಚ್ಛವಾದ ನೀರು'.

ಈ ತಿಳಿನೀರನ್ನು ತುಂಬಲು ಬರುವ ಹೆಣ್ಣೊಬ್ಬಳನ್ನು ಆ ದೇವೇಂದ್ರ ಮರದ ಬಳಿ ಒಬ್ಬ ಪುರುಷ ದೇವೇಂದ್ರನ ಧಾಟಿಯಲ್ಲಿಯೇ 'ರಂಭೆ ನಿನ್ನ ಕೊಡ ಎತ್ತಲೆ?' ಎಂದು ಕೆಣಕುತ್ತಾನೆ. ಅವನ ಮಾತಿಗೆ ಆ ಹೆಣ್ಣು 'ನನ್ನ ಕೊಡ ಎತ್ತಲು ನೀನ್ಯಾವ ಪುರುಷನು? ನಿನ್ನಂಥ ಪುರುಷರ್ನ ಮನಿಯಾಗ ಜಡದಿನಿ' ಎಂದು ಉಗಿಯುತ್ತಾಳೆ. ಅಂದರೆ ಇಲ್ಲಿ ಅವಳ ಮನೆಯ ಪುರುಷನೂ(ಗಂಡ) ಈತನ ಹಾಗೇ ಒಬ್ಬ 'ಕಡಿವಾಣವಿಲ್ಲದ ಕುದುರೆ!' ಆದರೆ ಅವಳು ಆತನನ್ನು ಮನೆಯಲ್ಲಿ ಸಮರ್ಥವಾಗಿ ಜಡಿದಿದ್ದಾಳೆ! ಇಷ್ಟು ಹೇಳಿದರೂ ಆ ಭಂಡ ಗಂಡು ಅವಳನ್ನು ಬಿಡಲೊಲ್ಲ! ಅತನನ್ನು ಎದುರಿಸಿ ಅವಳು ನೀರು ಹೊತ್ತು ಮನೆಗೆ ಬಂದಾಗ ಅಲ್ಲಿ ಅವಳಿಗೆ ಇನ್ನೊಂದು 'ಅಗ್ನಿ ಪರೀಕ್ಷೆ' ಕಾದಿರುತ್ತದೆ. ಅವಳ ಅತ್ತೆ ಅವಳಿಗೆ 'ಇಷ್ಟು ತಡಯಾಕೆ?' ಎಂದು ಕೇಳುತ್ತಾಳೆ. ಆಗ ಅವಳು 'ಬಾವಿನೀರು ಕೆಂಪಗ, ಕೆರಿ ನೀರು ಕರ್‍ರಗ, ಒರತೆ ನೀರಿಗೆ ಹೋಗಿದ್ದೆನತ್ತಿ' ಎನ್ನುತ್ತಾಳೆ. ಇಲ್ಲಿ 'ಬಾವಿ', 'ಕೆರೆ' ಎರಡೂ ಸಾಂಸ್ಥಿಕರಣವನ್ನು ಪ್ರತಿನಿಧಿಸುತ್ತಿರಬಹುದು. 'ಒರತೆ ನೀರು' ಸೃಜನಾತ್ಮಕ

ಮನಸ್ಸು, ಹಾಗೂ ನಿರ್ಮಲ ಪ್ರೀತಿಯನ್ನು ಪ್ರತಿನಿಧಿಸುತ್ತಿರಬಹುದು. ಮುಂದೆ ಅವಳತ್ತೆ ಅದಕ್ಕೂ ಸಮಾಧಾನಿಸದೇ 'ಕೂದಲು ಮಾಸ್ಯಾವ ನಿರಿಗೆ ತೊಡಕ್ಯಾವ ಎಂದು ಸಂಶಯಾತ್ಮಕವಾಗಿ ಕೇಳಿದಾಗ 'ನಾಬರೂ ಹಾದ್ಯಾಗ ಕಾರಿಮುಳ್ಳು ಕಂಟಿಮುಳ್ಳು ಅದರ ಒಳಗೆ ನೆಗೆಬಿದ್ದೆನತ್ತಿ' ಎಂದು ತುಂಬ ಸಾಂಕೇತಿಕವಾಗಿ ತಿಳಿಸುತ್ತಾಳೆ. ಅವಳ ಸೃಜನಾತ್ಮಕ ಹಾದಿಯಲ್ಲಿ ಎಷ್ಟೊಂದು ಕಲ್ಲು ಮುಳ್ಳುಗಳು! ಸಾಂಸ್ಥೀಕರಣಗೊಂಡ ಒಂದು ವ್ಯವಸ್ಥೆಯಲ್ಲಿ 'ಸಿದ್ಧಮಾದರಿ'ಗಳೊಂದಿಗೆ ಗುದ್ದಾಡುತ್ತ ಬದುಕುವವರೆಗೂ ಅವಳು ಒಂದು ಬಗೆಯಲ್ಲಿ ಕ್ಷೇಮವೇ! ಆ ಸಿದ್ಧ ಮಾದರಿಗಳ ಏಕಮೌನತೆಯಿಂದ ಬೇಸತ್ತು ಬೇರೊಂದು 'ಸೃಜನ' ಮಾರ್ಗ ತುಳಿದಾಗ ಆ ಮಾರ್ಗದಲ್ಲಿ ಪುರುಷ, ಸ್ತ್ರೀ ಎಂಬ ಭೇದ ಭಾವವಿಲ್ಲದೇ ಎಲ್ಲರೂ ಅವಳಿಗೆ ಅಡೆ ತಡೆಗಳೇ! ಹೆಣ್ಣಿನ ಬೌದ್ಧಿಕ, ದೈಹಿಕ ಸ್ವಾಧೀನತೆಗಾಗಿ ಅವಳನ್ನು ಚಿಕ್ಕಂದಿನಲ್ಲಿಯೇ 'ಮದುವೆ'ಯೆಂಬ 'ವ್ಯವಸ್ಥೆ'ಗೆ ತಳ್ಳಿ(ನಾ ನಿನ್ನ ತರುವಾಗ ನಿನೆಷ್ಟು ಚಿಕ್ಕವಳಿದ್ದಿ!) ಆ ವ್ಯವಸ್ಥೆಯ ಪರಿಧಿಯಲ್ಲಿಯೇ ಅವಳ ಬುದ್ಧಿಭಾವಗಳನ್ನು ಕಟ್ಟಿಹಾಕಲಾಗುತ್ತಿದೆಯಾದರೂ ಅವಳ ಅದಮ್ಯ ಸೃಜನಶೀಲ ಮನೋಭಾವ ಆ ಪರಿಧಿಯನ್ನು ದಾಟಿ ಊರ ಹೊರಗಿನ ತಿಳಿನೀರ ಜಲಧಿಯನ್ನು ಹೊತ್ತು ತರುವ ಸಾಹಸಕ್ಕೆ ಕೈಹಾಕಿ ಅದರಲ್ಲಿ ಯಶಸ್ವಿಯಾಗುತ್ತದೆ ಮತ್ತು ಮುಂದೆ ಸಹ ಈ ಸಾಧ್ಯತೆಯನ್ನು ನಿರಂತರವಾಗಿಸುವ ಆತ್ಮವಿಶ್ವಾಸವನ್ನು ತೋರುತ್ತದೆ. 'ನಾ ನಿನ್ನ ತರುವಾಗ ನೀನೆಷ್ಟು ಚಿಕ್ಕವಳಿದ್ದಿ ಇಷ್ಟೊಂದ ಮಾತ ಎಲ್ಲಿಂದ ಕಲ್ತೆ ಸೊಸಿಯ' ಎಂದ ತನ್ನ ಅತ್ತೆಯ ಪ್ರಶ್ನೆಗೆ 'ಹಾಕಿದ ಆ ಬಳ್ಳಿ ಹಾಕಿದಂಗ ಇರುವುದ, ದಿನಕೊಂದು ಚೋಟ ಚಿಗುರುವುದತ್ತಿ' ಎಂದು ಅವಳು ಉತ್ತರಿಸುವ ಪರಿ ಇದೇ ಆಗಿದೆ.

ಮಾನವ ಕುಲದಲ್ಲಿ ಹೆಣ್ಣಿಗೆ ಅದೂ ಬರೀ ದೈಹಿಕ ರಚನೆಯಿಂದ ಮಾತ್ರ ತುಸು ವಿಭಿನ್ನವಾದ ಮಾತ್ರಕ್ಕೆ ಅನೇಕ ನೆಪಗಳನ್ನು ಒಡ್ಡಿ ಒಂದು ವ್ಯವಸ್ಥೆಯಡಿ ಕಟ್ಟಿಹಾಕುವ ಮೂಲಕ ಅವಳನ್ನು ಸಮಾಜದ ಅತೀ ಚಿಕ್ಕ ಘಟಕವಾದ ಕುಟುಂಬದಡಿ ನಿಯಂತ್ರಿಸಲಾಗಿದೆ. ಮುಖ್ಯವಾಗಿ ಅವಳನ್ನು 'ಕಾಮದ ಗೊಂಬೆ'ಯಂತೆ ಕಾಣಲಾಗಿದೆ. ಆದರೆ ಈ ಎಲ್ಲಾ ನಿಯಂತ್ರಣಗಳನ್ನು ಮೀರಿ ಅವಳು ತನ್ನ ಸೃಜನಾತ್ಮಕ ಪ್ರಕ್ರಿಯೆಯಿಂದ ಪ್ರೇಮ ಮಾರ್ಗದ ಮೂಲಕ ಬೆಳೆಯಲೆತ್ನಿಸುತ್ತಾಳೆ. ಈ ಬೆಳವಣಿಗೆಯ ಹಾದಿಯಲ್ಲಿ ಅವಳಿಗೆ ಅನೇಕ ತಡೆಗಳಿದ್ದರೂ, ಆ ಅಡೆತಡೆಗಳು ಅವಳಿಗೆ ದೈಹಿಕ, ಮಾನಸಿಕ ಹಿಂಸೆಯನ್ನು ತಂದೊಡ್ಡಿದರೂ ಅವಳು ಅವುಗಳನ್ನೆಲ್ಲಾ ದಿಟ್ಟವಾಗಿ ಎದುರಿಸಿ ನೆಲದ ಸಾರವನ್ನು ಹೀರಿಕೊಂಡು ಮುಗಿಲಿಗೆ ಮುಖ ಮಾಡಿ ದಿನದಿನಕ್ಕೆ ಚಿಗುರುವ ಬಳ್ಳಿಯೋಪಾದಿಯಲ್ಲಿ ಬೆಳೆಯುವ ಪ್ರಯತ್ನದಲ್ಲಿರುತ್ತಾಳೆ. ಒಟ್ಟಿನಲ್ಲಿ ಈ ಕಥನ ಗೀತೆ ಪ್ರೇಮ-ಕಾಮಗಳ ನಡುವಿನ ಸಂಘರ್ಷದ ಕಥನವಾಗಿದ್ದು ಕೊನೆಗೆ ಆ ಸಂಘರ್ಷದಲ್ಲಿ ಪ್ರೇಮವೇ ಗೆಲ್ಲುವ ಪರಿಯನ್ನು ನಮಗೆ ತಿಳಿಸಿಕೊಡುತ್ತದೆ.

'ಅಕ್ಷರ' ವಿದ್ಯೆಯಿಂದ ವಂಚಿತಳಾದ ಒಬ್ಬ ಅನಾಮಿಕ ಜನಪದ ಕವಯಿತ್ರಿ ತನ್ನ ಅನುಭವ, ಬುದ್ಧಿ, ಭಾವಗಳನ್ನು ಹುರಿಗೊಳಿಸಿ ಕಟ್ಟಿರಬಹುದಾದ ಈ ಬಗೆಯ 'ಕವನ'ಗಳ 'ಸೂಕ್ಷ್ಮ' ಶರೀರಗಳಿಗೆ ಅನೇಕ ಆಯಾಮಗಳವೆ. ಆದರೆ ಆ ಆಯಾಮಗಳ ಪರಿಶೀಲನೆಗೆ ಸಹೃದಯರು ಸ್ಪಂದಿಸುವುದು ಮಾತ್ರ ಯಾಕೋ ಕಡಿಮೆಯೆಂದೇ ಹೇಳಬೇಕಾಗಿದೆ. ಸಹೃದಯ ಇತ್ತ ಗಮನ ಹರಿಸಿದಲ್ಲಿ ಅಕ್ಷರ ವಂಚಿತ ಮಹಿಳೆಯರ ಪ್ರತಿಭೆಯೊಂದಿಗೆ ಅವರ ಮನಸ್ಸಿನ ಅನೇಕ ಒಳನೋಟಗಳು ತೆರೆದುಕೊಳ್ಳುವ ಸಾಧ್ಯತೆಯಿದೆ. ಈ ನಿಟ್ಟಿನಲ್ಲಿ ಸಹೃದಯರು ಇತ್ತ ಗಮನ ಹರಸಿಯಾರೆ?

# ಸಾಹಿತ್ಯದ ಒಂದು ಚಳವಳಿಯಾಗಿ ಸ್ತ್ರೀವಾದ

ಕೊಡ್ಲುಮನೆ ಕೆ.ಎಂ. ವಿಜಯಲಕ್ಷ್ಮಿ

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಈ ವರೆಗೂ ನವೋದಯ, ಪ್ರಗತಿಶೀಲ, ನವ್ಯ ಮತ್ತು ದಲಿತ-ಬಂಡಾಯ ಚಳವಳಿಗಳನ್ನು ಮಾತ್ರ ಕನ್ನಡ ಸಾಹಿತ್ಯ ಚರಿತ್ರೆಯ ನಾಲ್ಕು ಕಾಲಘಟ್ಟಗಳಾಗಿ ಪರಿಗಣಿಸಲಾಗಿದೆ. ಇದಕ್ಕೆ ಉದಾಹರಣೆಯಾಗಿ ಮುಖ್ಯವಾದ ಒಂದೆರಡು ಪುಸ್ತಕಗಳನ್ನು ಇಲ್ಲಿ ಹೆಸರಿಸಿದ್ದೇನೆ. ಕನ್ನಡ ಸಾಹಿತ್ಯ ಅಕಾಡೆಮಿಯಿಂದ ೧೯೯೦ರಲ್ಲಿ ಪ್ರಕಟವಾದ 'ಭಾರತೀಯ ಸಾಹಿತ್ಯ ಸಮೀಕ್ಷೆ'ಯಲ್ಲಿರುವ 'ಕನ್ನಡ ಸಾಹಿತ್ಯ ಚಳವಳಿಗಳು', ಎಂಬ ಲೇಖನದಲ್ಲಿ, ಪ್ರಗತಿಶೀಲ, ನವ್ಯದ ನಂತರ ಎಪ್ಪತ್ತರ ದಶಕದ ದಲಿತ, ಬಂಡಾಯ, ಶೂದ್ರ ಗುಂಪುಗಳ ಬಗ್ಗೆ ಪ್ರಸ್ತಾಪಿಸಿ ಲೇಖನವನ್ನು ಕೊನೆಗೊಳಿಸಲಾಗಿದೆ. "ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ" ಎಂಬ ಗ್ರಂಥದಲ್ಲಿ, ಕಾವ್ಯ, ಕಾದಂಬರಿ, ಸಣ್ಣ ಕತೆ, ಇತ್ಯಾದಿ ಎಲ್ಲ ಪ್ರಕಾರಗಳ ಕೃತಿಗಳನ್ನೂ ನವೋದಯ, ಪ್ರಗತಿಶೀಲ, ನವ್ಯ, ದಲಿತ ಬಂಡಾಯದ ಹಿನ್ನೆಲೆಯಲ್ಲಿ ವಿಮರ್ಶೆಗೊಳಪಡಿಸಿದ ಲೇಖನಗಳಿವೆ. ಆದರೆ ಸ್ತ್ರೀವಾದಿ ಹಿನ್ನೆಲೆಯ ಸಾಹಿತ್ಯ ವಿಮರ್ಶೆಗಳಿಲ್ಲ. ಪ್ರಸ್ತಾಪನೆಯಲ್ಲೂ ಸ್ತ್ರೀವಾದಿ ಸಾಹಿತ್ಯದ ಹೆಸರಿಲ್ಲ. ೧೯೯೬ರಲ್ಲಿ ಪ್ರಕಟಗೊಂಡಿರುವ ಡಾ.ಎಸ್ .ಎಂ.ಹಿರೇಮಠರವರ "ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟಗಳು", ಎಂಬ ಸಾಹಿತ್ಯ ಚರಿತ್ರೆಯ ಪುಸ್ತಕದಲ್ಲೂ, ನವ್ಯದ ನಂತರ ದಲಿತ ಬಂಡಾಯ ಘಟ್ಟವೇ ಕೊನೆಯದಾಗಿದೆ. ಕೆಲವರ ಪ್ರಕಾರ, ಸ್ತ್ರೀ-ಸಂವೇದನೆ, ಮುಸ್ಲಿಂ ಸಂವೇದನೆಗಳು ದಲಿತ ಬಂಡಾಯ ಚಳವಳಿಯ ಎರಡು ಆಯಾಮಗಳಾಗಿ ಪರಿಗಣಿಸಲಾಗಿದೆ. ಸಾಹಿತ್ಯಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ, ಸ್ತ್ರೀವಾದದ ಬಗ್ಗೆ, ಸ್ತ್ರೀ ಸಂವೇದನೆಯ ಕೃತಿಗಳ ಬಗ್ಗೆ, ಪ್ರತ್ಯೇಕ ಲೇಖನಗಳು ಇರುತ್ತವೆಯಾದರೂ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಗ್ಯಾಸೆಟಿಯರುಗಳಲ್ಲಿ, ಸ್ತ್ರೀವಾದಿ ಚಳವಳಿಯ ಬಗ್ಗೆ ಪ್ರಸ್ತಾಪ ಇರುವುದಿಲ್ಲ. ಮತ್ತು ಪ್ರಜಾವಾಣಿ ದಿನಪತ್ರಿಕೆಯ ಸಾಹಿತ್ಯ-ಸಂವಾದದ ಅಂಕಣದಲ್ಲಿಯೂ ಈಗಾಗಲೇ ಬಂದ ಲೇಖನಗಳಲ್ಲಿ, (ದಿ.೧೫.೭.೨೦೧ ಇತ್ಯಾದಿ) ಈ ಚಳವಳಿಯ ಬಗ್ಗೆ ಉಲ್ಲೇಖಿಸದೇ ಇರುವುದನ್ನು ಗಮನಿಸಬಹುದು. ರೂಢಮೂಲ ನೈತಿಕತೆಯ ವಿರುದ್ಧ ಬಂಡಾಯವೆದ್ದು ಸಾಮಾಜಿಕ ನ್ಯಾಯದ ಆಧಾರದ ಮೇಲೆ ಕೃತಿಗಳನ್ನು ರಚಿಸತೊಡಗಿದ ಪ್ರಗತಿಶೀಲ ಚಳವಳಿ, ಕೇವಲ ಆರೆಂಟು

ವರ್ಷಗಳಷ್ಟೇ ಚಾಲನೆಯಲ್ಲಿದ್ದರೂ, ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅದೊಂದು ಕಾಲಘಟ್ಟವಾಗಿ, ಚಳವಳಿಯಾಗಿ ಗುರುತಿಸಲ್ಪಡುತ್ತಿದೆ. ಆದರೆ ಎರಡು ದಶಕಗಳಿಗಿಂತಲೂ ಹೆಚ್ಚು ಕಾಲದಿಂದ ನಡೆದು ಬರುತ್ತಿರುವ, ಯಶಸ್ವೀ ಚಳವಳಿಯಾದ ಸ್ತ್ರೀವಾದ ಮಾತ್ರ, ಸಾಹಿತ್ಯ ಚರಿತ್ರೆಯ ಒಂದು ಚಳವಳಿಯಾಗಿ ಯಾಕೆ ಉಲ್ಲೇಖಿಸಲ್ಪಡುವುದಿಲ್ಲ? ಸ್ತ್ರೀ ಸಾಹಿತ್ಯವೇ ಪ್ರತ್ಯೇಕ ಎನ್ನುವುದಾದರೆ, ಕನ್ನಡ ಸಾಹಿತ್ಯ ಚರಿತ್ರೆಯೇ ಅಪೂರ್ಣ ಹಾಗೂ ಪಕ್ಷಪಾತಿ ಎಂದಾಗುವುದಿಲ್ಲವೇ? ಕನ್ನಡ ಸಾಹಿತ್ಯ ಚರಿತ್ರೆಯನ್ನು ಬರೆಯುವವರು, ಸ್ತ್ರೀವಾದವನ್ನೂ ಸಾಹಿತ್ಯದ ಒಂದು ಚಳವಳಿಯಾಗಿ, ಒಂದು ಕಾಲಘಟ್ಟವಾಗಿ ಗುರುತಿಸಬೇಕಾದ ಅಗತ್ಯವಿದೆ ಎಂಬ ಅನಿಸಿಕೆಗೆ ಆಧಾರವಾಗಿ ಕೆಲವು ಅಂಶಗಳನ್ನು ಇಲ್ಲಿ ಗಮನಕ್ಕೆ ತರಲಾಗಿದೆ.

ಸಂಪ್ರದಾಯ, ರೂಢಿ, ಮೂಢನಂಬಿಕೆಗಳು, ಇವುಗಳ ಹೊದಿಕೆಯ ಅಡಿಯಲ್ಲೇ ಪ್ರಪಂಚವನ್ನು ನೋಡುತ್ತಿದ್ದ ಮಹಿಳೆಯರಿಗೆ, ಆ ಹೊದಿಕೆಯನ್ನು ಕಳಚಿ ಹೊಸದೊಂದು ದೃಷ್ಟಿಯಲ್ಲಿ ಜಗತ್ತನ್ನು ನೋಡುವ ದಾರಿಯೊಂದರ ಬಗ್ಗೆ, ತಮ್ಮ ಸಾಹಿತ್ಯ ಕೃತಿಗಳಲ್ಲಿ ಅರಿವು ಮೂಡಿಸಿಕೊಟ್ಟ ಮಹಿಳೆಯರು, ಹನ್ನೆರಡನೇ ಶತಮಾನದಿಂದಲೇ ಸಿಗುತ್ತಾರೆ. ಮಾನವೀಯ ನೆಲೆಯ ಮೇಲೆ ಕೃತಿ ರಚಿಸಿದ ಅಕ್ಕ ಮಹಾದೇವಿ ಮತ್ತು ಇತರ ಕೆಲವು ವಚನಕಾರ್ತಿಯರು, ನಂಜನಗೂಡು ತಿರುಮಲಾಂಬಾ, ಆರ್.ಕಲ್ಯಾಣಮ್ಮ, ಶ್ಯಾಮಲಾದೇವಿ, ಕೊಡಗಿನ ಗೌರಮ್ಮ, ಬೆಳಗೆರೆ ಜಾನಕಮ್ಮ, ಸರಸ್ವತಿಬಾಯಿ ರಾಜವಾಡೆ, ಎಚ್.ವಿ. ಸಾವಿತ್ರಮ್ಮ, ಮುಂತಾದ ಲೇಖಕಿಯರ ಪರಂಪರೆಯೇ ಇದೆಯಾದರೂ, 'ಸ್ತ್ರೀವಾದ, ಎಂಬುದು ಚಳವಳಿಯಾಗಿ ರೂಪುಗೊಂಡಿದ್ದು, ಒಂದು ಸಾಮೂಹಿಕ ಕ್ಷೋಭೆಯಾದದ್ದು ೧೯೭೫ರ ನಂತರ, ಸ್ತ್ರೀವಾದಿ ಪ್ರಜ್ಞೆ ಅರಳಿದ್ದು, ಸ್ತ್ರೀವಾದಿಗಳ ಗುಂಪು ದೊಡ್ಡದಾಗಿ ಬೆಳೆಯತೊಡಗಿದ್ದು, ಎಂಭತ್ತರ ದಶಕದಲ್ಲಿ ಎನ್ನಬಹುದು.

**ಸ್ತ್ರೀವಾದದ ಅರ್ಥ :** ಸ್ತ್ರೀವಾದದ ಅರ್ಥ, ಕಾಲ, ದೇಶಗಳಿಗೆ ತಕ್ಕಂತೆ ಬೇರೆ ಬೇರೆಯಾಗುತ್ತದೆ. ವಿದೇಶಗಳಲ್ಲಿ ಸ್ತ್ರೀವಾದಕ್ಕೆ ಭಾರತಕ್ಕಿಂತ ಭಿನ್ನ ಅರ್ಥ ಇರಬಹುದು. ಹಾಗೆಯೇ ಹದಿನೇಳನೇ ಶತಮಾನದಲ್ಲಿ ಅದಕ್ಕಿದ್ದ ಅರ್ಥ, ಎಂಭತ್ತನೇ ದಶಕದಲ್ಲಿ ಬದಲಾಗಿರಬಹುದು. ಒಂದೇ ಹಿನ್ನೆಲೆಯ ಮಹಿಳೆಯರಲ್ಲಿ ಸಹ ವಿವಿಧ ಅಭಿಪ್ರಾಯ ಮತ್ತು ಅನಿಸಿಕೆಗಳಿರಬಹುದು. ಆದರೆ ಎಲ್ಲರ ಅಭಿಪ್ರಾಯ, ಅನಿಸಿಕೆ, ವಿಚಾರಗಳನ್ನೆಲ್ಲ ಒಟ್ಟಾಗಿ ಹಾಕಿ ಮಥಿಸಿ, ಒಂದು ವ್ಯಾಪಕ ಪರಿಭಾಷೆಯನ್ನು ಸ್ತ್ರೀವಾದಿಗಳು ಈ ಹಿಂದೆಯೇ ನೀಡಿದ್ದಾರೆ. ಅದೆಂದರೆ, ಸಮಾಜದಲ್ಲಿ, ಉದ್ಯೋಗದಲ್ಲಿ ಮತ್ತು ಕುಟುಂಬಗಳಲ್ಲಿ ಮಹಿಳೆಯರ ತುಳಿತ ಮತ್ತು ಶೋಷಣೆಯ ಬಗ್ಗೆ ಅರಿವು ಮೂಡಿಸಿ, ಈ ಪರಿಸ್ಥಿತಿಯನ್ನು ಬದಲಾಯಿಸುವುದಕ್ಕಾಗಿ ಪುರುಷರು ಮತ್ತು ಮಹಿಳೆಯರು ಸೇರಿ ನಡೆಸುವ ಪ್ರಜ್ಞಾಪೂರ್ವಕ ಕ್ರಿಯೆಯೇ ಸ್ತ್ರೀವಾದ, ಎಂದು.

**ಸ್ತ್ರೀವಾದದ ಮೂಲ ಆಶಯ :** ಸ್ತ್ರೀಯರು ಮತ್ತು ಪುರುಷರಲ್ಲಿ ಸಮಾನತೆ ಇರಬೇಕು. ಸಮಾನ ಗೌರವಗಳನ್ನು ಪಡೆಯಬೇಕು ಹಾಗೂ ಘನತೆಯನ್ನು ಸಾಧಿಸಬೇಕು. ಈಗಿನ ಸಮಾಜವನ್ನು ಉಭಯಲಿಂಗಿ ದೃಷ್ಟಿಕೋನದ ಮೇಲೆ ಅರೋಗ್ಯಕರವಾಗಿ ಪರವರ್ತನೆಗೊಳಿಸಬೇಕು. ಕೌಟುಂಬಿಕ ಜವಾಬ್ದಾರಿಗಳು ಮಹಿಳೆಗೆ ಮಾತ್ರ ಅನಿವಾರ್ಯ ಎಂದಾಗದೇ, ಸಮವಾಗಿ ಹಂಚಿಕೆಯಾಗಬೇಕು. ಸಮಾಜದಲ್ಲಿ ಅಮುಖ್ಯಳಾದ ಸ್ತ್ರೀಯ ಹೂತು ಹೋದ ಸಂಸ್ಕೃತಿಯನ್ನು ಬೆಳಕಿಗೆ ತರಬೇಕು. ಸ್ತ್ರೀಗೆ ಸಂಬಂಧಿಸಿದ ವಿಷಯಕ್ಕೆ, ಮನೆಯ ಒಳಗೆ-ಹೊರಗೆ, ತನ್ನ ಬದುಕು ಹಾಗೂ ದೇಹಗಳ ಮೇಲೆ ತಮ್ಮದೇ ಹಿಡಿತವನ್ನು ಹೊಂದಬೇಕು. ಹಾಗೂ ಆಯ್ಕೆಯ ಸ್ವಾತಂತ್ರ್ಯವನ್ನು ಪಡೆಯಬೇಕು. ಸಮಾಜದ ಪದ್ಧತಿಗಳಲ್ಲಿ, ವ್ಯವಸ್ಥೆಯಲ್ಲಿ, ಸ್ತ್ರೀ-ಪುರುಷರ ನಡುವೆ ಇರುವ ತಾರತಮ್ಯವನ್ನು ನಿವಾರಿಸಿ, ಇಬ್ಬರನ್ನೂ ಸಮಾನ ರೀತಿಯಲ್ಲಿ ನಡೆಸಿಕೊಳ್ಳುವಂಥ ಒಂದು ಪರ್ಯಾಯ ಸಮಾಜವನ್ನು ಕಟ್ಟಬೇಕು. ಸಮಾಜ ಮತ್ತು ಪುರುಷರಿಂದಾಗುವ ಎಲ್ಲ ರೀತಿಯ ತುಳಿತಗಳಿಂದ, ಮಹಿಳೆ ಬಿಡುಗಡೆ ಹೊಂದಬೇಕು. ಕುಟುಂಬದಲ್ಲಿ ನಡೆಯುವ ಎಲ್ಲ ತಪ್ಪಿಗೂ ಹೆಣ್ಣನ್ನೇ ಹೊಣೆಯಾಗಿಸಿ ಶಿಕ್ಷಿಸುವುದನ್ನು ತಪ್ಪಿಸಿ, ನಿಜವಾದ ತಪ್ಪಿತಸ್ಥರಿಗೆ ಶಿಕ್ಷೆಯಾಗಬೇಕು. ಇವೇ ಮುಂತಾದವು ಸ್ತ್ರೀವಾದಿ ಚಳವಳಿಯ ಮುಖ್ಯವಾದ ಹಕ್ಕೊತ್ತಾಯಗಳಾಗಿದ್ದವು ಆಗಿವೆ.

ಆರಂಭದಲ್ಲಿ(ಈಗಲೂ) ಸ್ತ್ರೀವಾದವನ್ನು ಎಷ್ಟೋ ಜನ, ವೈಯಕ್ತಿಕ ಸಮಸ್ಯೆಯಾಗಿ ಭಾವಿಸುತ್ತಾರೆ. ಮನೆಯಲ್ಲಿ ಸರಿ ಇಲ್ಲದಿರುವವರು ಈ ವಾದವನ್ನು ಹುಟ್ಟಿ ಹಾಕಿದ್ದಾರೆ ಎಂಬುದು ಅವರ ಭಾವನೆ. ಆದರೆ ಇದು ಸಂಪೂರ್ಣ ಸಮಾಜದ ಬದಲಾವಣೆಗಾಗಿ ಸ್ತ್ರೀವಾದಿಗಳು ಮಾಡುತ್ತಿರುವ ಹೋರಾಟವಾಗಿದೆ. ಯಾರೋ ಒಬ್ಬರಿಗಾಗಿ ಅಲ್ಲ. ಸ್ವಾರ್ಥಕ್ಕಾಗಿಯೂ ಅಲ್ಲ. ಮಹಿಳೆಯರ ನಿಜವಾದ ಸ್ಥಾನದ ಬಗ್ಗೆ ವರ್ಜೀನಿಯ ವುಲ್ಫ್ ಹೇಳಿರುವ ಒಂದು ಮಾತು ನಮ್ಮೆಲ್ಲರ ಅಲೋಚನೆಗಳಲ್ಲಿ ಅನೇಕ ಬಾರಿ ಸುಳಿದಿದೆ. "ಕಾಲ್ಪನಿಕವಾಗಿ ಮಹಿಳೆಗೆ ಅತ್ಯಂತ ಮಹತ್ವದ ಸ್ಥಾನವಿದೆ; ಆದರೆ ವಾಸ್ತವಿಕವಾಗಿ ಅವಳು ಸಂಪೂರ್ಣವಾಗಿ ಕಡೆಗಣಿಸಲ್ಪಟ್ಟಿದ್ದಾಳೆ. ಕಾವ್ಯದಲ್ಲಿ ಮೊದಲಿನಿಂದ ಕೊನೆಯವರೆಗೂ ಅವಳೇ ವ್ಯಾಪಿಸಿರುತ್ತಾಳೆ; ಆದರೆ ಚರಿತ್ರೆಯಿಂದ ಮಾತ್ರ ಗೈರುಹಾಜರಾಗಿರುತ್ತಾಳೆ. ಕಾಲ್ಪನಿಕ ಬರಹಗಳಲ್ಲಿ ಆಕೆ ರಾಜಮಹಾರಾಜರನ್ನೂ, ವಿಜಯಿಗಳನ್ನೂ ಆಳುತ್ತಿರುತ್ತಾಳೆ; ನಿಜ ಜೀವನದಲ್ಲಿ ತನ್ನ ತಂದೆ-ತಾಯಿಗಳ ಬಲವಂತಕ್ಕೆ ಅವಳ ಬೆರಳಿಗೆ ಉಂಗುರ ತೊಡಿಸಿದ ಯಾವುದೇ ಹುಡುಗನ ಆಳಾಗಿದ್ದಾಳೆ. ಸಾಹಿತ್ಯದಲ್ಲಿನ ಕೆಲವು ಅತ್ಯಂತ ಸ್ಫೂರ್ತಿದಾಯಕ ಶಬ್ದಗಳನ್ನೂ ಗಾಢ ಚಿಂತನೆಗಳನ್ನೂ ಆಡುವ ಆಕೆ ನಿಜ ಜೀವನದಲ್ಲಿ ಓದಲಾರದ, ಮಾತು ಬಾರದ ಮೂಢೆಯಾಗಿದ್ದಾಳೆ; ಕೇವಲ ತನ್ನ ಗಂಡನ ಆಸಕ್ತಿಯಾಗಿದ್ದಾಳೆ." ಎಂದು. ಈ ಮಾತಿನಂತೆ ನಮ್ಮ ಪೌರಾಣಿಕ ಪಾಠವನ್ನು ಪುನರವಲೋಕಿಸಿದರೆ, ಮಹಿಳೆ ಚೆನ್ನಾಗಿ ಹೊಗಳಿಸಿಕೊಳ್ಳುತ್ತಲೇ, ಪಟ್ಟದ ಮೇಲಿರುವ

ಮೂರ್ತಿಯಾಗಿ ಕಾಣಿಸಿಕೊಳ್ಳುತ್ತಲೇ ಹೇಗೆ, ಎಷ್ಟು ತುಳಿತಕ್ಕೆ ಒಳಗಾಗಿದ್ದಾಳೆ ಎಂಬುದನ್ನು ನಾವು ಕಾಣಬಹುದು. 'ಜಗಜ್ಜನನಿ' ಎಂಬ ಎಲ್ಲರಿಗಿಂತ ಎತ್ತರದ ಪಟ್ಟ ಹೆಣ್ಣಿಗಿದೆ. ಆದರೆ ಹೊಸ್ತಿಲಾಚೆಯ ಪ್ರಪಂಚವು, ಹೆಣ್ಣಿನ ಕಣ್ಣಿಗೇ ಬೀಳದಂತೆ ಆಡುಗೆ ಮನೆಯಲ್ಲಿ ಅವಳನ್ನು ಬಂಧಿಸಲಾಗಿತ್ತು. 'ಧನಲಕ್ಷ್ಮಿ, ಧಾನ್ಯಲಕ್ಷ್ಮಿ', ಎಂದು ಹೇಳಿ, ಆರ್ಥಿಕ ಸ್ವಾತಂತ್ರ್ಯವನ್ನು ಕೊಡದೇ ದೂರವಿಟ್ಟಿದ್ದು ಮಾತ್ರವಲ್ಲ, ಗಂಡನ ಉಚ್ಚಿಷ್ಟವನ್ನು, ಅವನು ಬಿಟ್ಟ ಎಂಜಲನ್ನು ತಿನ್ನುವುದು ಶ್ರೇಷ್ಠವೆಂಬ ಪದ್ಧತಿಯನ್ನು ಅವಳ ಮೇಲೆ ಹೇರಲಾಗಿತ್ತು. 'ವಿದ್ಯೆಯ ಅಧಿದೇವತೆ' ಯಾದ ಸರಸ್ವತಿ ಹೆಣ್ಣು; ಆದರೆ ವಾಸ್ತವದಲ್ಲಿ ಯಾವುದೇ ವೇದವನ್ನು ಹೆಣ್ಣು ಕಲಿತರೆ ಅದು ನಿಷ್ಫಲವಾಗುತ್ತದೆಂದು ಹೆದರಿಸಿ ಅವಳಿಗೆ ವೇದಾಧ್ಯಯನ ಮಾಡದಂತೆ ಅಡ್ಡಿ ಹಾಕಲಾಗಿತ್ತು. ಮತ್ತು ಹೆಣ್ಣಿಗೆ ಶಿಕ್ಷಣ ಕಲಿಸದೇ ದೂರವಿಟ್ಟಿತ್ತು. ಮಂತ್ರಗಳ 'ಅಧಿದೇವತೆ', 'ಸಕಲ ಸಿದ್ಧಿದಾಯಕಿ'ಯಾಗಿ ಪೂಜಿಸಲ್ಪಡುವವಳು ಗಾಯತ್ರಿ. ಆದರೆ ಗಾಯತ್ರಿ ಮಂತ್ರ ಮಾತ್ರ ಹೆಣ್ಣಿನ ಕಿವಿಗೇ ಬೀಳಬಾರದು, ಎಂದು ವಟುವಿಗೆ ಗಾಯತ್ರಿಯನ್ನು ಕಿವಿಯಲ್ಲಿ ಉಸುರುವ ಸಂಪ್ರದಾಯ ಈಗಲೂ ಇದೆ. ಹೀಗೆ ವಾಸ್ತವತೆಗೂ, ಪರಂಪರಾಗತ ಹೇಳಿಕೆಗಳಿಗೂ ಇರುವ ಇಂಥ ಹಲವಾರು ವ್ಯತ್ಯಾಸಗಳನ್ನು ತೊಡೆದು ಹಾಕುವಂತಹ ಸಮಾಜ ನಿರ್ಮಿತವಾಗಬೇಕೆಂಬುದು, ಸ್ತ್ರೀವಾದದ ಉದ್ದೇಶಗಳಲ್ಲಿ ಒಂದು.

ಸ್ತ್ರೀವಾದದ ಹುಟ್ಟು ಮತ್ತು ಹಿನ್ನೆಲೆ : ಸಾಮಾಜಿಕ ಪರಿಸ್ಥಿತಿ ಮತ್ತು ಘಟನೆಗಳು, ಯಾವುದೇ ಒಂದು ಚಳವಳಿಯ ಹುಟ್ಟಿಗೆ ಪ್ರೇರಣೆಯಾಗುತ್ತವೆ. ಒಂದು ತುರ್ತು ಪರಿಸ್ಥಿತಿ, ಇನ್ನೊಂದು ೧೯೭೫ನೇ ಇಸವಿಯನ್ನು ಮಹಿಳಾ ವರ್ಷವೆಂದು ಘೋಷಿಸಿದ್ದು, ಆ ನಂತರ ೧೯೭೫ ರಿಂದ ೧೯೮೫ರ ವರೆಗೆ ಮಹಿಳಾ ದಶಕವೆಂದು ಘೋಷಿಸಿದ್ದು, ಸ್ತ್ರೀವಾದಕ್ಕೆ ಪ್ರೇರಣೆಯಾದ ಎರಡು ಪ್ರಮುಖ ಘಟನೆಗಳು. ಇವು ಸ್ತ್ರೀವಾದದ ಅಲೆ ಏಳಲು ಮುಖ್ಯ ಕಾರಣವಾದವು. ಸ್ತ್ರೀವಾದದ ಪ್ರಾರಂಭಕ್ಕೆ, ಮುಂದುವರಿಕೆಗೆ, ದಲಿತ ಬಂಡಾಯವೇ ಕಾರಣವಲ್ಲ, ಪ್ರಭಾವಿತ ಅಥವಾ ಪೂರಕವೂ ಅಲ್ಲ. ನಿಜ ಹೇಳಬೇಕೆಂದರೆ ಕೆಲವು ದಲಿತ ಸಾಹಿತಿಗಳೂ, ಮಹಿಳಾವಾದಿಗಳನ್ನು ಗೇಲಿ ಮಾಡಿ, ಅವರ ಸಮಾನತೆಯ ಪ್ರಯತ್ನವನ್ನು, ಹೋರಾಟವನ್ನು(di-credit) ಅವಮಾನಿಸಿದ್ದಿದೆ, ಧಕ್ಕೆಗೊಳಿಸಿದ ಪ್ರಸಂಗಗಳಿವೆ.

**ಚಳವಳಿಯ ಅರ್ಥ** : ಇರುವ ಒಂದು ಒಪ್ಪಿತ ವ್ಯವಸ್ಥೆಯನ್ನು, ಒಂದು ಪರಂಪರೆಯನ್ನು ಅಳಿಸಿ, ಅದರ ಬದಲಿಗೆ, ಇನ್ನೊಂದು ವ್ಯವಸ್ಥೆಯನ್ನು ತರುವುದು ಅಥವಾ ಹೊಸ ಪರಂಪರೆಯನ್ನು ಹುಟ್ಟಿ ಹಾಕುವ ಪ್ರಯತ್ನವನ್ನು ಒಂದು ಗುಂಪಾಗಿ ಸೇರಿ ಮಾಡುವುದು ಚಳವಳಿ ಎಂದು ನನ್ನ ಅಭಿಪ್ರಾಯ. ಬಹಳ ಸರಳವಾಗಿ ಹೇಳುವುದಾದರೆ,

೧. ಕನ್ನಡ ನಿಘಂಟುವಿನ ಪ್ರಕಾರ 'ಚಳವಳಿ ಎಂದರೆ ಒಂದು ಸಾಮೂಹಿಕ ಕ್ಷೋಭೆ, ಅಥವಾ ಒಂದು ಸಾಮೂಹಿಕ ಅಂದೋಲನ.

೨. ಸರ್ವರೂ ಹೊಂದಿರುವ ಸಾಮಾಜಿಕ ಮತ್ತು ಸಾಂಸ್ಕೃತಿಕ ಉದ್ದೇಶದ ಅಥವಾ ಹಂಚಿಕೊಂಡ ಆದರ್ಶಗಳ ಕಾರಣದಿಂದ ಅಸ್ತಿತ್ವಕ್ಕೆ ಬಂದ ಒಂದೇ ಮಾದರಿಯ ಕೃತಿಗಳನ್ನೊಳಗೊಂಡ ಪಂಥಗಳಿಗೆ ಸಾಹಿತ್ಯ ಚಳವಳಿ ಎಂಬ ಪದವನ್ನು ಬಳಸಲಾಗುತ್ತದೆ, ಎಂದು ಉರ್ದು ಸಾಹಿತಿ ಮಹಮದ್ ಹಸನ್ ಹೇಳಿದ್ದಾರೆ. (ಭಾರತೀಯ ಸಾಹಿತ್ಯ ಸಮೀಕ್ಷೆ ಪುಟ ೧೨೫೨)

೩. ಚಳವಳಿ ಎನ್ನುವುದು ತಮ್ಮ ದೃಷ್ಟಿಯಲ್ಲಿರುವಂತಹದೇನೋ ಒಂದನ್ನು ಸ್ಥಾಪಿಸಲು ವ್ಯಕ್ತಿಗಳ ತಂಡವೊಂದು ಹೊಂದಾಣಿಕೆಯಿಂದ ನಡೆಸುವ ಚಟುವಟಿಕೆ ಎಂಬುದು ಒರಿಯ ಲೇಖಕ ಜೆ.ಎಂ.ಮೊಹಂತಿಯವರ ಹೇಳಿಕೆ.

ಚಳವಳಿ ಎಂದರೆ ಏನು ಎಂಬ ಬಗ್ಗೆ ಮೇಲೆ ಹೇಳಲಾಗಿರುವ, ಎಲ್ಲ ಗುಣಗಳೂ ಸ್ತ್ರೀವಾದಕ್ಕಿದೆ. "ಗಂಡ ಹೊಡೆದರೂ ಅಟ್ಟಿದರೂ ಬೇರೊಬ್ಬಳೊಂದಿಗೆ ಹೋದರೂ, ಅವನನ್ನು ದೇವರೆಂದೇ ಪೂಜಿಸಬೇಕು, ಅತ್ತೆಯ ಮನೆಯಲ್ಲಿ ತೊತ್ತಾಗಿ ಇರಬೇಕು, ತನ್ನದೇನೂ ತಪ್ಪಿಲ್ಲದೆ ಅತ್ಯಾಚಾರಕ್ಕೆ ತುತ್ತಾದ, ಮುಗ್ಧ ಹೆಣ್ಣೂ ಸತ್ತು ಮಾದರಿಯಾಗಬೇಕು" ಎಂಬಂತಹ ಪರಂಪರಾಗತ ಸ್ತ್ರೀ ಮೌಲ್ಯಗಳ ವ್ಯವಸ್ಥೆಯನ್ನು ಖಂಡಿಸುವಂತಹ, ಪುರುಷನೊಬ್ಬನೇ ಪ್ರಧಾನ ಹೇಗಾದಾನು ಎಂಬುದನ್ನು ಪ್ರಶ್ನಿಸುವಂತಹ, ತೊತ್ತಿನ ಬದುಕು ಬೇಡ ಎಂಬುದನ್ನು ಹೇಳುವಂತಹ, ಕೃತಿಗಳು ಸ್ತ್ರೀವಾದಿ ಲೇಖಕಿಯರಿಂದ ಏಕ ಕಾಲದಲ್ಲಿ ಹೊರಬರತೊಡಗಿದವು. ಅದರಿಂದ ಸ್ತ್ರೀವಾದಿಗಳದೂ ಸಾಮೂಹಿಕ ಸಾಹಿತ್ಯಕ ಆಂದೋಲನವಾಗಿತ್ತು. ಪರಂಪರಾಗತ ಸಿದ್ಧ ಮಾದರಿಯನ್ನು ಮೀರಿ ಸ್ವಂತ ಅಸ್ತಿತ್ವ ಸ್ಥಾಪಿಸುವ ಆಶಯವುಳ್ಳ ಕವಿತೆಗಳು ಬಂದವು.

ನಾನು
ಗಂಡನೇ ದೇವರೆಂದು
ವನವಾಸ ಮಾಡಿ
ಅಗ್ನಿಗೆ ಧುಮುಕುವ
ಸೀತೆಯಲ್ಲ.
ಗಂಡನ ಪ್ರಾಣಕ್ಕಾಗಿ
ಯಮನ ಹಿಂದೆ
ನಾಯಿಯಂತಲೆವ
ಸಾವಿತ್ರಿಯೂ ಅಲ್ಲ.
(ಎಂ.ಆರ್.ಕಮಲ 'ನಾನು)

"ನನ್ನ ಕನಸು ಕಲ್ಪನೆಗಾಗಿ
ಬುದ್ಧಿಭಾವನೆಗಾಗಿ

ಆತ್ಮ ಗೌರವಕ್ಕಾಗಿ ನನಗಾಗಿ ನಾನಾಗಿ
ಇರಲೇಬೇಕು.
(ಮಾಲತಿ ಪಟ್ಟಣಶೆಟ್ಟಿ-ಬಣ್ಣದ ಗರಿ)

ನೀ ಹಾಕಿರುವ ಅಣೆಕಟ್ಟೆ
ಒಡೆದು ಬಿರುಮಳೆಗೆ ಸೊಕ್ಕಿ
ಭೋರ್ಗರೆದು ನುಗ್ಗಿ
ನಿನ್ನಂತಾಗದೆ ಬದುಕುತ್ತೇನೆ
ನನಗೆ ದಾರಿ ಬಿಡು.
(ಸ.ಉಷಾ-ಅಮ್ಮನಿಗೆ)

ಈ ಮನಸ್ಥಿತಿಯಲ್ಲಿ
ಲಂಕೆಯನ್ನೂ ಹಾರಬಲ್ಲೆ ಜಿಂಕೆಯನ್ನು
ಮೀರಬಲ್ಲೆ ಸಪ್ತ ಸಾಗರಗಳನ್ನೂ
ಅಂಕೆಯಲ್ಲಿಟ್ಟು ಆಳಬಲ್ಲೆ
(ಹೇಮಾ 'ಬಾಳುವೆ 'ಪಟ್ಟಣಶೆಟ್ಟಿ)

ಸರ್ವರೂ ಸಾಮಾಜಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಸ್ತ್ರೀ-ಪುರುಷರಲ್ಲಿ ಸಮಾನತೆಯನ್ನು ತರಬೇಕೆಂಬ ಮತ್ತು ಎಲ್ಲ ಆಗುಹೋಗುಗಳನ್ನು ಸ್ತ್ರೀ-ದೃಷ್ಟಿಕೋನದಿಂದಲೂ ನೋಡಬೇಕೆಂಬ ಆದರ್ಶವನ್ನು ಹೊಂದಿದ್ದು ಅದರಂತೆ ಒಂದೇ ಮಾದರಿಯ ಅಂದರೆ, ಒಂದೇ ನೀತಿ, ನಿಲುವು, ಸಿಟ್ಟು, ಸ್ತ್ರೀ ಅನುಭವಗಳನ್ನು ಹೇಳುವಂತಹ ಕಾವ್ಯಗಳನ್ನೂ, ಇತರ ಪ್ರಕಾರದ ಕೃತಿಗಳನ್ನೂ ನಿಸ್ಸಂಕೋಚವಾಗಿ ರಚಿಸತೊಡಗಿದರು. ಪುರುಷ ಪ್ರಧಾನತೆಯನ್ನು ಪ್ರಶ್ನಿಸುವ ಕವಿತೆಗಳ ಒಂದೆರಡು ಉದಾಹರಣೆಗಳು

"ಬಸವನಿಗೆ ಕೋಡಿದ್ದರೇನು?
ಕಮಲ ಅರಳುವುದಿಲ್ಲವೇ ಬೆಳೆಯುತ್ತ?
ಅರಳಿದ ಕಮಲಳ ಮುಂದೆ ಜಿನುಗಿ
ಸೋರುವುದಿಲ್ಲವೇ ಕೋಡಿನ ಬಿಗುಮಾನ?
ಬಸವನ ಗಂಡಸ್ತನಕೆ ಒತ್ತಿ ಮುದ್ರೆ
ಚಲಾವಣೆಗೆ ತರೋಳು ಕಮಲ ಅಲ್ಲವೆ?
(ಚ.ಸರ್ವಮಂಗಳ- 'ಅವನು ಬಸವ)

ನಾನೇಕೆ ಬಳ್ಳಿ ನೀನೇಕೆ ಮರ
ನನ್ನ ಕಾಲ ಮೇಲಲ್ಲವೆ ನಿನ್ನ ನಿಲುವು

ನನ್ನ ಬಾಳಿಗೂ ಇಲ್ಲವೇ ನಿನ್ನಂತೆ ಛಲವು?
(ಎಂ.ಎಸ್.ವೇದ-'ಸಂಗಾತಿಗೆ)

"ಶಕುಂತಲಾ, ನಂಬಿಸಿ ಮಜಾ ಮಾಡಿ ಮತ್ತೆ ಕೈಕೊಟ್ಟ
ದುಷ್ಯಂತ ತಿರುಗಿ ಬಂದಾಗ
ನೀನೂ ಒಂದು ಶಾಪ ಕೊಡಬಾರದಿತ್ತೆ?
(ಭಾಗ್ಯ-'ಶಕುಂತಲಾ)

"ಅಮ್ಮ ಸಾಕು ಮಾಡೇ ನಿನ್ನ ಪುರಾಣ
ಏನೇ ಹೇಳು ತೊಡೆಸಂದಿಯಲ್ಲಿ ಬದುಕ ಹುದುಗಿಸಿ
ಬದುಕಾಲಾರೆ ನೀನು ಅಜ್ಜಿ ಸುತ್ತಿದ
ವರ್ತುಲದಲ್ಲೇ ಸುತ್ತಲಾರೆ, ಕುತ್ತಿಗೆಗೊಂದು
ಬಿಗಿದು ಹಿಡಿಯಬೇಡ ಅಮ್ಮಾ
(ಚ.ಸರ್ವಮಂಗಳ-ತಡೆ)

ದಿನಾ ನೋಡುತ್ತೀಯ
ನಾನು ಹೆಣ್ಣು ಅಂತ ತಿಳಿದಿದ್ದೀಯಾ
ಅಲ್ಲ ನಾನೊಂದು ಕಾಡು
ಹುಟ್ಟುವಾಗ ನನ್ನ ತಲೆಯೊಳಗೆ
ಹುಲಿಯ ಘರ್ಜನೆ ತುಂಬಿ
ನೆಲಕ್ಕಿಳಿಸಿದಳು ನನ್ನ ತಾಯಿ.
ಬೆಳೆಯುವಾಗ ಕರಡಿಯ ನಡೆ
ಕಲಿಸಿದ ತಂದೆ.
ನನ್ನ ಹೊಟ್ಟೆಯೊಳಗೆ ಘೇಂಡಾಮೃಗ
ಎದೆಯೊಳಗೆ ಕುಣಿಯುವ ಹುಲ್ಲೆ.
(ಪ್ರತಿಭಾ ನಂದಕುಮಾರ್ -ಹೆಣ್ಣು-ಕಾಡು)

ಸಮಾನತೆಯನ್ನು ಬಯಸುವ ಕವಿತೆಗಳು
ಪ್ರೇಮ, ಕಾಮ,
ಸುಖ ಸಂಸಾರ,
ಹೆಣ್ಣೊಬ್ಬಳಿಗೇ ಅಲ್ಲ ಗಂಡೇ,
ನಿನಗೂ ಬೇಕಲ್ಲ
ನೀನೇನು ಜಿತೇಂದ್ರಿಯನಲ್ಲ, ಸನ್ಯಾಸಿಯಲ್ಲ,

ಮತ್ತೇಕೆ ಸೊಟ್ಟ ತಕ್ಕಡಿ?
ಒಂದೆಡೆ ದಕ್ಷಿಣೆ?
(ಕೆ.ಎಂ.ವಿಜಯಲಕ್ಷ್ಮಿ-'ವರದಕ್ಷಿಣೆ)

ನೀನೊಬ್ಬಳೇ ಹೊತ್ತುದು ಸಾಕು
ಇಳಿಸು ಆ ಹೊರೆ ಧರೆಗೆ
ಹೊಸ ಬಾಳಲಿ ಇರಬೇಕು
ಹೊರೆ ನಿನಗು ಅವಗು ಸಮಗೆ
(ಚಿ.ನ.ಮಂಗಳ-ಹೊರೆ)

ಅಂದರೆ ಮೇಲೆ ಹೇಳಿದ ಚಳವಳಿಯ ಯಾವುದೇ ಗುಣ ಮತ್ತು ಅರ್ಥವನ್ನು, ತೆಗೆದುಕೊಂಡರೂ, ಆ ಗುಣಗಳೆಲ್ಲ ಸ್ತ್ರೀವಾದಿ ಚಳವಳಿಗೆ ಇವೆ. ಅದರಿಂದ, ಸ್ತ್ರೀವಾದವೂ ಒಂದು ಪ್ರತ್ಯೇಕ ಚಳವಳಿ ಅಂತಲೇ ಪರಿಗಣಿಸಬೇಕಾಗುತ್ತದೆ.

ಹೀಗೆ ಈ ನಿಟ್ಟಿನಲ್ಲೇ ಅನೇಕ ಲೇಖಕಿಯರ ಕೃತಿಗಳು ಹೊರಬಂದಿವೆ. ಸಾಮಾನ್ಯವಾಗಿ, ಚಳವಳಿಗಳು ಸಾಹಿತ್ಯದ ಒಟ್ಟಾರೆ ಬೆಳವಣಿಗೆಗೆ ಅಗತ್ಯವಾದ ಪ್ರಚೋದನೆ ಹಾಗೂ ಸಹಕಾರಿಯಾದ ಬೌದ್ಧಿಕ ವಾತಾವರಣವನ್ನು ಒದಗಿಸಿಕೊಡುತ್ತವೆ, ಎಂಬ ಮಾತಿದೆ. ಅದರಂತೆ, ಸ್ತ್ರೀವಾದಿ ಚಳವಳಿಯೂ ಹಾಗೆ ಸಾಹಿತ್ಯದ ಮತ್ತು ಸಮಾಜದ ಚಲನಶೀಲತೆಗೆ, ಬೌದ್ಧಿಕ ಬೆಳವಣಿಗೆಗೆ ಉತ್ತಮ ವಾತಾವರಣವನ್ನು ಸೃಷ್ಟಿಸಿಕೊಟ್ಟಿದೆ.

**ಕರ್ನಾಟಕ ಲೇಖಕಿಯರ ಸಂಘ :** ಸ್ತ್ರೀವಾದವನ್ನು ಸಾಹಿತ್ಯ ಚಳವಳಿಯಾಗಿ ರೂಪಿಸುವಲ್ಲಿ, ಬೆಂಬಲಿಸುವಲ್ಲಿ ಕೆಲವು ಸಂಘಟನೆಗಳೂ ಸಹಾಯಕವಾಗಿವೆ. ೧೯೭೯ರಲ್ಲಿ ಸ್ಥಾಪನೆಗೊಂಡ, ಬೆಂಗಳೂರಿನ ಕರ್ನಾಟಕ ಲೇಖಕಿಯರ ಸಂಘ, ಅಂಥ ಸಾಹಿತ್ಯಕ ಸಂಘಟನೆಗಳಲ್ಲಿ ಮೊದಲನೆಯದಾಗಿ ನನಗೆ ಕಂಡು ಬರುತ್ತದೆ. ಕನ್ನಡ ಸಾಹಿತ್ಯ ಪರಿಷತ್ತಿನಿಂದ ಧರ್ಮಸ್ಥಳದಲ್ಲಿ ನಡೆಸಲಾದ, ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಸಾಹಿತ್ಯ ಗೋಷ್ಠಿಯನ್ನು ನಡೆಸಲು ಅವಕಾಶ ಕೊಡದಿದ್ದುದಕ್ಕಾಗಿ, ಬಂಡಾಯ ದಲಿತ ಸಂಘಟನೆಯೊಂದು ಪ್ರತ್ಯೇಕವಾಗಿ ಹುಟ್ಟಿ, ದಲಿತರು, ತಮ್ಮದೇ ಆದ ಒಂದು ವೇದಿಕೆಯನ್ನು ಸ್ಥಾಪಿಸಿಕೊಂಡಂತೆಯೇ, ಪುರುಷ ಪ್ರಧಾನ ಸಾಹಿತ್ಯ ವೇದಿಕೆಗಳಲ್ಲಿ, ಪ್ರತಿಭಾವಂತ ಮಹಿಳೆಯರು ಅವಕಾಶಗಳಿಂದ ವಂಚಿತರಾಗುತ್ತಿದ್ದಾರೆ ಎಂಬುದನ್ನು ಮನಗಂಡು, ಕೆಲವು ಸಾಹಿತ್ಯಾಸಕ್ತ ಮಹಿಳೆಯರು ೧೯೭೯ರ ಆದಿಯಲ್ಲಿ, ಶ್ರೀಮತಿ.ಟಿ.ಸುನಂದಮ್ಮನವರ ಅಧ್ಯಕ್ಷತೆಯಲ್ಲಿ, ಈ ಕರ್ನಾಟಕ ಲೇಖಕಿಯರ ಸಂಘವನ್ನು ಹುಟ್ಟು ಹಾಕಿದರು. ಕರ್ನಾಟಕಾದ್ಯಂತ ತನ್ನ ಕಾರ್ಯ ವ್ಯಾಪ್ತಿಯನ್ನು ಹೊಂದಿರುವ ಈ ಸಂಘ, ಶ್ರೀಮತಿ ಎಚ್ .ಎಸ್ .ಪಾರ್ವತಿಯವರ ಅಧ್ಯಕ್ಷತೆಯ ಅವಧಿಯಲ್ಲಿ ಆರ್ಥಿಕ ಹಾಗೂ ಸಾಂಖ್ಯಿಕ(ಸದಸ್ಯರ) ಕೊರತೆಯ ಕಾರಣ, ಮತ್ತು ಸಂಘ ಇನ್ನೂ ಶೈಶಾವಸ್ಥೆಯಲ್ಲಿದ್ದ

ಕಾರಣ, ಮಹಿಳೆಯರ ಪರವಾದ ಆಲೋಚನೆಗಳಿಗೆ ಆರಂಭ ಮಾತ್ರ ಮಾಡಿ ಕೊಟ್ಟು, ಮಹಿಳೆಯರ ದನಿಗೆ ಪ್ರತ್ಯೇಕ ವೇದಿಕೆಯನ್ನು ಒದಗಿಸಿಕೊಟ್ಟಿತು. ೧೯೮೬-೮೭ರಲ್ಲಿ ಶ್ರೀಮತಿ ಹೇಮಲತಾ ಮಹಿಷಿಯವರು ಅಧ್ಯಕ್ಷರಾದ ಮೇಲೆ ಸ್ತ್ರೀವಾದದ ಉದ್ದೇಶ, ನೆಲೆ, ಅರ್ಥ, ವೈಚಾರಿಕ ಚಿಂತನೆ, ಅದರ ಅವಶ್ಯಕತೆ ಇತ್ಯಾದಿಗಳ ಬಗ್ಗೆಯೇ ಹೆಚ್ಚು ಒತ್ತು ಕೊಟ್ಟು ಹಲವಾರು ಕಾರ್ಯಕ್ರಮಗಳನ್ನು, ವಿಚಾರ ಸಂಕಿರಣಗಳನ್ನು, ಈ ಸಂಘ ನಡೆಸಿತು. ಈಗಲೂ ನಡೆಸುತ್ತಿದೆ. ಲೇಖಕಿಯರು, ತಮ್ಮ ಚಿಂತನೆಯನ್ನು ಕೃತಿಗಳನ್ನು ಸ್ತ್ರೀವಾದದ ಹಿನ್ನೆಲೆಯಲ್ಲಿ ರೂಪಿಸಿಕೊಳ್ಳುವ ಬಗ್ಗೆ ಸ್ತ್ರೀ ದೃಷ್ಟಿಕೋನದಿಂದ ಸಾಹಿತ್ಯ ರಚಿಸುವ ಬಗ್ಗೆ, ಈ ಸಂಘ ಅತ್ಯಂತ ಕಾಳಜಿಯಿಂದ ಕರೆ ಕೊಟ್ಟಿದ್ದು ನಿಜ. ಆದರೆ ಕೆಲವು ಸ್ತ್ರೀವಾದಿಗಳು, ಇತರ ಲೇಖಕಿಯರೊಡನೆ ಸರಿಯಾಗಿ ಬೆರೆಯದೇ, ತಾವು ಅರ್ಥೈಸಿಕೊಂಡದ್ದನ್ನು ಸ್ನೇಹಪೂರ್ವಕವಾಗಿ ಸ್ಪಷ್ಟಪಡಿಸದೆ, ತಾವಷ್ಟೇ ಸ್ತ್ರೀವಾದಿಗಳೆಂದು ಭಾವಿಸುತ್ತಾ ಇತರರಿಂದ ಪ್ರತ್ಯೇಕವಾಗಿಯೇ ಉಳಿದುದರಿಂದ, ಸಂಘದ ಮೂಲಕ ಇನ್ನೂ ಹೆಚ್ಚಾಗಿ ಆಗಬಹುದಾಗಿದ್ದ ಸ್ತ್ರೀವಾದದ ಪ್ರಸಾರ ಮತ್ತು ಕಾರ್ಯಸಾಧ್ಯತೆಗಳು ಮಿತಿಗೊಂಡವು ಎಂದರೆ ತಪ್ಪಾಗಲಾರದು. ಆದರೂ ಈ ಸಂಘ ಸ್ತ್ರೀವಾದೀ ಸಾಹಿತ್ಯಕ ಚಳವಳಿಗೆ ಬಹಳಷ್ಟು ಬೆಂಬಲ ನೀಡಿದೆ, ಹಲವಾರು ಸ್ತ್ರೀಪರ ಚಿಂತಕಿಯರಿಗೆ, ಲೇಖಕಿಯರಿಗೆ, ಉದಯೋನ್ಮುಖರಿಗೆ ಇನ್ನು ಹೆಚ್ಚಿನ ಚಿಂತನೆಗೆ ಅವಕಾಶ ಮಾಡಿ ಕೊಟ್ಟಿದೆ ಎಂಬುದನ್ನಂತೂ ಮರೆಯುವಂತೆಯೇ ಇಲ್ಲ. ಕಳೆದ ಮತ್ತು ಹೂತು ಹೋದ ಹಿಂದಿನ ತಲೆಮಾರಿನ ಸ್ತ್ರೀಪರ ಲೇಖಕಿಯರ ಕೃತಿಗಳ ಮೇಲಿನ ಹೂಳೆತ್ತಿ ವಿಮರ್ಶೆಯೊಂದಿಗೆ ಹೊರ ತರುವ ಕೆಲಸವನ್ನು ಈ ಸಂಘ ಮಾಡಿದೆ. ಸಂಘ ಪ್ರಕಟಿಸಿದ ಹಲವಾರು ಪುಸ್ತಕಗಳಲ್ಲಿ, ಶ್ಯಾಮಲಾ ಸಂಚಯ, ಅಜ್ಞಾತ ಕವಯಿತ್ರಿಯರು, ಬೆಳಗೆರೆ ಜಾನಕಮ್ಮನವರ ಬದುಕು-ಬರಹ, ಕಲ್ಯಾಣ ಸರಸ್ವತಿ, ಸ್ತ್ರೀವಾದೀ ಪ್ರವೇಶಿಕೆ, ಶ್ರೀಮತಿ ನಾಗಮಣಿ. ಎಸ್. ರಾವ್ ಮತ್ತು ಉಷಾ ರೈ ರವರ ಅಧ್ಯಕ್ಷತೆಯ ಅವಧಿಯಲ್ಲಿ ಮೂರು ಭಾಗಗಳಲ್ಲಿ ಹೊರತಂದ "ಲೇಖ-ಲೋಕ", ಮುಂತಾದವು, ಸ್ತ್ರೀಯರ ಸಾಹಿತ್ಯ ಚರಿತ್ರೆಗೆ ಉಪಯುಕ್ತವಾಗುವ ಇಂಥ ಪುಸ್ತಕಗಳಾಗಿವೆ. ಸ್ತ್ರೀವಾದದ ಬಗ್ಗೆ ವಿಚಾರ ಸಂಕಿರಣಗಳನ್ನು, ಕಾರ್ಯಾಗಾರಗಳನ್ನು, ವಿವಿಧ ರೀತಿಯ ಉತ್ತಮವಾದ ಕಾರ್ಯಕ್ರಮಗಳನ್ನು ಮತ್ತು ಅಖಿಲ ಕರ್ನಾಟಕ ಲೇಖಕಿಯರ ನಾಲ್ಕು ಸಾಹಿತ್ಯ ಸಮ್ಮೇಳನಗಳನ್ನು, ಅತ್ಯಂತ ಯಶಸ್ವಿಯಾಗಿ, ಅರ್ಥಪೂರ್ಣವಾಗಿ ಈ ಸಂಘ ನಡೆಸಿದೆ. ಉದಯೋನ್ಮುಖ ಬರಹಗಾರರಿಗೆ ಪ್ರೋತ್ಸಾಹ ನೀಡಿದ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ, ಧಾರವಾಡದ ಗೆಳೆಯರ ಗುಂಪು(೧೯೮೦), ಮೈಸೂರಿನ ತರುಣರ ದಂಡು, ಹೇಗೆ ಸಾಹಿತ್ಯ ಚರಿತ್ರೆಯಲ್ಲಿ ಉಲ್ಲೇಖಿಸಲ್ಪಡುತ್ತದೆಯೋ ಹಾಗೆಯೇ ಸ್ತ್ರೀವಾದೀ ಸಾಹಿತ್ಯವನ್ನು ಪ್ರೋತ್ಸಾಹಿಸುವುದರೊಂದಿಗೆ, ಅನೇಕಾನೇಕ ಲೇಖಕಿಯರನ್ನು ಹುಟ್ಟಿಸಿದ, ಬೆಳೆಸಿದ, ಬೆಂಬಲಿಸಿದ, ಪ್ರಚಾರಕ್ಕೆ ತಂದ, ಈ ಕರ್ನಾಟಕ ಲೇಖಕಿಯರ ಸಂಘವನ್ನೂ, ಕನ್ನಡ

ಸಾಹಿತ್ಯ ಚರಿತ್ರೆಯಲ್ಲಿ ದಾಖಲಿಸುವುದು ಅತ್ಯಂತ ಅವಶ್ಯಕವಾಗಿದೆ. ಈ ಸಂಘ, ವಿಜಯಾ ದಬ್ಬೆ, ಚಿ.ನ.ಮಂಗಳಾ, ಭಾನು ಮುಷ್ತಾಕ್, ಬಿ.ಎನ್. ಸುಮಿತ್ರಾ ಬಾಯಿ, ಎನ್. ಗಾಯತ್ರಿ, ನೇಮಿಚಂದ್ರ, ಶಶಿಕಲಾ ವೀರಯ್ಯ ಸ್ವಾಮಿ, ಸ.ಉಷ, ಬಿ.ಟಿ.ಲಲಿತಾ ನಾಯಕ್, ಡಾ.ವಿಜಯಾ ಸುಬ್ಬರಾಜ್, ಪ್ರತಿಭಾ ನಂದಕುಮಾರ್, ಸಾರಾ ಅಬೂಬಕರ್, ವೈದೇಹಿ, ವೀಣಾ ಶಾಂತೇಶ್ವರ, ಡಾ.ವಿಜಯಾ, ತೇಜಸ್ವಿನಿ ನಿರಂಜನ, ಗಾಯತ್ರಿ ನಾವಡ, ಮುಂತಾದ ಹೊಸ ಆಲೋಚನೆಯ ಲೇಖಕಿಯರ ಕೃತಿ-ಕಾರ್ಯಗಳಿಗೆ, ತುಂಬು ವಿಶ್ವಾಸದಿಂದ ಬೆಂಬಲ ನೀಡಿದೆ, ಸಂಘಕ್ಕೆ ಆಹ್ವಾನಿಸಿ ಬೆನ್ನು ತಟ್ಟಿದೆ. ಶಾಂತಾ ನಾಗರಾಜ್, ಪದ್ಮಾ ಗುರುರಾಜ, ಕುಲಶೇಖರಿ, ಶಾರದೆ, ಉಷಾ ಪಿ.ರೈ ಕೆ.ಎಂ.ವಿಜಯಲಕ್ಷ್ಮಿ, ಡಾ.ಕೆ.ಆರ್ .ಸಂಧ್ಯಾರೆಡ್ಡಿ. ಮುಂತಾದವರು ಸಂಘದ ಮೂಲಕ ಬೆಳೆದಿದ್ದಾರೆ, ಬೆಳಕಿಗೆ ಬಂದಿದ್ದಾರೆ. ಇನ್ನಿತರ ಅನೇಕಾನೇಕ (ಬಹಳ ದೊಡ್ಡ ಪಟ್ಟಿಯಾಗುವಷ್ಟು) ಲೇಖಕಿಯರು, ಒಂದಲ್ಲ ಒಂದು ರೀತಿಯಲ್ಲಿ ಈ ಸಂಘದಿಂದ ಪ್ರೋತ್ಸಾಹ ಮತ್ತು ಪ್ರಯೋಜನ ಪಡೆದಿದ್ದಾರೆ.

ಸ್ತ್ರೀವಾದೀ ಸಂಘಟನೆಗಳು : ಉತ್ತರ ಕರ್ನಾಟಕ ಲೇಖಕಿಯರ ಸಂಘ, ಅದರ ನಂತರ ಮಂಗಳೂರಿನ ಕರಾವಳಿ ಲೇಖಕಿಯರ ಸಂಘಗಳು, ಸ್ತ್ರೀವಾದದ ನಿಲುವಿನಲ್ಲಿ ಕೃತಿಗಳನ್ನು ರಚಿಸುವುದಕ್ಕೆ ಬೆಂಬಲ ನೀಡಿದವು ಈಗಲೂ ನೀಡುತ್ತಿವೆ. ಚಿ.ನಾ.ಮಂಗಳಾರವರ ನೇತೃತ್ವದಲ್ಲಿ, ಎನ್.ಎಂ.ಕೆ.ಆರ್.ವಿ.ಕಾಲೇಜಿನಲ್ಲಿ ಆರಂಭಿಸಲಾದ 'ಶಾಶ್ವತಿ'ಯಲ್ಲಿ, ಮಹಿಳೆಯರಿಂದ ರಚಿತವಾದ ಎಲ್ಲ ವಿಧದ ಕೃತಿಗಳನ್ನು ಸಂಗ್ರಹಿಸುವುದರ ಜೊತೆಗೆ, ಕರ್ನಾಟಕದ ಎಲ್ಲ ಆಧುನಿಕ ಲೇಖಕಿಯರ ಕೃತಿಗಳನ್ನು ಸಂಗ್ರಹಿಸತೊಡಗಿದ್ದರಿಂದ, ಮತ್ತು ಕನ್ನಡದ ಹಿರಿ-ಕಿರಿಯ ಎಲ್ಲ ಲೇಖಕಿಯರ ಪರಿಚಯಾತ್ಮಕ ಪುಸ್ತಕವನ್ನು ಹೊರತಂದಿದ್ದು, ಮಹಿಳಾ ಸಾಹಿತ್ಯ ಪರಂಪರೆಯನ್ನು ಅಭ್ಯಸಿಸುವವರಿಗೆ ಆಕರಗಳನ್ನು ಒದಗಿಸುವ ಏರ್ಪಾಡು ಮಾಡಿದಂತಾಗಿದೆ. ೧೯೭೮-೭೯ರಲ್ಲಿ, ಮೈಸೂರಿನಲ್ಲಿ ಸ್ಥಾಪನೆಗೊಂಡ 'ಸಮತಾ' ಎನ್ನುವ ಪ್ರಗತಿಪರ ಮಹಿಳಾ ವೇದಿಕೆ, ಸ್ತ್ರೀ ವಿಮೋಚನಾ ಪರವಾದ ಹೋರಾಟದಲ್ಲಿ ತೊಡಗಿಸಿಕೊಳ್ಳುವುದರ ಜೊತೆಗೆ ಮಹಿಳಾವಾದಕ್ಕೆ ಸಂಬಂಧಿಸಿದ ಕೆಲವು ಕೃತಿಗಳನ್ನು ಪ್ರಕಟಿಸಿದೆ. ಸ್ತ್ರೀವಾದ ಮತ್ತು ಅದರ ಪ್ರಸ್ತುತತೆ, ಅರ್ಥ, ಮೂಲ ಆಶಯ, ಸ್ತ್ರೀವಾದದ ಅಗತ್ಯ, ಸಮಾನತೆಯ ಅರ್ಥ, ಸಮಾಜದಲ್ಲಿ ಇರುವ, ಬಳಸಲಾಗುವ ಕೆಲವು ಪದಗಳನ್ನು ಪ್ರಯತ್ನಪೂರ್ವಕವಾಗಿ ಬದಲಾವಣೆ ಮಾಡ ಬೇಕಾದ ಅಗತ್ಯ ಇತ್ಯಾದಿ ಹಲವಾರು ಅಂಶಗಳ ಬಗ್ಗೆ ಬಹಳ ಸರಳವಾಗಿ, ಸಾಮಾನ್ಯರಿಗೂ ಅರ್ಥವಾಗುವಂತೆ ಸಣ್ಣ ಸಣ್ಣ ಪುಸ್ತಕಗಳನ್ನು ಇದು ಪ್ರಕಟಿಸಿತು. ನಾಟಕ, ಚಲನಚಿತ್ರ ಪ್ರದರ್ಶನ, ಭಿತ್ತಿ ಚಿತ್ರಪ್ರದರ್ಶನಗಳ ಮೂಲಕವೂ ಜನರಿಗೆ ಜಾಗೃತಿ ಮೂಡಿಸುವ ಕೆಲಸ ಮಾಡಿದೆ ಇದು. ಸ್ತ್ರೀಯರಿಗೆ ಪ್ರವೇಶ ನಿಷಿದ್ಧವಿದ್ದ ದೇವಾಲಯವಾದ ತಮಿಳುನಾಡಿನ ಕೊಂಗುಳಿ ಬೆಟ್ಟಕ್ಕೆ

೧೯೭೯ರಲ್ಲಿ, ಸಮತಾದ ಸದಸ್ಯೆಯರು ಭೇಟಿ ನೀಡಿದರು. "ಇನ್ನೆರಡು ವರ್ಷಗಳಲ್ಲಿ ನೀವು ಕಲ್ಲಾಗುತ್ತಿರಿ, ಸಾಯುತ್ತೀರಿ" ಎನ್ನುವಂಥ ಬೆದರಿಕೆಗಳಿಗೆಲ್ಲ ಬಗ್ಗದೆ, ಈವರೆಗೆ ಈ ಎಲ್ಲ ಮಾತುಗಳೂ ಸುಳ್ಳಾದುದನ್ನು ಸ್ಪಷ್ಟಪಡಿಸಿ ಹೆಣ್ಣಿನ ಧೈರ್ಯ ಹೆಚ್ಚಿಸಿದ್ದಾರೆ. ಈ ಮೂಲಕ "ದೇವರಲ್ಲಿ, ಗಂಡು ಹೆಣ್ಣಿನ ಭೇದವಿಲ್ಲ" ಎಂಬುದನ್ನೂ ಈ ಸಂಘಟನೆ ತೋರಿಸಿ ಕೊಟ್ಟಿದೆ. ಇತಿಹಾಸದಲ್ಲಿ ಉಲ್ಲೇಖಿಸಬಹುದಾದ ಸಂಘಗಳಲ್ಲಿ ಇದೂ ಪ್ರಮುಖವಾದುದು. ಬೆಂಗಳೂರಿನಲ್ಲಿ (೧೯೮೦ರಲ್ಲಿ) ವಿದೇಶೀಯ ನೆರವಿನಿಂದ ಆರಂಭಗೊಂಡ ವಿಮೋಚನಾ, ವಿಜಿಲ್ ಇಂಡಿಯಾ ಮೂವ್ ಮೆಂಟ್ (೧೯೭೭);. ವುಮೆನ್ಸ್ ಇನ್‌ಸ್ಟಿಟ್ಯೂಟ್ ಫಾರ್ ನ್ಯೂ ಅವೇರ್ ನೆಸ್, ಮಂಗಳೂರು; ಮಧುಗಿರಿಯ Womens Liberation and Rehabilitation Society(WLARS); joint Womens Programme; ಮಾರ್ಕ್ಸ್‌ವಾದಿ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಜನ್ಮ ತಾಳಿದ "ದುಡಿಯುವ ಮಹಿಳೆಯರ ಸಮನ್ವಯ ಸಮಿತಿ"; ೧೯೮೧ಕ್ಕೂ ಮುನ್ನ ಆರಂಭಗೊಂಡಿದ್ದ 'ಸ್ತ್ರೀ ಜಾಗೃತಿ, 'ಸ್ತ್ರೀ ಶಕ್ತಿ ಸಂಘಟನೆ'; ಆ ನಂತರ ಸ್ಥಾಪಿತವಾದ "ಜನವಾದಿ ಮಹಿಳಾ ಸಂಘಟನೆ", ೧೯೮೫ರಿಂದ ಕಾರ್ಯಾರಂಭ ಮಾಡಿದ, "ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ" ; ಆದಾದ ಮೇಲೆ, ಮಾನಿನಿ, ಮಹಿಳಾ ಸಾಂಸ್ಕೃತಿಕ ಸಮಿತಿ, ಮಹಿಳಾ ಸಮುಖ್ಯಾ, ಮೊದಲಾದ ಕರ್ನಾಟಕದಲ್ಲಿನ ಸ್ತ್ರೀ ಸಂಘಟನೆಗಳು, ಸ್ತ್ರೀ ವಿಮೋಚನೆಗಾಗಿ, ಸಮಾಜದಲ್ಲಿ ಸಮಾನತೆಯನ್ನು ತರುವುದಕ್ಕಾಗಿ ಮಾಡಿದ ಪ್ರಯತ್ನಗಳು ಉಲ್ಲೇಖನೀಯ. ಈ ಸಂಘಟನೆಗಳು, ಸಾಹಿತ್ಯಕ್ಕೆ ಪೂರಕವಾಗಿ ಕೆಲಸ ಮಾಡಿವೆ. ಸಾಹಿತಿಗಳಿಗೆ ಪ್ರೇರಣೆ ನೀಡಿವೆ. ಇವು ಜಾಗೃತಿ ಮೂಡಿಸುವಂಥ ಕೆಲಸಗಳನ್ನೂ, ಒತ್ತಾಯ ಪೂರ್ವಕ ಧರಣಿಗಳನ್ನೂ ವರದಕ್ಷಿಣೆ ಸಾವು, ಬಲಾತ್ಕಾರ ಕಾನೂನು, ಗರ್ಭನಿರೋಧಕ ಚುಚ್ಚು ಮದ್ದುಗಳು, ಸ್ತ್ರೀ ಭ್ರೂಣಹತ್ಯೆ, ಪೋಲಿಕೀಟಲೆ, ಸಮಾನ ನಾಗರಿಕ ಸಂಹಿತೆ, ಇತ್ಯಾದಿ ವಿಷಯಗಳನ್ನು ಕೈಗೊಂಡು ಹೋರಾಟ ನಡೆಸಿದುವು. ಅಲ್ಲದೆ, ಒಂದಲ್ಲ ಒಂದು ರೀತಿಯ ಪತ್ರಿಕೆ, ಪುಸ್ತಕಗಳನ್ನು ಪ್ರಕಟಿಸಿ, ಎಲ್ಲ ಸ್ತರದ ಲೇಖಕ ಲೇಖಕಿಯರನ್ನು ಆಲೋಚನೆಗೆ ಒಳಪಡಿಸುವಲ್ಲಿ, ಮತ್ತು ಸ್ತ್ರೀವಾದದ ಅಂಶಗಳು ಅವರ ಸಾಹಿತ್ಯದಲ್ಲಿ ಬರುವಂತೆ ಮಾಡುವಲ್ಲಿ ನೇರವಾಗಿಯೊ, ಇಲ್ಲವೆ ಪರೋಕ್ಷವಾಗಿಯೋ ಪ್ರಚೋದನೆ ನೀಡಿವೆ. ಎರಡು ದಶಕಗಳ ಹಿಂದೆ ಆರಂಭಗೊಂಡ, 'ಸ್ತ್ರೀಲೇಖ' ಎಂಬ ಸಂಸ್ಥೆ, ಮಹಿಳಾ ಸಾಹಿತ್ಯ, ಅವರ ಅನುಭವ, ದೃಷ್ಟಿಕೋನ, ಹಾಗೂ ಬರವಣಿಗೆಗಳನ್ನು ಹೆಚ್ಚು ಬೆಳಕಿಗೆ ತರುವ ಪ್ರಯತ್ನದಲ್ಲಿ, ಹೆಂಗಸರಿಂದ ಹೆಂಗಸರಿಗಾಗಿಯೇ ಬರೆದ ಪುಸ್ತಕಗಳ ಪ್ರೋತ್ಸಾಹ, ಪ್ರಕಾಶನ ಮತ್ತು ಮಾರಾಟಕ್ಕಾಗಿ ಇರುವಂತಹ ಒಂದು ಸ್ತ್ರೀ ಸಂಸ್ಥೆಯಾಗಿದೆ.

ಮಹಿಳೆಯರು ತಂತಮ್ಮ ಕ್ಷೇತ್ರಗಳಲ್ಲಿ, ಅಂದರೆ, ವಿಶ್ವ ವಿದ್ಯಾಲಯಗಳ ಮಟ್ಟದಲ್ಲಿ, ಶಿಕ್ಷಣ ತಜ್ಞೆ ಚಿ.ನ.ಮಂಗಳಾ, ಡಾ.ವಿಜಯಾ ದಬ್ಬೆ, ವೀಣಾ ಶಾಂತೇಶ್ವರ, ರಾಮೇಶ್ವರಿ

ವರ್ಮಾ ಎಚ್.ಎಸ್. ಶ್ರೀಮತಿ ಮುಂತಾದವರು; ಕಾನೂನು ಕ್ಷೇತ್ರದಲ್ಲಿ ಹೇಮಲತಾ ಮಹಿಷಿ, ಪ್ರಮೀಳಾ ನೇಸರ್ಗಿ, ಮುಂತಾದವರು; ಸಂಘಟನೆಯ ಮೂಲಕ ಎಚ್.ಎಸ್. ಪಾರ್ವತಿ, ಶಾಂತಾನಾಗರಾಜ್, ನಾ.ಸ.ರಾವ್, ಜಯಲಕ್ಷ್ಮಿ ಮುಂತಾದವರು; ವೈಜ್ಞಾನಿಕ ಕ್ಷೇತ್ರದಲ್ಲಿ ನೇಮಿಚಂದ್ರ, ನಾಟಕ ಕ್ಷೇತ್ರದಲ್ಲಿ ಗೀತಾ ರಾಮಾನುಜಂ ಮುಂತಾದವರು; ತಮ್ಮ ತಮ್ಮ ಕ್ಷೇತ್ರಗಳಲ್ಲಿ ಮಹಿಳೆಯರ ಸ್ಥಾನಮಾನವನ್ನು ಹೆಚ್ಚಿಸಲು ಮತ್ತು ಸ್ತ್ರೀವಾದವನ್ನು ಜಾರಿಗೆ ತರಲು ಶ್ರಮಿಸಿದವರು.

ದಲಿತ-ಬಂಡಾಯ ಚಳವಳಿ ಮತ್ತು ಸ್ತ್ರೀವಾದಿ ಚಳವಳಿಯಲ್ಲಿನ ಸಾಮ್ಯತೆಗಳು : ಶೋಷಣೆಯ ವಿರುದ್ಧ ದನಿ ಎತ್ತುವುದರಲ್ಲಿ, ಸಮಾಜದ ವ್ಯವಸ್ಥೆಯನ್ನು ಬದಲಾಯಿಸುವುದರಲ್ಲಿ, ಮಾನವತಾವಾದವನ್ನು ಸಾಧಿಸುವುದರಲ್ಲಿ, ಬಂಡಾಯ ಸಾಹಿತ್ಯಕ್ಕೂ, ಸ್ತ್ರೀವಾದೀ ಸಾಹಿತ್ಯಕ್ಕೂ ಹಲವು ಸಾಮ್ಯತೆಗಳಿವೆಯಾದ್ದರಿಂದ, ಅದನ್ನೇ ಆಧಾರವಾಗಿಟ್ಟುಕೊಂಡು ಇಲ್ಲಿ ಉಲ್ಲೇಖಿಸಲಾಗಿದೆ. ಅವೆಂದರೆ;

೧. ಈ ಬಂಡಾಯ ಸಾಹಿತ್ಯ, ಯಜಮಾನ ಸಂಸ್ಕೃತಿಯ ವಿರುದ್ಧ ಕಾವ್ಯವನ್ನು ಖಡ್ಗವಾಗಿಸಿತು. ಪುರುಷ ಪ್ರಧಾನ ಸಂಸ್ಕೃತಿಯ ವಿರುದ್ಧ ಸ್ತ್ರೀವಾದಿ ಸಾಹಿತ್ಯವೂ, ಕಾವ್ಯ ಪ್ರಕಾರವನ್ನೇ ಮೊದಲು ಬಳಸಿಕೊಂಡಿತು. ಖುಶಿಗಾಗಿ, ಆತ್ಮ ತೃಪ್ತಿಗಾಗಿ ಅಥವಾ ಕಾವ್ಯಕ್ಕಾಗಿ ಕಾವ್ಯ, ಎಂದು ಬರೆಯದೆ, ಸಮಾಜದ ಬದಲಾವಣೆಗಾಗಿ ಒಂದು ಪ್ರಯತ್ನವೆಂಬಂತೆ ಆರಂಭದ ಸ್ತ್ರೀವಾದಿ ಕವಯತ್ರಿಯರು ಕಾವ್ಯಗಳನ್ನು ಬರೆದರು.

೨. ದಲಿತ ಬಂಡಾಯ ಚಳವಳಿ ಶೋಷಿತರ ಪರವಾಗಿ ದನಿ ಎತ್ತಿತ್ತು. ಸ್ತ್ರೀವಾದಿ ಚಳವಳಿ ಸ್ತ್ರೀಯರ ಶೋಷಣೆಯ ವಿರುದ್ಧ ಎದ್ದ ದನಿಯಾಗಿದೆ. ಒಂದೆಂದರೆ, ದಲಿತರ ಮತ್ತು ಬಂಡಾಯ ಸಾಹಿತಿಗಳು ನಡೆಸಿದ ಚಳವಳಿ ಪುರೋಹಿತಶಾಹಿ ವಿರುದ್ಧ, ಮೇಲ್ವರ್ಗದವರ ದಬ್ಬಾಳಿಕೆಯ ವಿರುದ್ಧವಿದ್ದುದರಿಂದ ಅವರಿಗೆ, ಲೇಖನಿಯನ್ನು ಖಡ್ಗವಾಗಿಸುವುದು ದುರ್ಲಭವಾಗಿರಲಿಲ್ಲ. ಮತ್ತು ಅದರಿಂದ ಕುಟುಂಬದಲ್ಲಾಗಲೀ, ಸಂಬಂಧಗಳಲ್ಲಾಗಲೀ, ಸ್ವಂತದ ಜೀವನದಲ್ಲಾಗಲೀ ಯಾವುದೇ ವ್ಯತ್ಯಾಸವಾಗುವ ಅಪಾಯವಿರಲಿಲ್ಲ. ಆದರೆ, ಸ್ತ್ರೀವಾದಿ ಸಾಹಿತಿಗಳು, ಮುಳ್ಳಿನ ಮೇಲಿನ ಬಟ್ಟೆ ತೆಗೆದಂತೆ, ತಮ್ಮ ವಾದವನ್ನು ಬಹಳ ಜಾಗರೂಕತೆಯಿಂದ, ತುಂಬ ಎಚ್ಚರಿಕೆಯಿಂದ ಸಮಾಜದ ಮುಂದೆ ಮಂಡಿಸಬೇಕಾಗಿತ್ತು. ಆರಂಭದಲ್ಲಿ ಒಂದಿಷ್ಟು ಅಬ್ಬರವಿದ್ದರೂ, ಸ್ತ್ರೀವಾದವೆಂದರೆ, ಪುರುಷದ್ವೇಷ, ಬಜಾರಿತನ, ಕುಟುಂಬಗಳನ್ನು ಹಾಗೂ ಮನೆಗಳನ್ನು ಒಡೆಯುವ ಮನೆಹಾಳತನ ಎಂದು ಹಲವರು ಅಂದುಕೊಂಡಿದ್ದ ಭಾವನೆಗಳನ್ನು ಅಳಿಸಿ, ಇದು ಆ ಯಾವುದೂ ಅಲ್ಲ, ಬರೀ ಮಾನವತಾವಾದ ಮಾತ್ರ ಎಂಬ ನಿಜವಾದ ಅರ್ಥವನ್ನು ತಿಳಿಸಿಕೊಡಬೇಕಾಗಿತ್ತು.

೩. ಬಂಡಾಯ ಚಳವಳಿಯಲ್ಲಿ ತೊಡಗಿಸಿಕೊಂಡ ಲೇಖಕರು ತಮ್ಮ ಜಾತಿಯ ಜನರ ಮೌಢ್ಯತೆ ಮತ್ತು ಅಸಮಾನತೆಯ ಬಗೆಗೆ ಬಂಡಾಯವೆದ್ದರು. ಸಮಾಜದಲ್ಲಿ

ಆಮೂಲಾಗ್ರ ಬದಲಾವಣೆಗಳನ್ನು ತರುವ ಕನಸುಗಳನ್ನಿಟ್ಟುಕೊಂಡು ಅದನ್ನು ಸಾಹಿತ್ಯದ ಮೂಲಕ ನನಸಾಗಿಸಲು ಬಯಸಿದರು. ಸ್ತ್ರೀವಾದಿ ಸಾಹಿತಿಗಳು ಸ್ತ್ರೀ ಕುಲದ ಮೌಢ್ಯತೆ, ಸಂಪ್ರದಾಯ ಶರಣತೆ, ಮೂಢನಂಬಿಕೆ ಹಾಗೂ ಸ್ತ್ರೀ-ಪುರುಷ ಅಸಮಾನತೆಯ ಬಗೆಗೆ ಪ್ರತಿಭಟನೆ ನಡೆಸಿದ್ದಾರೆ. ಸಮಾಜದಲ್ಲಿ ಸ್ತ್ರೀಗೆ ಸಂಬಂಧಿಸಿದಂತೆ, ಜನರ ಮನೋಭಾವನೆಗಳಲ್ಲಿ, ಆಲೋಚನೆಗಳಲ್ಲಿ, ಸ್ತ್ರೀ ಬದುಕಿನ ಮೌಲ್ಯಗಳಲ್ಲಿ, ಬದಲಾವಣೆಯನ್ನು ತರುವ ಕನಸು ಹೊತ್ತು ಸಾಹಿತ್ಯ ರಚಿಸುತ್ತಿದ್ದಾರೆ.

**ಭಿನ್ನತೆಗಳು :** ದಲಿತ - ಬಂಡಾಯ ಚಳವಳಿಗೂ ಸ್ತ್ರೀವಾದೀ ಚಳವಳಿಗೂ ಕೆಲವು ಭಿನ್ನತೆಗಳೂ ಇವೆ.

೧. ಖಡ್ಗವಾಗಲಿ ಕಾವ್ಯ, ನೋವಿಗೆ ಮಿಡಿವ ಪ್ರಾಣಮಿತ್ರ ಎನ್ನುವುದು ದಲಿತ-ಬಂಡಾಯ ಚಳವಳಿಗಾರರ ಧ್ಯೇಯವಾಗಿತ್ತು. ಚಳವಳಿಯ ವಿಧಾನವಾಗಿತ್ತು. ಇದು ಸ್ತ್ರೀವಾದಿ ಸಾಹಿತ್ಯದ ಮುಖ್ಯ ಧೋರಣೆಯಲ್ಲ. ಖಡ್ಗ ಎತ್ತಲಾಗಲೀ, ಎಬ್ರಲಾ, ಒದೀರ್ಲಾ, ಚಮ್ಮಡ ಸುಲೀರ್ಲಾ ಎನ್ನುವುದಾಗಲೀ ಸ್ತ್ರೀವಾದಿಗಳ ರೀತಿಯಲ್ಲ. ಈ ಮೊದಲೇ ಹೇಳಿದಂತೆ ಬಹಳ ಸೂಕ್ಷ್ಮವಾಗಿ ಪ್ರತಿಭಟಿಸಿ, ಭೇದಿಸಿ, ಜನರ ಮನೋಭಾವನೆಯನ್ನು ಬದಲಾಯಿಸುವುದು ಮುಖ್ಯವಾಗಿತ್ತು.

೨. ಗೌಡ ಕುಲಕರ್ಣಿಗಳು, ಆ ನಂತರ ಬಂಡವಾಳ ಶಾಹಿ ಮತ್ತು ಪುರೋಹಿತಶಾಹಿಗಳು, ದಲಿತ-ಬಂಡಾಯದವರ ವೈರಿಗಳಾಗಿದ್ದರು. ಆದರೆ ಸ್ತ್ರೀವಾದಿಗಳಿಗೆ ಯಾರೂ ವೈರಿಗಳಿರಲಿಲ್ಲ. ಅಥವಾ ಸ್ತ್ರೀಯರನ್ನೂ ಒಳಗೊಂಡಂತೆ ಇಡೀ ಸಮಾಜವೇ ವೈರಿಯಾಗಿತ್ತು ಎನ್ನಬಹುದು. ಇದು, ಹೆಣ್ಣನ್ನು ಕೀಳಾಗಿ ಕಾಣುವ ಇಡೀ ಸಮಾಜ ಮತ್ತು ಸಮಾಜದ ವ್ಯವಸ್ಥೆಯ ವಿರುದ್ಧದ ಹೋರಾಟವಾಗಿತ್ತು.

೩. ಮಾರ್ಕ್ಸ್, ಲೋಹಿಯಾ, ಅಂಬೇಡ್ಕರ್, ಗಾಂಧಿ ಇವರು ದಲಿತ-ಬಂಡಾಯ ಚಳವಳಿಗೆ ಪ್ರೇರಣೆಯಾದರೆ, ಸ್ತ್ರೀವಾದಕ್ಕೆ ಪಾಶ್ಚಾತ್ಯರ ಪ್ರಭಾವ ಪ್ರೇರಣೆಗಳಿವೆ. ಅಲ್ಲಿಯದೇ ತತ್ವಗಳನ್ನು, ಸಿದ್ಧಾಂತಗಳನ್ನು ಇಲ್ಲಿಗೆ ತರದಿದ್ದರೂ, ಅಲ್ಲಿಯ ತತ್ವಗಳ ಆಧಾರಗಳ ಮೇಲೆ, ಈ ನೆಲದಲ್ಲಿ, ಇಲ್ಲಿಯ ಬದುಕಿನಲ್ಲಿ ಇರುವ ತಾರತಮ್ಯಗಳನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಅದಕ್ಕೆ ಹೊಂದುವಂತಹ ಆಲೋಚನೆಗಳನ್ನೂ, ಹೋರಾಟವನ್ನೂ ಮಾಡಿದರು ಎಂದು ಹೇಳಬಹುದು.

**ಸ್ತ್ರೀ ವಾದೀ ಸಾಹಿತ್ಯದ ವ್ಯಾಪಕತೆ :** ಈಗ ಸ್ತ್ರೀವಾದಿ ಸಾಹಿತ್ಯ ಕೃತಿಗಳು ವಿಪುಲವಾಗಿ ಬಂದಿವೆ. "ಪುರುಷರು ರಚಿಸಿರುವಂಥ ಬೃಹತ್ತಾದ ಅಥವಾ ಅತ್ಯಂತ ಮಹತ್ವದ ಫಿಕ್ಷನ್ಸ್ ಹೊರ ಬಂದಿಲ್ಲ, ಅಂದ ಮೇಲೆ ಸ್ತ್ರಿವಾದವನ್ನು ಪ್ರತ್ಯೇಕ ಸಾಹಿತ್ಯಕ ಚಳವಳಿ ಎಂದು ಪರಿಗಣಿಸುವುದು ಹೇಗೆ? ಈ ಚಳವಳಿ ಗೆಲುವು ಸಾಧಿಸಿದೆ ಎನ್ನುವುದು ಹೇಗೆ?" ಎನ್ನುವವರಿದ್ದಾರೆ. ಮತ್ತೆ ಇಲ್ಲಿ ನಾವು, ಪುರುಷ ಕೃತಿಗಳನ್ನು ಹೋಲಿಸಿ ಅದರಂಥದೇ

ಕೃತಿಗಳು ಮಾತ್ರವೇ ಚಳವಳಿಗಳಿಗೆ ಉದಾಹರಣೆಯಾಗಿ ನೀಡಬೇಕೆಂದು ಭಾವಿಸಬೇಕಾಗಿಲ್ಲ. ಎಚ್ .ವಿ.ಸಾಹಿತ್ರಮ್ಮನವರ 'ಸೀತೆ ರಾಮ, ರಾವಣ' ಸಾಕು. ಸಾರಾರವರ 'ವಜ್ರಗಳು', 'ಚಂದ್ರಗಿರಿಯ ತೀರದಲ್ಲಿ', ಸಾಕು. ಅನುಪಮಾ ನಿರಂಜನರವರ 'ಮಾಧವಿ'ಯೂ, ಅರ್ಥಪೂರ್ಣವಾದ ಕೃತಿ. ಇನ್ನು ಕೆಲವು ಕವಯಿತ್ರಿಯರ ಗಟ್ಟಿಯಾದ ಕಾವ್ಯ ಕೃತಿಗಳು, (ಅಮ್ಮನ ಗುಡ್ಡ, ಬಿಂದುಬಿಂದಿಗೆ, 'ನೀರು ಲೋಹದ ಚಿಂತೆ, ಇತಿಗೀತಿಕೆ, ಈ ನೆಲದ ಹಾಡು, ಗುಬ್ಬಿಮನಿ, ಹೆಂಗ ಹೇಳಲೆ ಗೆಳತಿ, ಅಹಾ ಪುರುಷಾಕಾರಂ, ಕಾಡ ನವಿಲಿನ ಹೆಜ್ಜೆ, ಇತ್ಯಾದಿ, ಕಾವ್ಯ ಕೃತಿಗಳು; ಉದ್ಗಮ, ಗಂಡಸರು, ಸ್ವರ್ಗದ ರೆಕ್ಕೆಗಳು, ಒಂದು ಸಂವತ್ಸರದ ಚಕ್ರ, ಮುಂತಾದ ಕಾದಂಬರಿಗಳು, ತಮ್ಮ ಕನಸುಗಳಲ್ಲಿ ನೀವಿದ್ದಿರಿ, ಮತ್ತೆ ಬರೆದ ಕಥೆಗಳು, ಭಾನು ಮುಷ್ತಾಕ್ ರವರ ಕಥೆಗಳು, ಕೆಂಪು ಹೂ, ಚಪ್ಪಲಿಗಳು, ಶೋಧ, ಸಮಾಜ ಶಾಸ್ತ್ರಜ್ಞೆಯ ಟಿಪ್ಪಣಿ, ಮುಂತಾದ ಕಥೆಗಳು, ಸ್ತ್ರಿ ಜಗತ್ತಿನ ಆಲೋಚನೆಗಳನ್ನು ಹೊರ ತೆರೆದಿಟ್ಟು, ಓದುಗರಿಗೆ ಹೊಸ ಅನುಭವವನ್ನೂ, ಹೊಸ ದೃಷ್ಟಿಯನ್ನೂ ಒದಗಿಸಿ ಕೊಟ್ಟಿವೆ. ಇವುಗಳಲ್ಲಿ, ವಕೀಲಿ, ತನ್ಮಯತೆ ಅವೇಶ ಇರುವಂಥ ಕೆಲವು ಕೃತಿಗಳೂ ಇರಬಹುದಾದರೂ, ಉತ್ತಮ ಕೃತಿಗಳೂ ಇವೆ. ಪುರಾಣ ಕಥೆ, ರಾಮಾಯಣ, ಮಹಾಭಾರತದ ಅನೇಕ ಸ್ತ್ರೀ ಪಾತ್ರಗಳನ್ನು ಕೆಡವಿ, ಸ್ತ್ರೀ ದೃಷ್ಟಿಕೋನದಿಂಧ ಅವುಗಳಿಗೆ ಹೊಸ ರೂಪ ಕಟ್ಟಿಕೊಟ್ಟು ರಚಿಸಿದ ಹಲವಾರು ಕೃತಿಗಳು ಹೊರ ಬಂದಿವೆ. ಇವೆಲ್ಲವೂ ಸಮಾಜ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಪ್ರಭಾವ ಬೀರಿದ್ದಿದೆ. ಸ್ತ್ರೀವಾದದ ಪ್ರಭಾವ ಸಾಮಾಜಿಕವಾಗಿ ಎಷ್ಟು ಆಗಿದೆ ಎಂದರೆ, ವಿಧವೆಯರು, ವಿಚ್ಛೇದಿತ ಹುಡುಗಿಯರನ್ನು ವಿವಾಹವಾಗಲು, ವಧು ವರಾನ್ವೇಷಣೆ ಕೇಂದ್ರಗಳಿಗೆ, ಹುಡುಗರು, ಹುಡುಕಿಕೊಂಡು ಬರುತ್ತಾರೆ ಎಂದು ಇಂಥ ಒಂದು ಕೇಂದ್ರವನ್ನು ನಡೆಸುವ ಶ್ರೀಮತಿ ಬಾಲಾಂಬರವರು ಹೇಳುತ್ತಾರೆ. ಮಕ್ಕಳನ್ನು ನೋಡಿಕೊಳ್ಳುವುದು ಹೆಣ್ಣಿನದೇ ಕೆಲಸ, ಅದು ಅವಳದೇ ಜವಾಬ್ದಾರಿ ಎನ್ನುವುದು ಆಳವಾಗಿ ಬೇರೂರಿದ್ದ ನಮ್ಮ ಸಮಾಜದಲ್ಲಿ, ಈಗ ಗಂಡಸರೇ ಕಛೇರಿಗೆ ರಜೆ ಹಾಕಿ ಮೂರು ನಾಲ್ಕು ತಿಂಗಳಿನಷ್ಟು ಎಳೆಯ ಮಗುವನ್ನೂ ನೋಡಿಕೊಳ್ಳುವ ಜವಬ್ದಾರಿಯನ್ನು ತೆಗೆದುಕೊಳ್ಳುತ್ತಿರುವುದಕ್ಕೆ ಅನೇಕ ನಿದರ್ಶನಗಳು, ನಮ್ಮ ಸುತ್ತ ಮುತ್ತಲಲ್ಲಿ ಕಾಣುವಂತಾಗಿದೆ.

ಈಗ ಸ್ತ್ರೀವಾದಿ ಅಂಶಗಳನ್ನು ಒಳಗೊಂಡಂತಹ ಅನೇಕಾನೇಕ ಲೇಖಕಿಯರ ಹಾಗೂ ಲೇಖಕರ ವಿವಿಧ ಪ್ರಕಾರಗಳ ಕೃತಿಗಳು ಹೇರಳವಾಗಿ ರಚಿತವಾಗಿವೆ. ಸ್ತ್ರೀವಾದೀ ಸಾಹಿತ್ಯ ವಿಮರ್ಶೆಯ ಬಗ್ಗೆ, ಮಹಿಳೆಗೆ ಸಂಬಂಧಿಸಿದಂತೆ, ಕಾನೂನು, ಇತಿಹಾಸ, ಸಮಾಜ, ಸಂಸ್ಕೃತಿ, ಜಾನಪದ ಹೀಗೆ ಮಹಿಳೆ ಮತ್ತು ಇತರ ಹಲವಾರು ಕ್ಷೇತ್ರಗಳ ಸಂಬಂಧವಾಗಿ ಸ್ತ್ರೀ ದೃಷ್ಟಿಯಲ್ಲಿ ಬರೆದ ಉತ್ತಮವಾದ ಪುಸ್ತಕಗಳು, ಲೆಕ್ಕಕ್ಕೆ ಸಿಗದಷ್ಟು ಪ್ರಕಟಗೊಂಡಿವೆ. ಗಾಯತ್ರಿ ನಾವಡ ಅವರ ವಿರಚನೆ (ಸ್ತ್ರೀವಾದದ ಬಗ್ಗೆ), ಮಹಿಳೆಯ ಮುನ್ನಡೆ(ಮಾನಿನಿ-೧೯೮೮), ವಿಜಯಾ ದಬ್ಬೆಯವರ "ಮಹಿಳೆ ಸಾಹಿತ್ಯ ಮತ್ತು ಸಮಾಜ", ವಿಮೋಚನೆಯೆಡೆಗೆ,

"ಸಾಹಿತ್ಯ ಮತ್ತು ಮಹಿಳೆ"(೧೯೮೯), ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು, ಬಿ.ಎನ್ .ಸುಮಿತ್ರಾಬಾಯಿ ಮತ್ತು ಎನ್. ಗಾಯತ್ರಿಯವರ 'ಸ್ತ್ರೀವಾದಿ ಪ್ರವೇಶಿಕೆ, ಡಾ.ಕೇಶವ ಶರ್ಮರವರ ಸ್ತ್ರೀವಾದ, ಮನು ಚಕ್ರವರ್ತಿಯವರ 'ಭಾರತೀಯ ಸ್ತ್ರೀವಾದ, ತೇಜಸ್ವಿನಿ ನಿರಂಜನ ಮತ್ತು ಸೀಮಂತಿನಿ ನಿರಂಜನರ "ಸ್ತ್ರೀವಾದಿ ಸಾಹಿತ್ಯ ವಿಮರ್ಶೆ"(೧೯೯೪), ಬಿ.ಎಂ.ರೋಹಿಣಿಯವರ "ಸ್ತ್ರೀ ಸಂವೇದನೆ", "ಸ್ತ್ರೀ ಸಂಸ್ಕೃತಿ ಶಿಕ್ಷಣ", ಡಾ.ಎನ್ .ಗಾಯತ್ರಿಯವರ 'ಮಹಿಳಾ ಚಳವಳಿಯ ಮಜಲುಗಳು', 'ಮಹಿಳೆ-ಬಿಡುಗಡೆಯ ಹಾದಿಯಲ್ಲಿ'(೧೯೯೧), ಪ್ರಫುಲ್ಲಾ ನಾಯಕ್ ರವರು ಅನುವಾದಿಸಿರುವ 'ಮಹಿಳೆಯ ಹಕ್ಕುಗಳು', ಆರ್ .ಇಂದಿರಾರವರ, 'ಭಾರತೀಯ ಸಮಾಜ', ನಿರುಪಮಾರವರ 'ಭಾರತೀಯ ನಾರಿ ನಡೆದು ಬಂದ ದಾರಿ', ಇನ್ನೂ ಹೀಗೆ ಬೇಕಾದಷ್ಟು ಇವೆ. ಇನ್ನೂ ಹೆಚ್ಚು ಹೆಚ್ಚಿನ ಸಂಖ್ಯೆಯಲ್ಲಿ ಪ್ರಕಟಗೊಳ್ಳುತ್ತಲೇ ಇವೆ.

ಸಾಹಿತಿಗಳ, ನಾಟಕಕಾರರದು ಮಾತ್ರವಲ್ಲ, ಹಿರಿಯ ರಾಜಕಾರಣಿಗಳ ಅಭಿನಂದನಾ ಗ್ರಂಥಗಳಲ್ಲಿ ಕೂಡ, ಈಗ, ಮಹಿಳೆಗೆ ಅಥವಾ ಸ್ತ್ರೀವಾದಕ್ಕೆ ಸಂಬಂಧಿಸಿದ ವಿಷಯಗಳನ್ನು, ಇಲ್ಲವೇ ಮಹಿಳೆಯ ಪ್ರಗತಿಗಾಗಿ ಆ ವ್ಯಕ್ತಿ ಮಾಡಿದ ಸಾಧನೆಯ ಕುರಿತಾದ ವಿಷಯವನ್ನು, ಗ್ರಂಥದಲ್ಲಿ ಸೇರಿಸುವುದು ಅಗತ್ಯವೆನ್ನುವಂತಾಗಿದೆ. ಅದರಿಂದ ಪುರುಷರ ಕೃತಿಗಳನ್ನೇ ಉದಾಹರಣೆಯಾಗಿಟ್ಟುಕೊಂಡು ಅದೇ ರೀತಿಯಾದ, ಅದೇ ಮಟ್ಟದ ಮಹಿಳಾ ಸಾಹಿತ್ಯ ಬಂದಿಲ್ಲ ಎಂದಾಗಲೀ, ಇದು ಸಾಹಿತ್ಯದ ಚಳವಳಿ ಅಲ್ಲ ಎಂದಾಗಲೀ ಹೇಳಲಾಗದು. ವಿಶ್ವ ವಿದ್ಯಾಲಯಗಳಲ್ಲಿ ಮಹಿಳಾ ಅಧ್ಯಯನ ಎಂಬ ಒಂದು ಹೊಸ ವಿಷಯವನ್ನು ಬಿ.ಎ.ವಿದ್ಯಾರ್ಥಿಗಳಿಗಾಗಿ ಆರಂಭಿಸಿದ್ದು; ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಿದ್ದು; ಹಿಂದಿನ ಹಾಗೂ ಇಂದಿನ ಕೆಲವು ಲೇಖಕಿಯರ ಕೃತಿಗಳನ್ನು ಮತ್ತು ಕು.ವೆಂ.ಪು. ಕಾರಂತರ ಕೃತಿಗಳನ್ನು ಸ್ತ್ರೀ ದೃಷ್ಟಿಕೋನದಿಂದ ವಿಶ್ಲೇಷಿಸುವುದು; ಅಪಾರ ಸಂಖ್ಯೆಯಲ್ಲಿ ಮಹಿಳೆಯರ ವಿಷಯ ಮತ್ತು ಬರಹಗಳನ್ನು ಪಿಎಚ್.ಡಿ.ಗೆ ವಿಷಯಗಳಾಗಿ ಆಯ್ದುಕೊಳ್ಳುತ್ತಿರುವುದು, ಹಿಂದಿನ ಲೇಖಕಿಯರ ಕೃತಿಗಳನ್ನು ಮರು ಪರಿಶೀಲನೆಗೆ ಒಳಪಡಿಸುತ್ತಿರುವುದು, ಇವೆಲ್ಲವೂ ಸ್ತ್ರೀವಾದ ಸಾಹಿತ್ಯ ಚಳವಳಯ ಉಪ-ಉತ್ಪನ್ನಗಳೇ ಆಗಿವೆ. ಕಲಾ ಪ್ರಕಾರದಲ್ಲೂ ಸ್ತ್ರೀವಾದಿ ಚಿಂತನೆಗೆ ಆದ್ಯತೆ ನೀಡಿ, ಆಯಕ್ಟಿವಿಸ್ಟ್ ನೆಲೆಯಲ್ಲಿ, ಉಗ್ರತೆಯಿಂದ, ಪ್ರಖರತೆಯಿಂದ, ಚಿತ್ರಕಲಾವಿದರು, ತಮ್ಮ ಕಲಾಕೃತಿಗಳನ್ನು ರಚಿಸತೊಡಗಿದ್ದಾರೆ. (ರೇಖಾ ರಾದ್ವಿತೀಯ, ಶೀಲಾಗೌಡ, ಅರ್ಪಣಾಕರ್ ಮುಂತಾದವರ ಕಲಾ ಕೃತಿಗಳು,)

ಇಷ್ಟು ಮಾತ್ರವಲ್ಲ, ಸ್ತ್ರೀಯರ ಸ್ವಾವಲಂಬನೆಗಾಗಿ ಸಶಕ್ತೀಕರಣಕ್ಕಾಗಿ, ಸಬಲೀಕರಣಕ್ಕಾಗಿ, ಸರ್ಕಾರದ ಪ್ರತಿಯೊಂದು ಇಲಾಖೆಯಲ್ಲೂ ಹಾಕಿಕೊಳ್ಳಲಾಗಿರುವ ಯೋಜನೆಗಳನ್ನು, ಎಲ್ಲ ಪತ್ರಿಕೆಗಳಲ್ಲಿ, ನಿಯತಕಾಲಿಕೆಗಳಲ್ಲಿ ಮಹಿಳೆಯ ವಿಷಯಕ್ಕಾಗಿ

ಪ್ರತ್ಯೇಕವಾದ ಒಂದು ಪುರವಣಿಯನ್ನೇ ಹೊರಡಿಸುತ್ತಿರುವುದನ್ನು ಸಾಹಿತ್ಯ ಸಮ್ಮೇಳನಗಳಲ್ಲಿ ಮಹಿಳೆಯರಿಗಾಗಿಯೇ ಒಂದು ಪ್ರತ್ಯೇಕ ಗೋಷ್ಠಿಯ ಅವಕಾಶವನ್ನು ಉದ್ಯೋಗಗಳಲ್ಲಿ ಮೀಸಲಾತಿಯನ್ನು ಗಮನಿಸಿದರೆ ಸ್ತ್ರೀವಾದಿ ಸಾಹಿತ್ಯ ಚಳವಳಿಯ ವ್ಯಾಪಕತೆ ಮತ್ತು ಯಶಸ್ಸುಗಳ ಅರಿವಾಗುತ್ತದೆ. ಮಹಿಳಾ ಕಾನೂನು ಪದವೀಧರೆಯರಿಗೆ ಧನಸಹಾಯ, ಜಾಗೃತಿ, ನವಜೀವನ(ವಿಧವೆಯರಿಗಾಗಿ), ವಿಕಾಸಿನಿ(ಸ್ವಯಂ ಉದ್ಯೋಗ), ಗ್ರಾಮಾಂತರ ಪ್ರದೇಶದ ಹೆಣ್ಣುಮಕ್ಕಳಿಗೆ ಹಾಜರಾತಿ ಶಿಷ್ಯವೇತನ(ಶಾಲೆ ಬಿಡುವುದನ್ನು ತಪ್ಪಿಸಲು), ವಿಧವಾ ವೇತನ, ಸ್ವಾತಂತ್ರ್ಯ ಯೋಧರ ವಿಧವೆಗೆ ಪಿಂಚಣಿ, ಸಾಲ ಯೋಜನೆ, ಹೀಗೆ ಮಹಿಳೆಯರ ಪ್ರಗತಿಗಾಗಿ ಸರ್ಕಾರದಿಂದ ನೂರಾರು ಯೋಜನೆಗಳಾಗಿವೆ. ೨೦೦೧ನೇ ಸಾಲನ್ನು ಮಹಿಳಾ ಸಬಲೀಕರಣ ವರ್ಷವಾಗಿ ಘೋಷಿಸಲಾಗಿದೆ. ಅಕಾಡೆಮಿಗಳ ಕಾರ್ಯಕ್ರಮಗಳು, ಪುಸ್ತಕ ಪ್ರಕಾಶನಗಳು, ರಾಜಕೀಯ, ಶಿಕ್ಷಣ, ಉದ್ಯೋಗ, ಮುಂತಾಗಿ ಎಲ್ಲ ಎಲ್ಲ ಕ್ಷೇತ್ರಗಳಲ್ಲೂ ಮಹಿಳಾ ದೃಷ್ಟಿಕೋನದಿಂದ ನೋಡುವ, ಅಧ್ಯಯನ ಮಾಡುವ, ಪರಿಶೀಲನೆಗೆ ಮುಡಿಪಿಡುವ ಪ್ರಕ್ರಿಯೆ ಬಂದಿರುವುದು, ಜಾನಪದದ ಪ್ರಕಾರಗಳಾದ ಯಕ್ಷಗಾನ, ವೀರಾಗಾಸೆಗಳಂಥ (ಸ್ನೇಹ ವೀರಗಾಸೆ ತಂಡ), ಗಂಡಸರಿಂದಷ್ಟೇ ಸಾಧ್ಯವೆಂದೆನಿಸಿದ್ದ ಕಲಾ ಪ್ರಕಾರಗಳಿಗೂ ಮಹಿಳೆ ಕಾಲಿಡುತ್ತಿರುವುದು, ಸ್ತ್ರೀ ವಾದದ ವ್ಯಾಪಕತೆಯ ಜೊತೆಗೆ ಅದರ ಅಗತ್ಯತೆ, ಅದರ ಸತ್ವ ಮತ್ತು ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುತ್ತವೆ.

ಸ್ತ್ರೀವಾದವನ್ನು ಒಪ್ಪಿಕೊಂಡು, ಆ ದೃಷ್ಟಿಯಲ್ಲಿ ಇಂದಿನ ಬರಹಗಾರರು, ಮಹಿಳೆಯನ್ನು ತಮ್ಮ ಕೃತಿಗಳಲ್ಲಿ ನಿರ್ವಹಿಸುವ ಅಥವಾ ನಡೆಸಿಕೊಳ್ಳುವ ರೀತಿಯನ್ನೇ ಬದಲಾಯಿಸಿದ್ದಾರೆ ಎನ್ನುವುದಕ್ಕೆ, ಇನ್ನೊಂದು ಮಾತು ಹೇಳಬಹುದೇನೋ. ಅ.ನ.ಕೃ.ರವರು ಹೊಸ್ತಿಲು ದಾಟಿದ ಹೆಣ್ಣು ಬರೆದಾಗ, ಹೆಣ್ಣು ಹೊಸ್ತಿಲು ದಾಟಿದರೇ ಅಡ್ಡದಾರಿ ಹಿಡಿದಂತೆ ಎಂಬ ಭಾವನೆ ಬರುವಂತೆ ಚಿತ್ರಿಸಲಾಗುತ್ತಿತ್ತು. ಎಸ್ .ಎಲ್ .ಭೈರಪ್ಪನವರ 'ವಂಶವೃಕ್ಷ', ಕುವೆಂಪುರವರ 'ಕಾನೂರು ಹೆಗ್ಗಡಿತಿ' ಮುಂತಾದ ಕೃತಿಗಳಲ್ಲಿ, ಹೆಣ್ಣು ಎರಡನೇ ಮದುವೆಯಾದರೆ; ಒಂದು ಹೆಣ್ಣು, ಹೆಣ್ಣಿಗೆ ನಿಗದಿಸಿದ ದಾರಿಯಿಂದ ಒಂದಿಷ್ಟು ಬೇರೆಯಾದರೆ; ಅದು ಬಹಳ ದೊಡ್ಡ ತಪ್ಪು ಎಂಬಂತೆ, ಅದಕ್ಕೆ ತಕ್ಕ ಶಿಕ್ಷೆಯಾಗುತ್ತದೆಂಬಂತೆ ಅವಳಿಗೆ, ಬಂಜೆಯ ಅಥವಾ ಘೋರ ಸಾವಿನ ಅನುಭವ ಇತ್ಯಾದಿ, ತೋರಿಸಿ, ಆ ತಪ್ಪಿಗೆ ಶಿಕ್ಷೆ ಅನುಭವಿಸಿಯೇ ತೀರುತ್ತಾಳೆ, ಎಂಬಂತೆ; ಕೃತಿಗಳನ್ನು ರಚಿಸಲಾಗುತ್ತಿತ್ತು. ಈ ಅಂಶವು, ಚಲನ ಚಿತ್ರಗಳು, ಕಿರುತೆರೆಗಳಿಗೂ ಅನ್ವಯಿಸುತ್ತದೆ. ಯಾವ ತಪ್ಪೂ ಮಾಡದ ಹೆಂಡತಿಯನ್ನು, ಗಂಡನಾದವನು ಎಷ್ಟೇ ಹೊಡೆದು ಬೈದು, ಅವಮಾನ ಮಾಡಿದರೂ, ಆ ಹೆಂಡತಿಯೇ ಕೊನೆಯಲ್ಲಿ ತನ್ನದೇ ತಪ್ಪೆಂಬಂತೆ ಆತನ ಕಾಲಿಗೆ ಬಿದ್ದು, ಕ್ಷಮೆ ಕೇಳುವಂತೆ ತೋರಿಸಲಾಗುತ್ತಿದ್ದ 'ಇಬ್ಬನಿ ಕರಗಿತು', ಎಂಬಂತಹ ಚಿತ್ರಗಳಿಗಿಂತ;

ಸ್ತ್ರೀವಾದ ಮತ್ತು ಸ್ತ್ರೀ ವಿಮೋಚನೆಯ ಸರಿಯಾದ ಅರ್ಥ ತಿಳಿಯದೇ, ಎಂಥ ಕೆಟ್ಟ ಹೆಂಗಸೂ ನಡೆದುಕೊಳ್ಳದ ಅತಿರೇಕವರ್ತನೆಯ ಹೆಣ್ಣಿನ ಚಿತ್ರಣದಿಂದ ಈ ವಾದವನ್ನು ಅಪಹಾಸ್ಯ ಮಾಡುವಂತಿರುವ ಧಾರವಾಹಿಗಳಿಗಿಂತ; ಹೆಣ್ಣನ್ನು ಸಮಾನ ದೃಷ್ಟಿಯಿಂದ ನಡೆಸಿಕೊಳ್ಳುವ 'ನಮ್ಮೂರ ಮಂದಾರ ಹೂವೇ', 'ಮತದಾನ' ದಂಥ, ಚಲನಚಿತ್ರಗಳು; 'ಮಾಯಾಮೃಗ', 'ಮನ್ವಂತರ', 'ಗರ್ವ'ದಂಥ ಕಿರುತೆರೆಯ ಧಾರವಾಹಿಗಳು ಹೆಚ್ಚು ಮನ್ನಣೆ ಪಡೆಯುತ್ತಿವೆ. ಅಪಾರ ಜನಮೆಚ್ಚುಗೆಗಳಿಸುತ್ತಿವೆ. ದಿಕ್ಕೆಟ್ಟ ಮಹಿಳೆಯರ ಮನೋಭಾವನೆ ಬದಲಿಸಿ, ಮಾರ್ಗದರ್ಶನ ನೀಡುವ "ಜಾನಕಿ", 'ಅಗ್ನಿ' ಮತ್ತು 'ಕಲ್ಯಾಣಿ', ಮುಂತಾದ ಮಹಿಳಾ ಸಶಕ್ತೀಕರಣಕ್ಕೆ ಬೆಂಬಲ ನೀಡುವ ಕಾರ್ಯಕ್ರಮಗಳನ್ನು ನಡೆಸಲು ದೂರದರ್ಶನದಲ್ಲಿ ಅವಕಾಶ ಮಾಡಿಕೊಡಲಾಗುತ್ತಿದೆ.

ಹೀಗೆ ದಲಿತ ಬಂಡಾಯದೊದಿಗೇ ಸ್ತ್ರೀ ದನಿಯ ಪ್ರಾರಂಭವಾಯಿತಾದರೂ, ಕ್ರಮೇಣ ಇದು ದೊಡ್ಡ ಗುಂಪಾಗಿ, ಪ್ರತ್ಯೇಕವಾದ, ಸ್ವತಂತ್ರವಾದ ಗಟ್ಟಿ ದನಿಯಾಗಿ ಮೊಳಗಿದೆ. ಸ್ತ್ರೀ ದೃಷ್ಟಿಕೋನದಿಂದಲೂ ಸಾಹಿತ್ಯ ರಚಿಸಲು ಪ್ರಚೋದಿಸಿದ, ಸಮಾಜದ ವ್ಯವಸ್ಥೆಯನ್ನು, ದೃಷ್ಟಿಕೋನವನ್ನು ಬದಲಾಯಿಸಿ, ಸಾಹಿತ್ಯ ರಚನೆಯ ಗತಿಯನ್ನೇ ಪರಿವರ್ತಿಸಿದ, ಇಂಥ ಪ್ರಮುಖ ವಿಚಾರಧಾರೆಯುಳ್ಳ, ಸ್ತ್ರೀವಾದವನ್ನು, ಸಾಹಿತ್ಯದ ಒಂದು ಪ್ರಮುಖ ಚಳವಳಿಯಾಗಿಯೇ ಕನ್ನಡ ಸಾಹಿತ್ಯದಲ್ಲಿ ಗುರುತಿಸುವುದು ಅತ್ಯಂತ ಸಮಂಜಸ. ದಲಿತ-ಬಂಡಾಯ ಚಳವಳಿಯ ಒಂದು ಅಂಗವಾಗಿ ಅಲ್ಲ. ಕನ್ನಡ ಸಾಹಿತ್ಯ ಚರಿತ್ರೆಕಾರರು ಇದನ್ನು ಗುರುತಿಸಲೇಬೇಕು.

ಸಮಕಾಲೀನ

## ಸ್ತ್ರೀ ಶಿಕ್ಷಣ : ಅಂದು - ಇಂದಿನ ಎರಡು ಚಿಂತನಾ ಮಾದರಿಗಳು

**ಸಿದ್ಧಪಡಿಸಿದವರು ಡಾ. ಎಂ. ಉಷಾ**

ಈ ಸಂಚಿಕೆಯ ಸಮಕಾಲೀನ ಅಂಕಣವನ್ನು ಸ್ತ್ರೀ ಶಿಕ್ಷಣ ಕುರಿತಂತೆ ರೂಪಿಸಲಾಗಿದೆ. ಮಹಿಳಾ ಸುಧಾರಣೆಯ ಆರಂಭದ ದಿನಗಳಿಂದಲೂ ವಿಶೇಷ ಚರ್ಚೆಗೆ ಒಳಪಟ್ಟ ವಿಚಾರಗಳಲ್ಲಿ ಇದೂ ಒಂದು. ಸ್ತ್ರೀಗೆ ಆಧುನಿಕ ಶಿಕ್ಷಣ ಬೇಕೇ, ಬೇಡವೆ ಎಂಬುದರಿಂದ ಆರಂಭಗೊಂಡು, ಪ್ರತ್ಯೇಕ ಶಾಲೆ, ಪ್ರತ್ಯೇಕ ಪಠ್ಯಕ್ರಮ ಇತ್ಯಾದಿ ಬಗೆ ಬಗೆಯ ಚರ್ಚೆಗಳು ನಡೆದಿವೆ. ಸ್ವತಂತ್ರ ಭಾರತದ ಸಂದರ್ಭದಲ್ಲಿ ಕೂಡ ಸರ್ಕಾರದಿಂದ ನೇಮಕಗೊಂಡ ಎಲ್ಲ ಶಿಕ್ಷಣ ಸಂಬಂಧೀ ಆಯೋಗಗಳು, ಸಮಿತಿಗಳು ಸ್ತ್ರೀ ಶಿಕ್ಷಣವನ್ನೊಂದು ಪ್ರಮುಖ ವಿಷಯವಾಗಿ ಗುರುತಿಸಿ ಚರ್ಚಿಸಿವೆ. ಪ್ರಸ್ತುತದ ಆರ್ಥಿಕ ಸುಧಾರಣೆಯೂ ಕೂಡ ಉನ್ನತ ಶಿಕ್ಷಣದಿಂದ ತನ್ನ ಹೂಡಿಕೆಯನ್ನು ಹಿಂತೆಗೆದುಕೊಳ್ಳುವಾಗಲೂ ಪ್ರಾಥಮಿಕ ಶಿಕ್ಷಣ, ಅದರಲ್ಲಿನ ಹೆಣ್ಣುಮಕ್ಕಳ ಶಿಕ್ಷಣದ ಬಗ್ಗೆ ಆದ್ಯತೆಯನ್ನು ಉಳಿಸಿಕೊಂಡಿದೆ.

ಪ್ರಸ್ತುತ ಅಂಕಣದಲ್ಲಿ ಎರಡು ಲೇಖನಗಳನ್ನು ಬಳಸಲಾಗಿದ್ದು ಅದರಲ್ಲಿ ಒಂದು ಲೇಖನವು ೧೯೪೦ರ ಸುಮಾರಿನಲ್ಲಿ ಜಯಕರ್ನಾಟಕದಲ್ಲಿ ಪ್ರಕಟಗೊಂಡಿದ್ದರ ಪುನರ್ ಮುದ್ರಣವಾಗಿದೆ. ಈ ಹೊತ್ತಿನ ಮಹಿಳಾ ಅಧ್ಯಯನ ಶಿಸ್ತಿನ ಚೌಕಟ್ಟನ್ನು ಹೊಂದಿರುವ ಲೇಖನವು ವಿಷಯದ ದೃಷ್ಟಿಯಿಂದ ಹಾಗೂ ಅಧ್ಯಯನದ ವಿಧಾನದ ದಿಕ್ಕಿನಲ್ಲಿ ಕೂಡ ಗಮನಾರ್ಹವಾಗಿದ್ದು, ಕನ್ನಡದಲ್ಲಿನ ಮಹಿಳಾ ಅಧ್ಯಯನದ ಆದ್ಯ ಲೇಖನಗಳಲ್ಲಿ ಒಂದಾಗಬಹುದಾದ ಸತ್ವವನ್ನು ಹೊಂದಿದೆ. ಲೇಖನದ ಜೊತೆಯಲ್ಲಿ ಪತ್ರಿಕೆಯು ನೀಡಿರುವ ವಿಶೇಷ ಸೂಚನೆಗಳು ಅಂದಿನ ಸಂದರ್ಭವನ್ನು ಗ್ರಹಿಸಲು ಹೆಚ್ಚಿನ ನೆರವನ್ನು ನೀಡುವುದರಿಂದ ಅದನ್ನೂ ಇಲ್ಲಿ ಮುದ್ರಿಸಲಾಗಿದೆ. ನಮಗೆ ದೊರೆತ ಪ್ರತಿಯು ಅಪೂರ್ಣವಾಗಿದ್ದು, ಅದರ ಪೂರ್ಣ ಪಾಠವನ್ನು ಸಮಯಕ್ಕೆ ಸರಿಯಾಗಿ ಒದಗಿಸಿಕೊಳ್ಳಲು ಆಗಿಲ್ಲ. ಹಾಗಾಗಿ ಲೇಖನದ ಕೊನೆಯಲ್ಲಿ (ಆವರಣದಲ್ಲಿನ) ಒಂದು ವಾಕ್ಯವನ್ನು ನಾವೇ ಪೂರ್ಣಗೊಳಿಸಿದ್ದೇವೆ. ಹಾಗೆ ಪೂರ್ಣಗೊಳಿಸುವಾಗ ಲೇಖನದುದ್ದಕ್ಕೂ ವ್ಯಕ್ತವಾಗಿರುವ ಲೇಖಕರ ಅಭಿಪ್ರಾಯವನ್ನು ಗಮನಿಸಿ ಊಹೆಯನ್ನು ಮಾಡಲಾಗಿದೆ. ಇದರಿಂದ ಲೇಖಕರಿಗಾಗಲಿ, ಲೇಖನಕ್ಕಾಗಲಿ ಯಾವುದೇ ಚ್ಯುತಿ ಬರಲಾರದೆಂದು ನಮ್ಮ ನಮ್ರ ನಂಬಿಕೆ.

ಅಂಕಣದ ಇನ್ನೊಂದು ಲೇಖನವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಮಹಿಳಾ ಶಿಕ್ಷಣವನ್ನು ಕುರಿತದ್ದಾಗಿದೆ. ಈ ಲೇಖನವು ಸುಮಾರು ನೂರು ವರ್ಷಗಳ ವ್ಯಾಪ್ತಿಯಲ್ಲಿ ಅಂಕಿ-ಅಂಶಗಳನ್ನು ಕಲೆಹಾಕಿ ಶಿಕ್ಷಣದ ಪ್ರಗತಿಯನ್ನು ಸಾದರಪಡಿಸುತ್ತದೆ. ಸ್ತ್ರೀ ಸಾಕ್ಷರತೆಯಲ್ಲಿ ರಾಜ್ಯಕ್ಕೆ ೨ನೇ ಸ್ಥಾನ ಪಡೆದಿರುವ ಜಿಲ್ಲೆಯ ಸಾಧನೆಯನ್ನು ಅಳೆಯುವ 'ಒಂದು ಮಾದರಿ'ಯನ್ನು ಲೇಖನವು ಬಳಸಿಕೊಂಡಿದೆ. ಈ ಹಿನ್ನೆಲೆಯಲ್ಲಿ 'ಪ್ರಗತಿಯಲ್ಲಿರುವ ಮಹಿಳಾ ಶಿಕ್ಷಣ' ಎಂಬ ನಂಬಿಕೆಯು ಉಳಿದ ಯಾವೆಲ್ಲ ಅಳತೆಗೋಲುಗಳನ್ನು ಹಾದು ಬರಬೇಕಾದ್ದಿದೆ ಎಂಬ ಪ್ರಶ್ನೆಯೂ ಹಾಗೇ ಉಳಿಯುತ್ತದೆ. ಶಿಕ್ಷಣದ ಯಾವ ಕ್ಷೇತ್ರಗಳಲ್ಲಿ ಮಹಿಳೆಗೆ ಪ್ರವೇಶ ಸುಲಭಸಾಧ್ಯವಾಗಿದೆ? ಅತಿ ಹೆಚ್ಚು ಶೈಕ್ಷಣಿಕ ಸಾಧನೆ ತೋರುತ್ತಿರುವ ಸ್ತ್ರೀ ಸಮುದಾಯ ಯಾವುದು? ಇತ್ಯಾದಿ ಸೂಕ್ಷ್ಮವಿಚಾರಗಳ ಹಿನ್ನೆಲೆಯಲ್ಲಿ ಇದು ಸಾದರಗೊಳ್ಳಬೇಕಾಗುತ್ತದೆ.

*ಲೇಖನವನ್ನು ಸಾವಕಾಶವಾಗಿ, ಸಾವಧಾನವಾಗಿ ಓದಿರಿ. ಅಂಕಿ-ಅಂಶಗಳು ಹೇರಳವಾಗಿವೆ ಯೆಂದು ಬೇಸರಿಯಬೇಡಿರಿ, ನಿಧಾನವಾಗಿ ನುರಿಸುತ್ತ ಸಾಗಿರಿ. ಕೊನೆ ಮುಟ್ಟಿದಾಗ ನಿಮ್ಮ ಕಣ್ಣಿಗೆ ಕಟ್ಟೀತು- ನಮ್ಮ ೪ ಕನ್ನಡ ಜಿಲ್ಲೆಗಳಲ್ಲಿಯ ಹೆಣ್ಣುಮಕ್ಕಳ ಶಿಕ್ಷಣದ ಅಧೋಗತಿಯ ವಾಸ್ತವ ಚಿತ್ರ.

# ಮುಂಬೈ ಕರ್ನಾಟಕದಲ್ಲಿ ಸ್ತ್ರೀಯರ ಶಿಕ್ಷಣ

ಶ್ರೀಮನ್‌ಜೆ. ಪಿ. ನಾಯಿಕ, (ಬಿ.ಎ. ಆನರ್ಸ್)
ಮುಂಬಯಿ ಪ್ರಾಂತದ ಪ್ರೌಢಶಿಕ್ಷಣ ಸಮಿತಿ ಸದಸ್ಯರು

"ಮುಂಬೈ ಇಲಾಖೆಯಲ್ಲಿ ದಕ್ಷಿಣ ಭಾಗವು(ಸದರ್ನಡಿವಿಜನ್), ಬಾಲಿಕೆಯರ ಶಿಕ್ಷಣದ ದೃಷ್ಟಿಯಿಂದ ಇಂದಿಗೂ ಸಹ ಎಲ್ಲಕ್ಕಿಂತ ಹಿಂದುಳಿದ ಭಾಗವಾಗಿದೆಯೆಂದು ಹೇಳಬಹುದಾಗಿದೆ." ಮುಂಬೈ ಇಲಾಖೆಯ ಶಿಕ್ಷಣಖಾತೆಯ ಪಂಚವಾರ್ಷಿಕ ವರದಿ.(Quinquennial Report on Public Instruction in the Bombay Province) ೧೯೩೭-೩೭ ಪುಟ.೧೭೦.

ಮುಂಬೈ ಕರ್ನಾಟಕದಲ್ಲಿ ಬಾಲಿಕೆಯರ ಶಿಕ್ಷಣದ ಪ್ರಗತಿಯು ಎಷ್ಟು ಮಂದವಾಗಿದೆ ಎಂಬುದು, ಮತ್ತು ಈ ಪ್ರಗತಿಯು ಇಲಾಖೆಯ ಉಳಿದ ಭಾಗಗಳಿಗಿಂತ ಎಷ್ಟು ಮಟ್ಟಿಗೆ ಹಿಂದೆ ಬಿದ್ದಿದೆ ಎಂಬುದು ಕೆಳಗೆ ಕೊಟ್ಟಿರುವ ಅಂಕೆ ಅಂಶಗಳಿಂದ ತಿಳಿದುಬರುತ್ತದೆ. ಇಡೀ ಇಲಾಖೆಯ ೧/೫ರಷ್ಟು ಮಾತ್ರ ಮುಂಬೈ ಕರ್ನಾಟಕವು ಇರುವುದನ್ನೂ, ಇಡೀ ಇಲಾಖೆಯ ಅಂಖೆಗಳಲ್ಲಿ ಕರ್ನಾಟಕದ ಅಂಕೆಗಳು ನೂರಕ್ಕೆ ಇಪ್ಪತ್ತರಷ್ಟು ಇರದಹೊರತು

* ಶಿಕ್ಷಣಾಂಕದಲ್ಲಿ 'ಪ್ರೌಢಶಿಕ್ಷಣ' ಲೇಖನವನ್ನು ಬರೆದ ಮಾನ್ಯ ಲೇಖಕರೆ ಈ ಲೇಖನವನ್ನು ಬರೆದಿರುವರು; ಅಲ್ಲದೆ ಮುಂಬೈ ಕರ್ನಾಟಕದ ಬೇರೆ (ಶೈಕ್ಷಣಿಕ ಮತ್ತಿತರ) ಸಮಸ್ಯೆಗಳನ್ನು ಕುರಿತು ಮುಂದಿನ ಸಂಚಿಕೆಗಳಲ್ಲಿ ಬರೆಯಲೊಪ್ಪಿರುವರು.
* ನಮ್ಮಲ್ಲಿಯ ಸ್ತ್ರೀ ಶಿಕ್ಷಣದ ದುಃಸ್ಥಿತಿಯ ವಿವರಗಳನ್ನು ಮಾತ್ರ ಕೊಟ್ಟು ತೃಪ್ತರಾಗಿರದೆ, ಅದರ ನಿವಾರಣೋಪಾಯಗಳನ್ನೂ ವಿಸ್ತೃತವಾಗಿ ಚರ್ಚಿಸಿರುವರು. ಸಾರ್ವಜನಿಕರೂ ದೇಶಹಿತ ಚಿಂತಕರೂ ಅವನ್ನು ಚಿತ್ತಗೊಟ್ಟು ಪರಿಶೀಲಿಸಬೇಕು; ಹಾಗೂ ತಮ್ಮ ಸಲಹೆ-ಸೂಚನೆಗಳನ್ನು ಜನತೆಯ ಮುಂದಿಡಬೇಕು.
* ಅಂತೂ ಈ ಸಮಸ್ಯೆಯನ್ನು ದುರ್ಲಕ್ಷಿಸಿದರೆ ಮಹಾಪರಾಧವಾಗುವುದು. ಅದರ ತೀವ್ರತೆಯು ನಮ್ಮ ಮನಸ್ಸನ್ನು ಚುಚ್ಚಲಿ; ನಮ್ಮ ಕರ್ತವ್ಯಬುದ್ಧಿಯನ್ನು ಎಚ್ಚರಿಸಲಿ; ಕೂಡಲೆ ನಮ್ಮನ್ನು ಕಾರ್ಯಕ್ಕೆ ಹಚ್ಚಲಿ.

ನಾವು ಉಳಿದವರ ಸಮಜೋಡಿಯಲ್ಲಿ ಬರಲಾರೆವೆಂಬುದನ್ನೂ ನಾವು ಗಮನದಲ್ಲಿ ಇಟ್ಟುಕೊಂಡಲ್ಲಿ, ಕೆಳಗೆ ಕೊಟ್ಟ ಅಂಕೆ-ಅಂಶದ ಪೂರ್ಣ ಮಹತ್ವವು ನಮಗೆ ತಿಳಿದುಬರುವುದು.

**ಸಾಕ್ಷರತೆ :** ದಕ್ಷಿಣಭಾಗದಲ್ಲಿ ಸ್ತ್ರೀಯರ ಜನಸಂಖ್ಯೆಯು ೧೬,೯೩,೭೪೮ ಇದ್ದು ಅದರಲ್ಲಿ ೨೮,೨೮೫ ಅಥವಾ ನೂರಕ್ಕೆ ೧.೬ ಮಾತ್ರ ಸಾಕ್ಷರರಾಗಿದ್ದಾರೆ. ಗುಜರಾತದಲ್ಲಿ ಈ ಸಾಕ್ಷರತೆಯ ಪ್ರಮಾಣವು ನೂರಕ್ಕೆ ೩.೭ ಮತ್ತು ಮಹಾರಾಷ್ಟ್ರದಲ್ಲಿ ನೂರಕ್ಕೆ ೨.೯ ಇರುವವು. ನಿರಕ್ಷರತೆಯ ಪರಾಮಾವಧಿ ಎಂದರೆ ವಿಜಾಪುರ ಜಿಲ್ಲೆ, ಅಲ್ಲಿ ಸಾಕ್ಷರ ಸ್ತ್ರಿಯ ನೂರಕ್ಕೆ ೦.೮ ಮಾತ್ರ!

ಸಾಕ್ಷರರಾದ ಹೆಣ್ಣು ಮಕ್ಕಳನ್ನು ಜಾತಿ ಕ್ರಮದಲ್ಲಿ ವಿಂಗಡಿಸಿದಲ್ಲಿ

| | | |
|---|---|---|
| ಬ್ರಾಹ್ಮಣ | - | ೮,೭೦೩ |
| ಉಳಿದ ಹಿಂದೂ | - | ೧೨,೯೧೦ |
| ಹರಿಜನ | - | ೫೯೬ |
| ಜೈನ | - | ೬೨೧ |
| ಮುಸಲ್ಮಾನ | - | ೨,೫೭೦ |
| ಕ್ರಿಶ್ಚನ್ | - | ೨,೭೩೪ |
| ಇತರ | - | ೧೫೧ |
| ಒಟ್ಟು | - | ೨೮.೨೮೫ |

ಇದರ ಮೇಲಿಂದ, ಸಾಕ್ಷರರಾದ ಸ್ತ್ರೀಯರಲ್ಲಿ ನೂರಕ್ಕೆ ಶೇಕಡಾ ४೦ ಬ್ರಾಹ್ಮಣ ಮತ್ತು ಕ್ರಿಶ್ಚನ್ ಜಾತಿಯವರು. ಒಟ್ಟು ಜನಸಂಖ್ಯೆಯಲ್ಲಿ ಬ್ರಾಹ್ಮಣ, ಕ್ರಿಶ್ಚಿನರು ಶೇಕಡ ೬ರಷ್ಟು ಮಾತ್ರ! ಜನತೆಯಲ್ಲಿಯ ಸಾಕ್ಷರತೆಯ ಸ್ವರೂಪವನ್ನು ಇದರ ಮೇಲಿಂದ ಊಹಿಸಿಕೊಳ್ಳಬಹುದು.

ಇಂಗ್ಲಿಷ ಬಲ್ಲ ಸ್ತ್ರೀಯರ ಸಂಖ್ಯೆಯು ೨,೪೭೭ ಮಾತ್ರ; ಅಥವಾ ಸಾವಿರಕ್ಕೆ ಒಬ್ಬ ಹೆಣ್ಣು ಮಗಳಿಗೆ ಇಂಗ್ಲಿಷ ಬರುವುದು. ಇಲ್ಲಿ ಕೂಡ ವಿಜಾಪುರ ಜಿಲ್ಲೆಯ ಹೆಚ್ಚಳವನ್ನು ಉಳಿದ ಜಿಲ್ಲೆಗಳು ಮೀರಿಸಿಲ್ಲ! ಈ ಜಿಲ್ಹೆಯಲ್ಲಿ ಒಟ್ಟು ४,೨೮,೬४೧ ಹೆಂಣುಮಕ್ಕಳಿದ್ದು

> **ಗುಜರಾತದಲ್ಲಿ ಸ್ತ್ರೀಯರ ಜನಸಂಖ್ಯೆಯಲ್ಲಿ ಸಾಕ್ಷರತೆಯ ಪ್ರಮಾಣವು ನೂರಕ್ಕೆ ೩.೭, ಮಹಾರಾಷ್ಟ್ರದಲ್ಲಿ ೨.೯, ಕರ್ನಾಟಕದಲ್ಲಿ ಮಾತ್ರ ೧.೬. ವಿಜಾಪುರ ಜಿಲ್ಲೆಯು ನಿರಕ್ಷರತೆಯ ನಡುಮನೆ; ಅಲ್ಲಿಯ ಪ್ರಮಾಣವು ನೂರಕ್ಕೆ ೦.೮ ಮಾತ್ರ!**

ಅವರಲ್ಲಿ ೧೪೯ ಜನರು ಮಾತ್ರ ಇಂಗ್ಲಿಷ ಬಲ್ಲವರು! ಇಡೀ ಇಲಾಖೆಯಲ್ಲಿ ಇಂಗ್ಲಿಷ ಬಲ್ಲ ಹೆಂಗಸರ ಸಂಖ್ಯೆಯು ೫೭,೭೦೨ ಎಂಬುದನ್ನು ನೆನಪುಮಾಡಿಕೊಂಡರೆ ನಮ್ಮ ಹಿನ್ನೆಲೆಯು ನಮಗೆ ಸ್ಪಷ್ಟವಾಗಿ ಗೋಚರಿಸುವುದು.

**ಶಾಲೆಗೆ ಹೋಗುವವರ ಸಂಖ್ಯೆ :** ಮುಂಬೈ ಇಲಾಖೆಯಲ್ಲಿ, ಎಲ್ಲ ತರದ ಶಾಲೆಗಳಿಗೆ ಹೋಗುವ ಬಾಲಿಕೆಯರ ಸಂಖ್ಯೆ ೩,೨೬,೫೭೧ ಅಥವಾ ಸ್ತ್ರೀಯರ ಜನಸಂಖ್ಯೆಯಲ್ಲಿ ನೂರಕ್ಕೆ ೩.೮ ಗುಜರಾತ ಮತ್ತು ಮಹಾರಾಷ್ಟ್ರದ ಪ್ರಮಾಣವು ಇಲಾಖೆಯ ಸರಾಸರಿಗಿಂತ ಹೆಚ್ಚಿಗೆ ಇರುವುದಾದರೆ ಕರ್ನಾಟಕದಲ್ಲಿ ಶಾಲೆಗೆ ಹೋಗುವ ಬಾಲಿಕೆಯರು ೪೬,೮೩೩ ಮಾತ್ರ, ಅಥವಾ ಕರ್ನಾಟಕದ ಒಟ್ಟು ಸ್ತ್ರೀಯರಲ್ಲಿ ನೂರಕ್ಕೆ ೨.೭ ಮಾತ್ರ.

ಮೇಲಿನ ತರಗತಿಗಳಿಗೆ ಹೋಗುವ ಬಾಲಿಕೆಯರ ಸಂಖ್ಯೆಯು ಅತಿ ಸ್ವಲ್ಪ. ಇದು ಇಲಾಖೆಯ ಉಳಿದ ಭಾಗಗಳಿಗೂ ಅನ್ವಯಿಸುವುದು. ಆದರೆ ಈ ವಿರಳತೆಯು, ಉಳಿದ ಭಾಗಗಳಿಗಿಂತ ಕರ್ನಾಟಕದಲ್ಲಿ ಹೆಚ್ಚು. ಕರ್ನಾಟಕದಲ್ಲಿ ಪ್ರಾಥಮಿಕ ಶಾಲೆಗಳಿಗೆ ಹೋಗುವ ಬಾಲಿಕೆಯರ ಸಂಖ್ಯೆಯು ಉಳಿದ ಭಾಗಗಳಿಗಿಂತ ಬಹಳ ಕಡಿಮೆ ಇಲ್ಲದಿದ್ದರೂ ಮೇಲೆ ಹೇಳಿದ ಕಾರಣದ ಸಲುವಾಗಿ, ಇಲ್ಲಿಯ ಸ್ತ್ರಿಯರ ಮಾಧ್ಯಮಿಕ ಮತ್ತು ವಿಶ್ವವಿದ್ಯಾಲಯಿಾನ ಶಿಕ್ಷಣವು ಮಾತ್ರ ಉಳಿದ ಭಾಗಗಳಿಗಿಂತ ಗಾವುದ ಗಾವುದ ಹಿಂದೆ ಬಿದ್ದಿದೆ. ಆದ್ದರಿಂದ, ಪ್ರತಿ ತರಗತಿಯಲ್ಲಿಯೂ ಎಷ್ಟು ಮಂದಿ ವಿದ್ಯಾರ್ಥಿನಿಯರು ಇರುವರೆನ್ನುವ ಬಗ್ಗೆ ಇನ್ನೂ ಹೆಚ್ಚಿನ ವಿವರಗಳನ್ನು ನಾನು ಕೊಡಬಯಸಿದಲ್ಲಿ ಕ್ಷಮೆಯಿರಬೇಕು.

ಒಟ್ಟು ೪೬,೮೩೩ ವಿದ್ಯಾರ್ಥಿನಿಯರಲ್ಲಿ ೪೫,೨೬೩ ಮಂದಿ ಪ್ರಾಥಮಿಕ ಶಾಲೆಗಳಲ್ಲಿ, ೧೫೦೩ ಮಾಧ್ಯಮಿಕ ಶಾಲೆಗಳಲ್ಲಿ ಮತ್ತು ೬೭ ಜನ ವಿದ್ಯಾರ್ಥಿನಿಯರು ಮಾತ್ರ ಕಾಲೇಜುಗಳಲ್ಲಿರುವರು. ಕೆಳಗೆ ಕೊಟ್ಟಿರುವ ಪಟ್ಟಿಯು ನಾವು ಎಷ್ಟು ಮಟ್ಟಿಗೆ ಹಿಂದುಳಿದಿದ್ದೇವೆಂಬುದನ್ನು ವ್ಯಕ್ತಪಡಿಸುವುದು.

| | ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ | ಪ್ರಾಥಮಿಕ ಶಾಲೆಗಳಲ್ಲಿ | ಮಾಧ್ಯಮಿಕ ಶಾಲೆ ಮತ್ತು ಕಾಲೇಜುಗಳಲ್ಲಿ |
|---|---|---|---|
| ಮುಂಬೈ ಭಾಗ | ೯೭೩೬೩ | ೮೩೮೪೯ | ೧೩೫೧೪ |
| ಉತ್ತರ ಭಾಗ | ೮೩೫೩೯ | ೭೪೭೯೨ | ೮೭೪೭ |
| ಮಧ್ಯ ಭಾಗ | ೮೯೬೪೬ | ೮೩೧೫೭ | ೬೪೮೯ |
| ದಕ್ಷಿಣ ಭಾಗ | ೪೬೮೩೩ | ೪೫೨೬೩ | ೧೫೭೦ |

ಕರ್ನಾಟಕದ ಪ್ರಾಥಮಿಕ ಶಾಲೆಗಳ ಪ್ರತಿಯೊಂದು ತರಗತಿಗಳಲ್ಲಿ ಕೆಳಗೆ ತೋರಿಸಿರುವ ಪ್ರಕಾರ ಬಾಲಿಕೆಯರಿರುವರು

| | | |
|---|---|---|
| ಬಿನ್ ಇಯತ್ತೆ | (Infants) | ೨೦,೮೪೩ |
| ಇಯತ್ತೆ | I | ೯,೧೫೦ |
| ,, | II | ೬,೮೮೨ |
| ,, | III | ೪,೨೭೨ |
| ,, | IV | - |
| ,, | V | - |
| ,, | VI | ೬೩೯ |
| ,, | VII | ೧೮ |
| ಒಟ್ಟು | | ೪೫,೨೬೩ |

ಇದು, ೧೬೦೮ ಬಾಲಕಿಯರು ಮಾತ್ರ ಪ್ರಾಥಮಿಕ ಶಾಲೆಯ ಮೇಲ್ತರಗತಿಗಳಲ್ಲಿ ಓದುತ್ತಿರುವರೆಂಬುದನ್ನು ಸಿದ್ಧಪಡಿಸುತ್ತದೆ. ಉಳಿದ ೪೩,೬೫೫ ಮಂದಿ ಬಾಲಿಕೆಯರು ಕೆಲವೊಂದು ದಿನಗಳಲ್ಲಿ ಪುನಃ ನಿರಕ್ಷರತೆಯ ಕಾರ್ಗತ್ತಲೆಯಲ್ಲಿ ಮುಳುಗುವರು! ಅವರ ಸಲುವಾಗಿ ವೆಚ್ಚಮಾಡಿದ ಹಣವು ಕೇವಲ ನಿರರ್ಥಕವಾದ ಹಾಳು!

ಇನ್ನು ಉಚ್ಚಶಾಲೆ(High School) ಮತ್ತು ಕಾಲೇಜುಗಳಲ್ಲಿ ಓದುವ ಹೆಣ್ಣು ಮಕ್ಕಳ ಅಂಕೆಗಳು: ಇಡೀ ಇಲಾಖೆಯಲ್ಲಿ ಉಚ್ಚ ಶಾಲೆಗಳಿಗೆ ಹೋಗುವ ಬಾಲಿಕೆಯರು ೨೨, ೯೯೦ ಇದ್ದರೆ ಕರ್ನಾಟಕದಲ್ಲಿ ೧೫೦೩ ಮಾತ್ರ. ಇಡೀ ಇಲಾಖೆಯಲ್ಲಿ ಕಾಲೇಜುಗಳಿಗೆ ಹೋಗುವ ವಿದ್ಯಾರ್ಥಿನಿಯರ ಸಂಖ್ಯೆ ೧೨೫೪ ಇದ್ದರೆ ಕರ್ನಾಟಕದಲ್ಲಿ ೬೭ ಮಾತ್ರ! ಈ ಅಂಕೆಗಳೇ ಕರ್ನಾಟಕದ ದುಃಸ್ಥಿತಿಯನ್ನು ಬಣ್ಣಿಸುವವು.

ಈ ಸಂದರ್ಭದಲ್ಲಿ ಸರ್ವಸಾಧಾರಣವಾಗಿ ಎಲ್ಲರೂ ಮರೆಯುವ ಇನ್ನೊಂದು ಅಂಶವನ್ನು ನಾನು ಒತ್ತಿ ಹೇಳಬೇಕೆನ್ನುತ್ತೇನೆ. ಕರ್ನಾಟಕದ ಹಾಯಸ್ಕೂಲುಗಳಲ್ಲಿ ಓದುವ ವಿದ್ಯಾರ್ಥಿನಿಯರಲ್ಲಿ ನೂರಕ್ಕೆ ಐವತ್ತರಷ್ಟು ಮಂದಿ ಇಲ್ಲಿ ಅಲ್ಪಸಂಖ್ಯಾತರಾಗಿರುವ ಮರಾಠಿ ಮಾತನಾಡುವವರು! ನಾವು, ಕನ್ನಡಿಗರಾದ ನಾವು, ನಮ್ಮ ಹೆಂಣು ಮಕ್ಕಳ ಉಚ್ಚ ಶಿಕ್ಷಣದ ವಿಷಯದಲ್ಲಿ ಎಷ್ಟು ಅಕ್ಷಮ್ಯವಾದ ಅನಾದರವನ್ನು ತೋರಿಸುತ್ತಿದ್ದೇವೆಂಬುದಕ್ಕೆ ಈ ಅಂಕೆಗಳೇ ಸಾಕ್ಷಿ.

**ಬಾಲಿಕೆಯರ ಶಿಕ್ಷಣಸಂಸ್ಥೆಗಳು :** ಹೆಂಣು ಮಕ್ಕಳ ಶಿಕ್ಷಣ ಸಂಸ್ಥೆಗಳ ಕಡೆಗೆ ಇನ್ನು ತಿರುಗೋಣ. ಇಲಾಖೆಯಲ್ಲಿಯ ಇಂತಹ ೧೬೮೧ ಸಂಸ್ಥೆಗಳಲ್ಲಿ ೩೦೨ ಸಂಸ್ಥೆಗಳು ಕರ್ನಾಟಕದಲ್ಲಿವೆ. ಸಂಸ್ಥೆಗಳ ಅಂಕೆಯ ವಿಷಯದಲ್ಲಿ ನಾವು ಉಳಿದವರಿಗಿಂತ ಬಹಳ ಹಿಂದೆ ಇಲ್ಲ. ಆದರೆ ನಮ್ಮ ಕುಂದುಗಳು ತಿಳಿಯಬೇಕಾದರೆ ಇನ್ನೂ ಹೆಚ್ಚಿನ ವಿಭಜನೆಯನ್ನು ಮಾಡಿನೋಡಬೇಕು.

ಇಡೀ ಇಲಾಖೆಯಲ್ಲಿ ಹೆಣ್ಣು ಮಕ್ಕಳ ಸಲುವಾಗಿ ಒಂದಾದರೂ ಕಾಲೇಜು ಇಲ್ಲ. ಆದ್ದರಿಂದ ಇಲ್ಲಿ ಅದರ ಅಭಾವವಿದ್ದುದಕ್ಕೆ ನಾವೇನು ಬಹಳ ಹಿಂದೆ ಬಿದ್ದವರೆಂದು ತಿಳಿದು ಕೊಳ್ಳಬೇಕಾಗಿಲ್ಲ. ಆದರೆ ಈಗ ಇರುವಂತಹ ಕಾಲೇಜುಗಳಿಗೆ, ನಾವು ಉಳಿದ ಭಾಗಗಳವರು ಕಳಿಸಬೇಕಾಗಿರುವಷ್ಟು ಹೆಣ್ಣು ಮಕ್ಕಳನ್ನು ಕಳಿಸುತ್ತಿಲ್ಲ.

ಎರಡನೆಯದಾಗಿ, ಹಾಯಸ್ಕೂಲುಗಳಿಗೆ ಹೋಗುವ ವಿದ್ಯಾರ್ಥಿನಿಯರ ಸಂಖ್ಯೆಯಲ್ಲಿ ನಮ್ಮವರು ತೀರ ಹಿಂದೆ ಬಿದ್ದಿದ್ದಾರೆ. ಇಲಾಖೆಯಲ್ಲಿ ೪೨ ಹಾಯಸ್ಕೂಲುಗಳು ಹೆಣ್ಣು ಮಕ್ಕಳ ಸಲುವಾಗಿ ಇದ್ದು, ಅವುಗಳಲ್ಲಿ ಒಂದು ಮಾತ್ರ ಸರಕಾರದಿಂದ ನಡೆಸಲ್ಪಡುತ್ತದೆ. ವಿದ್ಯಾರ್ಥಿನಿಯರ ಸಂಖ್ಯೆ ೧೦,೧೮೪ ಇದ್ದು, ಶಾಲೆಗಳನ್ನು ನಡೆಸಿಕೊಂಡು ಹೋಗುವುದಕ್ಕಾಗಿ ೨,೨೦,೭೩೯ ರೂಪಾಯಿಗಳು ಸಾರ್ವಜನಿಕರಿಂದ ಕೊಡಲ್ಪಟ್ಟಿರುತ್ತವೆ. ಆದರೆ ಕರ್ನಾಟಕದಲ್ಲಿ ಹೆಣ್ಣು ಮಕ್ಕಳ ಸಲುವಾಗಿ ಎರಡೇ ಎರಡು ಹಾಯಸ್ಕೂಲುಗಳಿವೆ. ಮತ್ತು ಅವೆರಡೂ ಬೆಳಗಾಂವಿಯಲ್ಲಿ ಶಾಲೆಗೆ ಬರುವ ಬಾಲಕಿಯರ ಸಂಖ್ಯೆ ३೬೭! ಸಾರ್ವಜನಿಕ ಕಾಣಿಕೆಯು ೭३೨३ ರೂ.ಗಳೂ ಮಾತ್ರ. ಅದರಲ್ಲಿಯೂ ೫೭೧೫ ರೂಪಾಯಿಗಳು, ಕ್ರಿಶ್ಚನ್ ಮಿಶನ್ ಒಂದರಿಂದ ಬಂದ ಉದಾರಸಹಾಯ!

ಇಡೀ ಇಲಾಖೆಯಲ್ಲಿ ಮಾಧ್ಯಮಿಕ ಶಾಲೆಗಳು ೨೪ ಮಾತ್ರ; ಇವುಗಳಲ್ಲಿ ಒಟ್ಟು ಶಾಲೆಗೆ ಬರುವವರ ಸಂಖ್ಯೆ ೧೭೫೬. ಈ ಶಾಲೆಗಳ ಸಲುವಾಗಿ ಒಟ್ಟು ೧,೦೪,೧೮೮ ರೂಪಾಯಿಗಳು ವೆಚ್ಚವಾಗಿದ್ದು, ಅದರಲ್ಲಿ ಸಾರ್ವಜನಿಕರು ೧೫,೦೮३ ರೂ. ಗಳನ್ನು ಕೊಟ್ಟರು. ಆದರೆ ಕರ್ನಾಟಕದಲ್ಲಿ ಎರಡೇ ಎರಡು ಮಾಧ್ಯಮಿಕ ಶಾಲೆಗಳು-ಒಟ್ಟು ಶಾಲೆಗೆ ಬರುವವರ ಸಂಖ್ಯೆ ೧೭೬. ಎರಡು ಶಾಲೆಗಳು ಸರಕಾರದಿಂದ ನಡೆಸಲ್ಪಟ್ಟಿವೆ. ಅಂದರೆ ಕರ್ನಾಟಕದಲ್ಲಿ ಈ ಎರಡು ಶಾಲೆಗಳನ್ನು ನಡೆಸಲು ಸಹ ಜನತೆಯ ಸಹಾಯ ಒದಗಲಿಲ್ಲ.

**ಮುಂಬೈ ಇಲಾಖೆಯಲ್ಲಿ ಶಾಲೆಗೆ ಹೋಗುವ ಬಾಲಿಕೆಯರ ಸಂಖ್ಯೆ ಸ್ತ್ರೀಯರ ಜನಸಂಖ್ಯೆಯಲ್ಲಿ ನೂರಕ್ಕೆ ३.೮; ಗುಜರಾತ ಮಹಾರಾಷ್ಟ್ರಗಳು ಇಲಾಖೆಯ ಸರಾಸರಿಯನ್ನು ಮೀರಿವೆ. ಕರ್ನಾಟಕದಲ್ಲಿ ಆ ಪ್ರಮಾಣ ೨.೭ ಮಾತ್ರ**

ಇಡೀ ಇಲಾಖೆಯಲ್ಲಿ ಬಾಲಿಕೆಯರ ಪ್ರಾಥಮಿಕ ಶಾಲೆಗಳು ೧೪೭೮ ಇದ್ದು, ಅವುಗಳಲ್ಲಿ ಶಾಲೆಗೆ ಬರುವವರ ಸಂಖ್ಯೆ. ೧,೭೬,೨೧೭ ಒಟ್ಟು ಖರ್ಚು ३೪,೪೮,೬೮೯ ರೂ.ಗಳಲ್ಲಿ ಸರಕಾರವು ೧೪,೬೦,೯೧೭. ರೂಪಾಯಿಗಳ ಭಾರವನ್ನು ವಹಿಸಿತು. ಈ ಶಾಲೆಗಳಲ್ಲಿ

**ಮುಂಬಯಿ ಕರ್ನಾಟಕದ ಪ್ರಾಥಮಿಕ ಶಾಲೆಗಳಲ್ಲಿ ಓದುತ್ತಿರುವ ಒಟ್ಟು ೪೫,೫೬३ ಹುಡುಗಿಯರಲ್ಲಿ ೧೬೦೮ ಮಾತ್ರ ಮೇಲಿನ ತರಗತಿಗಳಲ್ಲಿ ಓದುತ್ತಿರುವರು. ಉಳಿದವರೆಲ್ಲ ಕೆಲ ದಿನಗಳಲ್ಲಿಯೆ ಮತ್ತೆ ನಿರಕ್ಷರ ಕುಕ್ಷಿಗಳಾಗುವರು!**

೨೯೬ ಮಾತ್ರ ಕರ್ನಾಟಕದಲ್ಲಿದೆ. ಮತ್ತು ವಿದ್ಯಾರ್ಥಿನಿಯರ ಸಂಖ್ಯೆ ೨೭,೨೮೪. ಒಟ್ಟು ಖರ್ಚಾದ ೪,೦೮,೭೧೦ ರೂಪಾಯಿಗಳಲ್ಲಿ ಸರಕಾರವು ೨,೯೨,೫೭೨ ರೂಪಾಯಿಗಳನ್ನು ಕೊಟ್ಟಿತು. ಇದರಿಂದ, ಕರ್ನಾಟಕದಲ್ಲಿ ಸಾರ್ವಜನಿಕರ ಬೆಂಬಲದ ಆಭಾವದ ಮೂಲಕ, ಸರಕಾರವು, ಕರ್ನಾಟಕದ ಸಲುವಾಗಿ, ಉಳಿದ ಭಾಗಗಳಿಗಿಂತ ಹೆಚ್ಚು ಖರ್ಚು ಮಾಡಿತೆಂದು ತಿಳಿದು ಬರುತ್ತದೆ. ಇಲಾಖೆಯ ಸಾರ್ವಜನಿಕರು ನೀಡಿದ ಸಹಾಯವನ್ನು ಕೆಳಗೆ ಕೊಟ್ಟ ಪಟ್ಟಿಯು ತೋರಿಸುವುದು.

| | ಒಬ್ಬ ವಿದ್ಯಾರ್ಥಿನಿಯ ಸಲುವಾಗಿ ಸರಾಸರಿ ಖರ್ಚು | ಈ ಖರ್ಚಿನಲ್ಲಿ ಸರಕಾರವು ಹೊತ್ತದ್ದು |
|---|---|---|
| ಗುಜರಾಥ ಭಾಗ | ೧೬-೭-೦ | ೭-೧೧-೦ |
| ಮಹಾರಾಷ್ಟ್ರ ಭಾಗ | ೧೫-೩-೦ | ೮-೫-೦ |
| ಕರ್ನಾಟಕ ಭಾಗ | ೧೫-೨-೦ | ೧೦-೧೩-೦ |

ಇಲಾಖೆಯಲ್ಲಿ ಸ್ತ್ರೀ ಶಿಕ್ಷಕರ ಸಲುವಾಗಿ ತೆರೆಯಲ್ಪಟ್ಟ ಪ್ರಾಥಮಿಕ ಶೈಕ್ಷಣಿಕ(ಟ್ರೇನಿಂಗ್) ಸಂಸ್ಥೆಗಳು ೧೫. ಇವುಗಳಲ್ಲಿ ನಾಲ್ಕು ಸರಕಾರದಿಂದ ನಡೆಸಲ್ಪಟ್ಟದ್ದು, ಉಳಿದ ೧೧ ಸಾರ್ವಜನಿಕರಿಂದ ನಡೆಸಲ್ಪಟ್ಟಿರುತ್ತವೆ. ಒಟ್ಟು ವಿದ್ಯಾರ್ಥಿನಿಯರ ಸಂಖ್ಯೆ ೮೧೩. ಇವುಗಳಲ್ಲಿ ಒಂದೇ ಒಂದು ಅದೂ ಸರಕಾರದಿಂದ ನಡೆಸಲ್ಪಟ್ಟ ಸಂಸ್ಥೆಯು ಧಾರವಾಡದಲ್ಲಿದೆ. ಅಲ್ಲಿ ವಿದ್ಯಾರ್ಥಿಘಳ ಸಂಖ್ಯೆ ೫೦. ಇಡೀ ಇಲಾಖೆಯಲ್ಲಿ ಸ್ತ್ರೀ ಶಿಕ್ಷಕರ ಶೈಕ್ಷಣಿಕಕ ಸಂಸ್ಥೆಗಳಿಗಾಗಿ ಸಾರ್ವಜನಿಕರಿಂದ ಬಂದ ೪೫೦೦೯ ರೂಪಾಯಿಗಳ ದೇಣಿಗೆಯಲ್ಲಿ ಕರ್ನಾಟಕದಿಂದ ಒಂದು ಪೈ. ಕೂಡ ಇಲ್ಲ!

ಮುಂಬೈ ಪ್ರಾಂತದಲ್ಲಿ ಬಾಲಿಕೆಯರ ಸಲುವಾಗಿ ವಿಶಿಷ್ಟ ರೀತಿಯಿಂದ ನಡೆಸಲ್ಪಟ್ಟ ಸಂಸ್ಥೆಗಳು ૩೦. ಇವು ಮುಖ್ಯತಃ ಪ್ರೌಢವಯಸ್ಸಿಗೆ ಬಂದ ಬಾಲಿಕೆಯರ ಹಾಗೂ ಸ್ತ್ರಿಯರ ಸಲುವಾಗಿ ಇವೆ. ಇವುಗಳಲ್ಲಿ ಸೂಜಿಯ ಕೆಲಸ, ಬಟ್ಟೆಗಳನ್ನು ಸ್ವಚ್ಛಗೊಳಿಸುವುದು, ಹೊಲಿಗೆಯ ಕೆಲಸ, ಕಸೂತಿ, ಇವೇ ಮೊದಲಾದ ಕೈಗೆಲಸದ ಶಿಕ್ಷಣವನ್ನು ಕೊಡುವುದೆ, ಈ ಸಂಸ್ಥೆಗಳ ಉದ್ದೇಶ. ಈ ಸಂಸ್ಥೆಗಳಿಗೆ ಕಲಿಯಲು ಹೋದವರ ಸಂಖ್ಯೆ ೧೯೯೫. ಈ ಸಂಸ್ಥೆಗಳ ಸಲುವಾಗಿ ವೆಚ್ಚವಾದ ೯೪,೭೨೮ ರೂಪಾಯಿಗಳಲ್ಲಿ ಸರಕಾರವು ೧೧,೩೬೩ ರೂಪಾಯಿಗಳನ್ನು ಮಾತ್ರ ಕೊಟ್ಟಿತು. ಆದರೆ ಈ ಸಂಸ್ಥೆಗಳಲ್ಲಿ ಒಂದೂ ಕರ್ನಾಟಕದಲ್ಲಿಲ್ಲ.

**ಪ್ರಗತಿಯ ವೇಗ :** ನಾವು ಎಲ್ಲಾ ದೃಷ್ಟಿಯಿಂದ ಹಿಂದೆ ಬಿದ್ದಿದ್ದರೂ ಈಗ ನಮ್ಮ ಪ್ರಗತಿಯು ವೇಗದಿಂದ ಸಾಗಿ ತುಸು ದಿನಗಳಲ್ಲಿಯೇ ಮಿಕ್ಕ ಭಾಗಗಳಿಗಿಂತ ಮುಂದೆ ಹೋದೇವು ಎಂಬ ಭರವಸೆ ಇದ್ದಿದ್ದರೆ, ನಮಗೆ ಸಮಾಧಾನವಾಗಬಹುದಿತ್ತು. ಆದರೆ ನಮ್ಮ ಮುನ್ನಡೆಯು ಉಳಿದವರಿಗಿಂತ ಬಹಳ ಸಾವಕಾಶದಿಂದ ನಡೆದಿರುತ್ತದೆ. ಈ

ಮಾತಿನ ಸತ್ಯಾಸತ್ಯತೆಯನ್ನು ತಿಳಿಯಬೇಕಾದರೆ ಇಲ್ಲಿಕ ಕೊಟ್ಟಿರುವ ಪಟ್ಟಿಯನ್ನು ನೋಡಿರಿ :

| | ವಿದ್ಯಾರ್ಥಿಯರ ಸಂಖ್ಯೆ | | ಪ್ರಗತಿಯ ಪ್ರಮಾಣ ನೂರಕ್ಕೆ |
|---|---|---|---|
| | ೧೯೩೧,೩೨ | ೧೯೩೬,೩೭ | |
| ಮುಂಬೈ ಭಾಗ | ೬೯,೯೫೧ | ೯೭,೩೬೩ | ೩೮.೫ |
| ಮಧ್ಯ ಭಾಗ | ೬೭,೮೯೨ | ೮೯,೬೪೬ | ೩೨.೩ |
| ಉತ್ತರ ಭಾಗ | ೬೫,೯೧೮ | ೮೩,೫೩೯ | ೨೭.೩ |
| ದಕ್ಷಿಣ ಭಾಗ | ೪೦,೭೭೬ | ೪೬,೮೩೩ | ೧೪.೬ |

ಈ ಮಂದಗತಿಯಿಂದ ನಾವು ಉಳಿದ ಭಾಗದವರನ್ನು ಎಂದಾದರೂ ಸಮಗಟ್ಟುವೆವೆಂಬ ಆಶೆಯು ಸರ್ವಥಾ ಇಲ್ಲ. ಅವರ ಸರಿಮೇಲು ಬರುವದಂತಿರಲಿ, ಅವರ ಮತ್ತು ನಮ್ಮ ನಡುವಿನ ಅಂತರವು ದಿನದಿನಕ್ಕೆ ಹೆಚ್ಚುತ್ತ ಹೋಗಿ, ಕಡೆಗೊಮ್ಮೆ, ಕೆಲವು ವರ್ಷಗಳಲ್ಲಿಯೆ, ಅವರೊಡನೆ ನಮ್ಮನ್ನು ಹೋಲಿಸಿಕೊಳ್ಳುವುದು ಕೂಡ ಅಸಾಧ್ಯಸ್ಥಿತಿಗೆ ಬರುವುದು.

ನಮ್ಮ ಈ ಶೋಚನೀಯ ದುರವಸ್ಥೆಗೆ ಯಾರು ಕಾರಣರು? ಈ ವಿಷಯದಲ್ಲಿ ಹೆಸರನ್ನು ಹಳಿಯುವುದು ಸುಲಭ; ಸರಕಾರವನ್ನು ಬೈಯುವುದು ಮತ್ತೂ ಸುಲಭ. ಈ ಬಗ್ಗೆ ನಡೆಯುವ ಖಾಸಗಿ ಚರ್ಚೆಗಳಲ್ಲಿ, ಈ ಹಿನ್ನಡೆಗೆ ಸರಕಾರವೇ ಸಂಪೂರ್ಣ ಹೊಣೆಯನ್ನು ಹೊರಬೇಕೆಂಬ ಅಭಿಪ್ರಾಯ ಉಳ್ಳವರನ್ನು ನಾನು ಕಂಡಿದ್ದೇನೆ. ಮುಂಬೈ ಸರಕಾರವು ಕರ್ನಾಟಕವನ್ನು ಎಂದಿಗಾದರೂ ಅಲಕ್ಷ್ಯ ಮಾಡಿದೆ ಮತ್ತು ಈ ಅನಾದರವೇ ನಮ್ಮ ದುಃಸ್ಥಿತಿಗೆ ಮೂಲಕಾರಣವೆಂದು ಅವರು ವಾದಿಸುವರು. ಸರಕಾರವು ಹಿಂದೆ ಕರ್ನಾಟಕವನ್ನು ಅಲಕ್ಷ್ಯ ಮಾಡಿತೆಂಬುದನ್ನು ನಾನು ಅಲ್ಲಗಳೆಯುವುದಿಲ್ಲ. ಇದೇ ನಮ್ಮ ಕೀಳ್ದೆಸೆಗೆ ಒಂದು ರೀತಿಯಿಂದ ಕಾರಣವಾಗಿದೆಂಬುದನ್ನೂ ನಾನು ಅಲ್ಲವೆನ್ನುವುದಿಲ್ಲ. ಆದರೆ, ನಮ್ಮ ಈ ಸ್ಥಿತಿಗೆ ಸರಕಾರದ ಅಲಕ್ಷ್ಯವೇ, ಒಂದೇ ಅಲ್ಲದಿದ್ದರೂ ಮುಖ್ಯ ಕಾರಣವೆಂದು ವಾದಿಸುವುದು, ನಿಜಸ್ಥಿತಿಯನ್ನು ವಿರೂಪ ಮಾಡಿ ತೋರಿಸಿದಂತಾಗುವುದು. ಕೆಳಗೆ ಕೊಟ್ಟಿರುವ ಅಂಕೆಗಳನ್ನು ಲಕ್ಷ್ಯಕೊಟ್ಟು ನೋಡಿದಲ್ಲಿ, ಈಗ ಸರಕಾರವು ಹಣದ ಸಹಾಯವನ್ನು, ಕರ್ನಾಟಕಕ್ಕೆ ಸಲ್ಲಬೇಕಾದ ಮಿತಿಯನ್ನು ಅನುಸರಿಸಿಕೊಡುತ್ತಿರುವುದೆಂದು ತಿಳಿದುಬರುವುದು.

| | ಸರಕಾರದಿಂದ ಆದ ಒಟ್ಟು ವೆಚ್ಚ ರೂ. | ಕರ್ನಾಟಕ |
|---|---|---|
| ಕಾಲೇಜು ವಿದ್ಯಾಭ್ಯಾಸ | ೪,೪೪,೭೪೩ | ೧,೦೭,೨೩೪ |
| ಮಾಧ್ಯಮಿಕ | ೧೮,೭೬,೦೫೨ | |
| ಪ್ರಾಥಮಿಕ | ೯೭,೬೬,೮೩೧ | ೧೯,೫೧,೯೬೭ |

ಆದ್ದರಿಂದ ಸರಕಾರವು ಕರ್ನಾಟಕವನ್ನು ಅಲಕ್ಷ್ಯ ಮಾಡಿದೆ ಎಂಬುದಕ್ಕೆ ಈಗ ನಾವು ಮಹತ್ವವನ್ನು ಕೊಡಲಾರೆವು.

ನನ್ನ ದೃಷ್ಟಿಯಿಂದ, ನಮ್ಮ ಹಿನ್ನಡೆಗೆ ಮೂರು ಮುಖ್ಯ ಕಾರಣಗಳು ತೋರುತ್ತವೆ.

೧. ಕರ್ನಾಟಕದಲ್ಲಿ ಶಿಕ್ಷಣದ ಕೆಲಸವು ತಡವಾಗಿ ಪ್ರಾರಂಭವಾದದ್ದು. (ಮಹಾರಾಷ್ಟ್ರದವರು ಪ್ರಾರಂಭಮಾಡಿದ ೪೦ ವರ್ಷಗಳ ನಂತರ ನಾವು ಹೆಜ್ಜೆಯನ್ನಿಟ್ಟೆವು.)

೨. ಜನರಲ್ಲಿ ಶಿಕ್ಷಣದ ಬಗ್ಗೆ ಸಾಮಾನ್ಯತಃ ಇರುವ ಅನಾದರ.

೩. ಈ ಕ್ಷೇತ್ರದಲ್ಲಿ ಖಾಸಗೀ ಪ್ರಯತ್ನಗಳು ಇಲ್ಲದಿರುವಿಕೆ.

ಮೇಲೆ ಕೊಟ್ಟ ಅಂಕೆ ಅಂಶಗಳು ೨ ಮತ್ತು ೩ನೇಯ ಕಾರಣಗಳನ್ನು ಸಿದ್ಧಮಾಡಿ ಕೊಡುತ್ತವೆ.

ಒಂದನೆಯ ಕಾರಣದ ಸಲುವಾಗಿ ನಾವು ಈಗ ಶೋಕಿಸಿ ಫಲವಿಲ್ಲ. ನಾವು ಉಳಿದ ಎರಡು ಕಾರಣಗಳ ಮೇಲೆ ಈಗ ಕೆಲಸ ನಡೆಸಬೇಕು. ಸರಕಾರವು ಕೂಡ ಈಗ ನಮಗೆ ಉದಾರ ಸಹಾಯವನ್ನು ಕೊಡಬೇಕು. ಕರ್ನಾಟಕವನ್ನು ಹಿಂದೆ ಅಲಕ್ಷ್ಯ ಮಾಡಿದ್ದಕ್ಕಾಗಿ ಈಗ ಕರ್ನಾಟಕಕ್ಕೆ ಹೆಚ್ಚಿನ ಸಹಾಯವನ್ನು ಕೊಡುವುದು ಒಂದು ರೀತಿಯಿಂದ ಸಮಂಜಸವಾಗಿ ತೋರುವುದು.

ನಮ್ಮ ಮುಂದಿನ ಕಾರ್ಯವು ಯಾವ ರೂಪದಲ್ಲಿ ಆಗ ಬೇಕೆಂಬ ಬಗ್ಗೆ ನನ್ನ ಸಲಹೆಗಳನ್ನು ಇನ್ನು ಕೊಡಲಿಚ್ಛಿಸುತ್ತೇನೆ.

ಪ್ರಚಾರ : ಜನತೆಗೆ ಮಾರ್ಗದರ್ಶಕರಾದ ಮುಂದಾಳುಗಳು ಈಗ ಸ್ತ್ರೀಶಿಕ್ಷಣದ ಬಗ್ಗೆ ಜನರಲ್ಲಿ ಇರುವ ಅಪ್ರಿಯತೆಯನ್ನು ದೂರ ಮಾಡುವ ಸಲುವಾಗಿ, ಹಾಗೂ ಅವರು ಸ್ತ್ರೀ ಶಿಕ್ಷಣದ ಮಹತ್ವ ಮತ್ತು ಅದರಿಂದ ಆಗಬಹುದಾದ ರಾಷ್ಟ್ರಹಿತವನ್ನು ಮನಗಾಣುವಂತೆ ಪ್ರಯತ್ನ ಮಾಡುವುದು ಅವರ ಮುಖ್ಯ ಕರ್ತವ್ಯವಾಗಿದೆ. "ಒಬ್ಬ ಮನುಷ್ಯನನ್ನು ಸುಶಿಕ್ಷಿತನನ್ನಾಗಿ ಮಾಡುವುದು ಒಬ್ಬ ವ್ಯಕ್ತಿಯನ್ನು ಶಿಕ್ಷಿತನನ್ನಾಗಿ ಮಾಡಿದಂತೆ; ಆದರೆ ಒಬ್ಬ ಸ್ತ್ರೀಯನ್ನು ಶಿಕ್ಷಿತಳನ್ನಾಗಿ ಮಾಡುವುದು ಒಂದು ಇಡೀ ಸಂಸಾರಕ್ಕೆ ವಿದ್ಯೆಯನ್ನು ಕಲಿಸಿದಂತೆ" ಎಂಬ ನಾಣ್ಣುಡಿಯುಂಟು. ಇದರ ಪ್ರತಿ ಅಕ್ಷರವೂ ನಿಜವಿರುತ್ತದೆ. ಒಬ್ಬ ಕಲಿತ ತಾಯಿಯು ತನ್ನ ಮಕ್ಕಳ ಶಿಕ್ಷಣದಲ್ಲಿ, ಕಲಿತ ತಂದೆಗಿಂತಲೂ ಹೆಚ್ಚಿನ ಆಸಕ್ತಿಯನ್ನು ತೋರಿಸುವಳು. ಇದರ ಮಹತ್ವವನ್ನು ತಿಳಿದೇ, ಅನೇಕ ಮಂದಿ ಬರಹಗಾರರು ನಮ್ಮ ಸಣ್ಣ ಹುಡುಗರೆಲ್ಲರನ್ನೂ ಕಲಿತವರನ್ನಾಗಿ ಮಾಡಲು ಸ್ತ್ರೀಯರ ಶಿಕ್ಷಣವೇ ತಕ್ಕ ಹಾದಿ ಎಂದು ಸೂಚಿಸಿರುವರು. ಇದೂ ಅಲ್ಲದೆ, ಸ್ತ್ರೀಯರು ನಮ್ಮ ರೀತಿ ಸಂಪ್ರದಾಯಗಳ ಪಾಲಕರು. ಒಂದು ಜನಾಂಗದ ಸಾಮಾಜಿಕ ಧಾರ್ಮಿಕ ಜೀವನವನ್ನು

ಇಲಾಖೆಯಲ್ಲಿ ಒಟ್ಟು ಹೈಸ್ಕೂಲ್ ವಿದ್ಯಾರ್ಥಿನಿಯರು ೨೪೯೦; ಕರ್ನಾಟಕದಲ್ಲಿ ೧೫೦೩. ಇಲಾಖೆಯಲ್ಲಿ ಒಟ್ಟು ಕಾಲೇಜ್ ವಿದ್ಯಾರ್ಥಿನಿಯರು ೧೨೫೪; ಕರ್ನಾಟಕದಲ್ಲಿ ೬೭. ಕರ್ನಾಟಕದ ಹೈಸ್ಕೂಲ್ ವಿದ್ಯಾರ್ಥಿನಿಯರಲ್ಲಿ ನೂರಕ್ಕೆ ಐವತ್ತು ಇಲ್ಲಿ ಅಲ್ಪ ಸಂಖ್ಯಾತರಾಗಿರುವ ಮತನಾಡುವವರು.

ರೂಪುಗೊಳಿಸುವ ಆಚಾರ ವಿಚಾರಗಳು ಸ್ತ್ರೀಯರನ್ನೇ ಅವಲಂಬಿಸಿರುತ್ತವೆ. ಆದ್ದರಿಂದ ಸ್ತ್ರೀಯರು ಕಲಿತವರಾಗದ ಹೊರತು ಸಾಮಾಜಿಕ ಪುನರ್ವ್ಯವಸ್ಥೆಯು ಶಕ್ಯ ವಾಗದು. ನಮ್ಮ ರಾಷ್ಟ್ರದ ಪುನರ್ರಚನೆಯ ಯೋಜನೆಯಲ್ಲಿ ಹೆಣ್ಣು ಮಕ್ಕಳನ್ನು ಮರೆತಲ್ಲಿ ಆ ಯೋಜನೆಯು ಯಶಸ್ವಿ ಯಾಗಲಾರದು. ಸ್ತ್ರೀಯರು ತಮ್ಮ ಸಹಕಾರವನ್ನು ನೀಡಿದಲ್ಲಿ ಮಾತ್ರ, ಈ ತರದ ಯೋಜನೆಗಳ ವೇಗವು ಇಮ್ಮಡಿ ಯಾದೀತು ಮತ್ತು ಜಯ ವಾದರೂ ನಿಸ್ಸಂಶಯ. ನಮ್ಮ ಜೀವನವನ್ನು ಉನ್ನತಿಗೊಳಿಸುವ ಪ್ರತಿಯೊಂದು ಯೋಜನೆಯಲ್ಲಿಯೂ ಸ್ತ್ರೀ ಶಿಕ್ಷಣದ ಮಹತ್ವವನ್ನು ಒತ್ತಿ ಹೇಳುವದು ಅತ್ಯಾವಶ್ಯಕ.

ದೇಶದ ಹಿತದ ಸಲುವಾಗಿ ದುಡಿಯುವ ಪ್ರತಿಯೊಬ್ಬ ಸಮಾಜ ಸೇವಕನೂ, ಸ್ತ್ರೀಶಿಕ್ಷಣದ ಬಗ್ಗೆ ಪ್ರಚಾರ ಕಾರ್ಯವನ್ನು, ಅದೊಂದು ತನ್ನ ಪವಿತ್ರ ಕರ್ತವ್ಯವೆಂದು ತಿಳಿದು ಮಾಡಬೇಕು. ಪತ್ರಿಕಾ ಪ್ರಪಂಚವು ಅವರ ಸಹಾಯಕ್ಕೆ ಬರಬೇಕು ಮತ್ತು ಎಲ್ಲಾ ವರ್ತಮಾನಪತ್ರಗಳೂ, ಪತ್ರಿಕೆಗಳೂ, ಸ್ತ್ರೀಯರ ಶಿಕ್ಷಣದ ಬಗ್ಗೆ ಬಂದ ಲೇಖನಗಳಿಗೆ ಪ್ರಾಮುಖ್ಯತೆಯನ್ನು ಕೊಡಬೇಕು. ಸಾರ್ವಜನಿಕ ಸಭೆಗಳಲ್ಲಿ ಮತ್ತು ಸಭೆ-ಸಮ್ಮೇಲನಗಳಲ್ಲಿ ಸ್ತ್ರೀಶಿಕ್ಷಣದ ಬಗ್ಗೆ ಹೆಚ್ಚು ಮಹತ್ವ ಕೊಟ್ಟು ಮಾತನಾಡಬೇಕು. ಸ್ತ್ರೀ ಶಿಕ್ಷಣದ ಬಗ್ಗೆ ನಾವು ಮಾಡುವ ಪ್ರಚಾರ ಕಾರ್ಯಗಳನ್ನು ವಿಶೇಷತಃ ಹಳ್ಳಿಗಳಿಗೆ ಒಯ್ಯಲು ಸುಸಂಘಟಿತ ಪ್ರಯತ್ನ ಮಾಡಬೇಕು. ಇಲ್ಲದಿದ್ದರೆ ನಮ್ಮ ಪ್ರಚಾರವು ನಗರಗಳಲ್ಲೇ ಉಳಿಯುವ ಭಯವಿದೆ.

ಸ್ತ್ರೀಶಿಕ್ಷಣಕ್ಕೆ ಸಾರ್ವಜನಿಕರ ಧನಸಹಾಯ ನಮ್ಮಲ್ಲಿಲ್ಲವೇ ಇಲ್ಲ! ಇಲಾಖೆಯಲ್ಲಿ ಒಟ್ಟು ೪೨ ಹೈಸ್ಕೂಲುಗಳಲ್ಲಿ ೧ ಮಾತ್ರ ಸರಕಾರಿ. ಕರ್ನಾಟಕದಲ್ಲಿ ಎರಡೇ ಹೈಸ್ಕೂಲುಗಳು, ಮತ್ತವು ಬೆಳಗಾವಿಯಲ್ಲಿ. ಅವಕ್ಕೆ ಸಾರ್ವಜನಿಕರ ಧನಸಹಾಯ ೭೭೨೩ ರೂ. ಮಾತ್ರ; ಅದರಲ್ಲೂ ೫೭೧೫ ರೂ.ಗಳು ಒಂದು ಕ್ರಿಶ್ಚನ್ ಮಿಶನ್ನಿನ ಉದಾರ ಸಹಾಯ! ಕರ್ನಾಟಕದ ಮಿಡಲ್ ಸ್ಕೂಲುಗಳೆರಡೂ ಸರಕಾರದಿಂದಲೆ ನಡೆಸಲ್ಪಟ್ಟುವು; ಆವಕ್ಕೆ ಜನತೆಯ ಸಹಾಯ ಇಲ್ಲವೇ ಇಲ್ಲ!

ಬಾಲಿಕೆಯರನ್ನು ಮಾಧ್ಯಮಿಕ ಮತ್ತು ಕಾಲೇಜ್ ಶಿಕ್ಷಣಕ್ಕಾಗಿ ಹೆಚ್ಚಾಗಿ ಕಳಿಸಿಕೊಡುವ ಬಗ್ಗೆ ನಾವು ಹೆಚ್ಚಿನ ಪ್ರಾಮುಖ್ಯವನ್ನು ಕೊಡಬೇಕಾಗಿದೆ. ಬಹಳ ಮಂದಿ ಸ್ತ್ರೀ ಶಿಕ್ಷಕಿಯರು ದೊರೆತ ಹೊರತು, ಹೆಣ್ಣು ಮಕ್ಕಳ

ವಿದ್ಯಾಭ್ಯಾಸವು ವಿಸ್ತಾರ ಹೊಂದ ಲಾರದು. ಈಗ ನೂರಕ್ಕೆ ೯೯ ಮಂದಿ ಬಾಲಿಕೆಯರು, ತಮ್ಮ ವಿವಾಹ ವೊಂದನ್ನೇ ಧ್ಯೇಯನ್ನಾಗಿಟ್ಟಕೊಂಡು ಮಾಧ್ಯಮಿಕ ಶಾಲೆ - ಕಾಲೇಜುಗಳನ್ನು ಪ್ರವೇಶಿಸುವರು, ಮತ್ತು ಮುಂದಾದರೂ ಅದೇ ರೀತಿ ಮಾಡುವರು. ಆದ್ದರಿಂದ ನಮ್ಮ ಮಾಧ್ಯಮಿಕ ಶಾಲೆಗಳಲ್ಲಿ ಸಾಕಷ್ಟು ಶಿಕ್ಷಿಕೆಯರು ಬೇಕಾದಲ್ಲಿ, ನಾವು ನೂರಾರು ಬಾಲಿಕೆಯರನ್ನು ಕಾಲೇಜಿಗೆ ಕಳಸಬೇಕಾಗುವುದು. ಹಲವು ಸಾವಿರ ಗಟ್ಟಲೆ ಬಾಲಿಕೆಯರು ಮಾಧ್ಯಮಿಕ ಶಾಲೆಗಳಿಗೆ ಬಾರದ ವಿನಾ, ಬಾಲಿಕೆಯರ ವಿಶಿಷ್ಟ ಸಂಸ್ಥೆಗಳಲ್ಲಿ, ಸಮಾಜಸೇವೆಯ ಸಂಘಗಳಲ್ಲಿ ಮತ್ತು ನಮ್ಮ ಪ್ರಾಥಮಿಕ ಶಾಲೆಗಳಲ್ಲಿ ಸಾಕಷ್ಟು ಸ್ತ್ರೀ ಕಾರ್ಯಕರ್ತ್ರಿಯರು ಸಿಗುವುದಿಲ್ಲ.

ಪ್ರಿಲಿಮಿನರಿ ಸ್ಕೂಲ್ ಲಿವ್ಹಿಂಗ್ ಸರ್ಟಿಫಿಕೇಟ್ ಪರೀಕ್ಷೆಯನ್ನು ಕೊಟ್ಟ ಹೆಣ್ಣುಮಕ್ಕಳು, ನಮ್ಮ ಮುಂದಿನ ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಿಕೆಯರಾಗಲು ಅನರ್ಹರೆಂಬುದನ್ನು ನಾವು ತಿಳಿದಿರಬೇಕು. ಏನಿಲ್ಲೆಂದರೂ ಮ್ಯಾಟ್ರಿಕ್ಯುಲೇಶನ್ ಅಥವಾ ಅದಕ್ಕೆ ಸಮಾನವಾದ ಇತರ ಪರೀಕ್ಷೆಯನ್ನು ಕೊಟ್ಟಂಥ ಹೆಣ್ಣುಮಕ್ಕಳು ಪ್ರಾಥಮಿಕ ಶಾಲೆಗಳಲ್ಲಿ ಶಿಕ್ಷಿಕೆಯರಾಗಬೇಕು. ಇದು ಒಪ್ಪಿಗೆಯಾದಲ್ಲಿ, ನಮ್ಮ ತತ್ಕ್ಷಣದ ಕಾರ್ಯವು, ಬಾಲಿಕೆಯರ ಮಾಧ್ಯಮಿಕ ಶಾಲಾ ಅಭ್ಯಾಸವನ್ನು ವಿಸ್ತರಿಸುವುದಾಗಿರುವುದು; ಇದರಿಂದ ಮುಂದೆ ಪ್ರಾಥಮಿಕ ಶಿಕ್ಷಣವನ್ನೂ ಮತ್ತು ಸಮಾಜಸೇವಾ ಸಂಸ್ಥೆಗಳನ್ನೂ ಹಬ್ಬಿಸುವುದು ಶಕ್ಯವಾಗುವುದು.

ಅನೇಕ ಮಂದಿ ಮಾತಾ-ಪಿತೃಗಳಲ್ಲಿ ತಮ್ಮ ಹುಡುಗಿಯರನ್ನು ಗಂಡುಮಕ್ಕಳು ಹೋಗುವ ಶಾಲೆಗಳಿಗೆ ಕಳಿಸಲು ಇಚ್ಛೆ ಇರುವುದಿಲ್ಲ. ನಮ್ಮ ಪ್ರಚಾರ ಕಾರ್ಯವನ್ನು, ಈ ಅಡ್ಡಿಯನ್ನು ಕಿತ್ತೊಗೆಯಲಿಕ್ಕೆ ವಿನಿಯೋಗಿಸಬೇಕು. ಇಲಾಖೆಯ ಉಳಿದ ಭಾಗಗಳು ಈಗಾಗಲೇ ಈ ಮಾರ್ಗವನ್ನು ಅನುಸರಿಸಿವೆ. ಅಲ್ಲಿ, ೧೯೩೬-೩೭ನೇ ಸಾಲಿನ ಹಿಂದಿನ ೫ ವರುಷಗಳಲ್ಲಿ ಬಾಲಕೆಯರ ಮಾಧ್ಯಮಿಕ ಶಾಲೆಗಳಲ್ಲಿ ವಿದ್ಯಾರ್ಥಿನಿಯರ ಸಂಖ್ಯೆಯ ನೂರಕ್ಕೆ ೫೦ರಂತೆ ಹೆಚ್ಚಾಗಿದ್ದು, ಬಾಲಕರ ಮಾಧ್ಯಮಿಕ ಶಾಲೆಗಳಲ್ಲಿ ಬಾಲಕಿಯರ ಸಂಖ್ಯೆಯು ನೂರಕ್ಕೆ ೧೧೩ರಂತೆ ಹೆಚ್ಚಾಗಿದೆ. ಆದರೆ ಕರ್ನಾಟಕದಲ್ಲಿ ಬಾಲಕರ ಮಾಧ್ಯಮಿಕ ಶಾಲೆಗಳಲ್ಲಿ ಬಾಲಿಕೆಯರ ಸಂಖ್ಯೆಯು ನೂರಕ್ಕೆ ೪೫ರಂತೆ ಮಾತ್ರ ಹೆಚ್ಚಾಗಿದೆ. ಪ್ರಾಥಮಿಕ ಶಾಲೆಗಳಲ್ಲಿ ಬಾಲಕ ಬಾಲಿಕೆಯರು ಒಟ್ಟಿಗೆ ಕಲಿಯಲಿಕ್ಕೆ ಯಾರೂ ಅಡ್ಡಿ ಮಾಡುವುದಿಲ್ಲ. ಆದರೆ ಅಲ್ಲಿ ಕೂಡಾ ಶಾಲೆಗೆ ಬರುವ ಬಾಲಿಕೆಯರ ಸಂಖ್ಯೆಯು ಇದೇ ಶೋಚನೀಯ ಕಥೆಯನ್ನು ಹೇಳುತ್ತದೆಂಬುದಕ್ಕೆ ಈ ಪಟ್ಟಿಯನ್ನು ನೋಡಿ

| | ಬಾಲಿಕೆಯರ ಶಾಲೆಗಳಲ್ಲಿ ಬಾಲಿಕೆಯರ ಸಂಖ್ಯೆಯು ಬೆಳೆದಿರುವ ಪ್ರಮಾಣ. ನೂರಕ್ಕೆ | ಬಾಲಕರ ಶಾಲೆಗಳಲ್ಲಿ ಬಾಲಿಕೆಯರ ಸಂಖ್ಯೆಯು ಬೆಳೆದಿರುವ ಪ್ರಮಾಣ ನೂರಕ್ಕೆ |
|---|---|---|
| ಮುಂಬೈ ಭಾಗ | ೨೩.೮ | ೨೨.೧ |
| ಉತ್ತರ ಭಾಗ | ೨೦.೧ | ೧೨.೧ |
| ಮಧ್ಯ ಭಾಗ | ೨೩.೨ | ೧೨.೨ |
| ದಕ್ಷಿಣ ಭಾಗ | ೧೩.೩ | ೪.೦ |

ಕರ್ನಾಟಕದಲ್ಲಿ ಬಾಲಿಕೆಯರ ಸಲುವಾಗಿ ಪ್ರತ್ಯೇಕ ಮಾಧ್ಯಮಿಕ ಶಾಲೆಯಿಲ್ಲ. ಬಾಲಕರ ಶಾಲೆಗಳಿಗೆ ಬಾಲಿಕೆಯರನ್ನು ಕಳಿಸಲು ನಮ್ಮಲ್ಲಿ ಬಹಳ ಜನರು ಹಿಂದೆಗೆಯುವರು. ಕರ್ನಾಟಕದ ಎಲ್ಲೆಡೆಯಲ್ಲಿಯೂ ಬಾಲಿಕೆಯರ ಸಲುವಾಗಿಯೇ ಪ್ರತ್ಯೇಕ ಉಚ್ಚಶಾಲೆ(High school)ಗಳನ್ನು ತೆರೆಯಲಿಕ್ಕೆ ಅನೇಕ ವರುಷಗಳಾದರೂ ಬೇಕು. ಆದ್ದರಿಂದ ನಮ್ಮ ಸಂಕುಚಿತ ದೃಷ್ಟಿಯನ್ನು ಬದಲಿಸದೆ ಗತ್ಯಂತರವಿಲ್ಲ.

ನಾನು ಇಲ್ಲಿ ಸಹಶಿಕ್ಷಣದ ಪ್ರಶ್ನೆಯನ್ನು ಎತ್ತ ಬಯಸುವುದಿಲ್ಲ. ಸಹಶಿಕ್ಷಣವು ಒಳ್ಳೆಯದೆಂದು ನನ್ನ ವೈಯಕ್ತಿಕ ಅಭಿಪ್ರಾಯವಿದೆ. ಸಹಶಿಕ್ಷಣವು ಕೂಡದೆಂದು ತಮ್ಮ ಮನಃಸಾಕ್ಷಿಯಾಗಿ ನಂಬುವವರು ಕೂಡ ಬಾಲಕ ಬಾಲಿಕೆಯರನ್ನು ಒಂದೇ ಶಾಲೆಗೆ ಕಳಿಸುವುದು ನಿಜಾರ್ಥದಲ್ಲಿ ಸಹಶಿಕ್ಷಣವಾಗಲಾರದೆಂಬುದನ್ನು ಮರೆಯಬಾರದು. ನಮ್ಮ ಶಾಲೆಗಳಲ್ಲಿ ಬಾಲಿಕೆಯರನ್ನು ಬಾಲಕರೊಡನೆ ಕೂಡಗೊಡುವುದಿಲ್ಲ. ಬಾಲಿಕೆಯರ ಸಲುವಾಗಿಯೇ ಪ್ರತ್ಯೇಕ ಕೋಣೆಗಳಿರುತ್ತವೆ. ತರಗತಿಗಳಲ್ಲಿ ಸಹಾ ಅವರು ಬೇರೆ ಕೂಡುತ್ತಾರೆ. ಬಾಲಿಕೆಯರ ಆಟಗಳೇ ಬೇರೆ. ನಿಜಸ್ಥಿತಿಯ ಕಡೆಗೆ ಲಕ್ಷ್ಯಕೊಟ್ಟು ನೋಡಿದರೆ, ವಿದ್ಯಾರ್ಥಿ ಪ್ರಪಂಚದಲ್ಲಿ ಬಾಲಿಕೆಯರದೇ ಒಂದು ಸಣ್ಣ ಒಳಪ್ರಪಂಚವಿರುವುದು ಕಂಡುಬರುತ್ತದೆ. ಈ ಬಗೆಯಲ್ಲಿ ನಡೆಯುವ ಶಿಕ್ಷಣವನ್ನು, "ಸಹಶಿಕ್ಷಣ"ವೆಂದು ಕರೆಯುವುದು ಧೈರ್ಯವೇ ಸರಿ! ಸಹಶಿಕ್ಷಣದ ಕಟ್ಟಾ ವಿರೋಧಿಗಳು ಕೂಡ ಈ ಸ್ಥಿತಿಯಲ್ಲಿರುವ ನಮ್ಮ ಬಾಲಕರ ಶಾಲೆಗಳಿಗೆ ಬಾಲಿಕೆಯರನ್ನು ಕಳಿಸಲು ಅಡ್ಡಿ ಮಾಡಬಾರದು.

ಮಾಧ್ಯಮಿಕ ಶಾಲೆಗಳಿಗೆ ಬಾಲಿಕೆ ಯರನ್ನು ಕಳಿಸಿಕೊಡಲಿಕ್ಕೆ ಇರುವ ಅಡ್ಡಿಯು ಎಷ್ಟು ನಿರಾಧಾರವಾದು ದೆಂಬುದನ್ನು ನಾವು ಒಪ್ಪಿದ ಮೇಲೆ, ಬಾಲಕರು ಓದುವ ಪ್ರಾಥಮಿಕ ಶಾಲೆಗಳಿಗೆ ಬಾಲಿಕೆಯರನ್ನು ಕಳಿಸಿಕೊಡಲಿಕ್ಕೆ ಹಿಂದೆ ಮುಂದೆ ನೋಡುವುದು ಎಷ್ಟು ತಪ್ಪೆಂದು ಹೇಳಬೇಕು? ಈ ಅಗೆಯ ಆತಂಕಗಳನ್ನು ನಾವು ಆದಷ್ಟು ಬೇಗನೆ

**ಕರ್ನಾಟಕದಲ್ಲಿ ಸಾರ್ವಜನಿಕ ಸಹಾಯದ ಅಭಾವದ ಮೂಲಕ, ಸರಕಾರವು ಕರ್ನಾಟಕದ ಸಲುವಾಗಿ ಉಳಿದ ಭಾಗಗಳಿಗಿಂತ ಪ್ರಮಾಣ ಮೀರಿ ಖರ್ಚು ಮಾಡಬೇಕಾಗಿ ಬಂದಿದೆ. ಇಲಾಖೆಯಲ್ಲಿ ಬಾಲಿಕೆಯರ ಪ್ರಾಥಮಿಕ ಶಿಕ್ಷಣದ ಒಟ್ಟು ವೆಚ್ಚ ೩೪,೪೮,೬೦೯ ರೂ. ಅದರಲ್ಲಿ ಸರಕಾರವು ೧೪,೬೦,೯೧೭ರೂ. ಯ ಭಾರವನ್ನು ವಹಿಸಿತು. ಕರ್ನಾಟಕದಲ್ಲಿ ಒಟ್ಟು ವೆಚ್ಚ ೪,೦೮,೬೧೦ ರೂ.; ಅದರಲ್ಲಿ ಸರಕಾರವು ವಹಿಸಿದ್ದು ೨,೯೨,೫೭೨**

ಕಿತ್ತೊಗೆಯಬೇಕು. ಇಲ್ಲದಿದ್ದರೆ, ಬಾಲಿಕೆಯರ ಪ್ರಾಥಮಿಕ ವಿದ್ಯಾಭ್ಯಾಸವೂ, ಕಟ್ಟಕಡೆಗೆ ಅವರ ಉಚ್ಚಶಿಕ್ಷಣವೂ ಬಹಳ ಹಿಂದೆ ಬೀಳುವ ವೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಮೇಲಾಗಿ ಬಾಲಿಕೆಯರ ಸಲುವಾಗಿ ಪ್ರತ್ಯೇಕ ಶಾಲೆ ಕಾಲೇಜುಗಳು ಸಾಕಷ್ಟು ಆಗುವವರೆ ಗಾದರೂ ನಾವು ಈ ಮಾರ್ಗವನ್ನು ಅನುಸರಿಸದೆ ಗತ್ಯಂತರವಿಲ್ಲ. ಸಾಕಷ್ಟು ಇಂತಹ ಶಾಲೆ ಕಾಲೇಜುಗಳು ಆಗಬೇಕಾದರೆ ಅನೇಕ ವರುಷಗಳಾದರೂ ಬೇಕು.

ಬಾಲಕರ ಶಾಲೆಗಳಿಗೆ, ಬಾಲಕೆಯರು ಬಹಳ ಮಂದಿ ಬರಲು ಸಹಕಾರಿಯಾಗುವ ಮತ್ತು ಬೇಗ ಕಾರ್ಯರೂಪಕ್ಕೆ ತರಬಹುದಾದ ಒಂದು ಮಾರ್ಗವನ್ನು ನಾನಿಲ್ಲಿ ಸೂಚಿಸಲಿಚ್ಛಿಸುತ್ತೇನೆ. ನಾವು ಈಗ ನಡೆಸುತ್ತಿರುವ ಪ್ರತಿಯೊಂದು ಉಚ್ಚ ಅಥವಾ ಮಾಧ್ಯಮಿಕ ಶಾಲೆಗಳಲ್ಲಿ ಒಬ್ಬಿಬ್ಬರು ಸ್ತ್ರೀ ಶಿಕ್ಷಿಕೆಯರನ್ನು ನೇಮಿಸಿಕೊಳ್ಳಬೇಕು. ಈ ಶಿಕ್ಷಿಕೆಯರು ಉಳಿದ ಶಿಕ್ಷಕರು ತೆಗೆದುಕೊಳ್ಳುತ್ತಿರುವ ತರಗತಿಗಳನ್ನೇ ತೆಗೆದುಕೊಳ್ಳಬೇಕಲ್ಲದೆ, ಅವರು ಶಾಲೆಯಲ್ಲಿಯ ವಿದ್ಯಾರ್ಥಿನಿಯರಿಗೆ ಪಾಠಕ(tutors)ರಾಗಿ ಕೆಲಸ ಮಾಡಬೇಕು. ಇದರಿಂದ ಶಾಲೆಗಳಲ್ಲಿ ಬಾಲಿಕೆಯರಿಗೆ ಒಂದು ಬಗೆಯ ಮನೆಯ ವಾತಾವರಣವನ್ನು ಕಲ್ಪಿಸುವುದಲ್ಲದೆ, ತಮ್ಮ ತಾಯಿಯರಿಗೆ ಒಂದೇ ಶಾಲೆಗೆ ಬಾಲಕ ಬಾಲಿಕೆಯರನ್ನು ಕಳಿಸುವ ವಿಚಾರದಲ್ಲಿ ತಮಗಿರುವ ವಿರೋಧವನ್ನು ಕಿತ್ತೊಗೆಯಲು ಅನುವಾಗುತ್ತದೆ. ಇದೇ ರೀತಿ ನಾವು, ನಮ್ಮ ಬಾಲಕರ ಪ್ರಾಥಮಿಕ ಶಾಲೆಗಳಲ್ಲಿ ಕೂಡಾ ಹೆಂಗಸರನ್ನು ಶಿಕ್ಷಿಕೆಯರನ್ನಾಗಿ ನಿಯಮಿಸಬೇಕು. ಇದು ಬಹಳ ದಿವಸಗಳಿಂದ ಆಗದೇ ಉಳಿದಿದ್ದ ಅತ್ಯಾವಶ್ಯಕವಾದ ಸುಧಾರಣೆಯೊಂದು.

**ಶಾಲೆ-ಸಂಸ್ಥೆಗಳ ಸಂಘಟನೆ :** ಈಗ ಸದ್ಯಕ್ಕೆ ಹೆಣ್ಣು ಮಕ್ಕಳ ಸಲುವಾಗಿ ಪ್ರತ್ಯೇಕ ಕಾಲೇಜುಗಳನ್ನು ತೆರೆಯುವುದು

**ಇಲಾಖೆಯಲ್ಲಿ ಪ್ರಾಥಮಿಕ ಶಿಕ್ಷಿಕೆಯರ ಟ್ರೇನಿಂಗ್ ಸಂಸ್ಥೆಗಳು ೧೫; ಇವುಗಳಲ್ಲಿ ೪ ಸರಕಾರಿ ಮತ್ತು ೧೧ ಸಾರ್ವಜನಿಕ; ವಿದ್ಯಾರ್ಥಿ ನಿಯರು ೮೧೩. ಕರ್ನಾಟಕದಲ್ಲಿ ಒಂದೇ ಒಂದು, ಅದೂ ಸರಕಾರಿ ಸಂಸ್ಥೆ-ಧಾರವಾಡದಲ್ಲಿ; ವಿದ್ಯಾರ್ಥಿನಿಯರು ೫೦! ಈ ಸಂಸ್ಥೆ ಗಳಿಗೆ ಇಲಾಖೆಯಲ್ಲಿ ಒಟ್ಟು ಸಾರ್ವಜನಿಕ ಧನಸಹಾಯ ೪೫೦೦೯ ರೂ.; ಕರ್ನಾಟಕ ದಿಂದ ಒಂದು ಪೈ ಕೂಡ ಇಲ್ಲ.**

ಅವಶ್ಯವೆಂದು ನಾನು ತಿಳಿಯುವುದಿಲ್ಲ. ಪ್ರತ್ಯೇಕ ಕಾಲೇಜುಗಳನ್ನು ಪ್ರಾರಂಭ ಮಾಡಲು ದುಡ್ಡಿನ ಕೊರತೆ ಇದೆ. ಅಷ್ಟು ಹಣವನ್ನು ನಾವು ಒದಗಿಸಿ ಕೊಡಲಾರೆವು. ಒಂದು ವೇಳೆ ಅಷ್ಟು ದ್ರವ್ಯ ಸಹಾಯವು ಸಿಕ್ಕರೂ, ಅದು, ಸ್ತ್ರೀಯರ ಕಾಲೇಜುಗಳನ್ನು ತೆರೆಯುವುದಕ್ಕಿಂತ ಹೆಚ್ಚು ಉಪಯುಕ್ತ ವಾದ ಕೆಲಸಗಳಿಗೆ ಬೇಕಾಗುವುದು. ನಾವು ನಮ್ಮ ಇಲಾಖೆಯ ಉಳಿದ ಭಾಗಗಳಲ್ಲಿ ನಮ್ಮ ಸಹೋದರರು ಮಾಡುತ್ತಿರು ವಂತೆ, ಈಗ ಸದ್ಯಕ್ಕೆ ನಮ್ಮ ಹೆಣ್ಣು ಮಕ್ಕಳನ್ನು ಗಂಡುಮಕ್ಕಳು ಹೋಗುವ ಕಾಲೇಜುಗಳಿಗೆ ಕಳಿಸೋಣ.

ಆದರೆ ನಮಗೆ ಈಗ ಅತ್ಯಗತ್ಯವಾಗಿಬೇಕಾದ ಸಂಸ್ಥೆಗಳೆಂದರೆ ಬಾಲಿಕೆಯರ ಸಲುವಾಗಿ ಉಚ್ಚಶಾಲೆಗಳು(High school). ಕರ್ನಾಟಕದಲ್ಲಿ ಎರಡೇ ಎರಡು ಇಂತಹ ಶಾಲೆಗಳಿವೆ; ಎರಡೂ ಬೆಳಗಾಂವಿಯಲ್ಲಿ, ಸರಕಾರದವರು ಧಾರವಾಡ ವಿಜಾಪುರಗಳಲ್ಲಿ ಬಾಲಿಕೆಯರ ಉಚ್ಚ ಶಾಲೆಗಳನ್ನು ಸ್ಥಾಪಿಸುವವರಿದ್ದಾರೆ. ಕಾರವಾರದಲ್ಲಿ ಇಂತಹ ಒಂದು ಶಾಲೆಯ ಸ್ಥಾಪನೆಗಾಗಿ ಉದಾರ ಹೃದಯರಾದ ಮಹನೀಯರೊಬ್ಬರು ದೊಡ್ಡ ಕಾಣಿಕೆಯನ್ನು ಕೊಟ್ಟಿರುವರೆಂದೂ ಕೇಳುತ್ತೇನೆ. ಈ ದಯಾಳುಗಳ ದ್ರವ್ಯಸಹಾಯವೊಂದರಿಂದಲೇ ಕಾರವಾರದಲ್ಲಿ ಸ್ತ್ರೀಯರ ಉಚ್ಚ ಶಾಲೆಯನ್ನು ನಡೆಸುವುದು ಒಂದೇ ವೇಳೆ ಅಶ್ಯಕ ಕಂಡು ಬಂದರೆ ಸರಕಾರವು ಮುಂದೆ ಒಂದು ಕಾರವಾರದಲ್ಲಿ ಈ ಶಾಲೆಯನ್ನು ತೆರೆಯಲೇ ಬೇಕು. ಅಂದರೆ, ಮುಂಬೈ ಕರ್ನಾಟಕದ ಎಲ್ಲ ಜಿಲ್ಹಾ ಪಟ್ಟಣಗಳಲ್ಲಿ ಹೆಣ್ಣುಮಕ್ಕಳ ಉಚ್ಚ ಶಾಲೆಗಳು ಏರ್ಪಡುವವು. ಕರ್ನಾಟಕದಲ್ಲಿ ಪೌರಸಭೆ(Municipality)ಗಳಿಂದ ನಡೆಸಲ್ಪಡು ತ್ತಿರುವ ಉಚ್ಚ ಶಾಲೆಗಳು ಅನೇಕವಿದೆ. ಇವುಗಳಲ್ಲಿ ಕೆಲವು ಶಾಲೆಗಳನ್ನಾದರೂ ಸ್ತ್ರೀಯರ ಶಾಲೆಗಳನ್ನಾಗಿ ಮಾಡಲು ಪ್ರಯತ್ನ ಮಾಡಬೇಕು. ಪೌರ ಸಭೆಗಳು ಮತ್ತು ಜಿಲ್ಹಾ ಬೋರ್ಡುಗಲು ಕೂಡಿ ಕೆಲಸ ಮಾಡಿದಲ್ಲಿ, ಕರ್ನಾಟಕದ ಮುಖ್ಯ ಸ್ಥಳಗಳಲ್ಲಿ ಸ್ತ್ರೀಯರ ಶಾಲೆಗಳು, ಏರ್ಪಡುವುದನ್ನು ನಾವು ಬೇಗ ನೋಡಬಹುದು.

ಸರಕಾರವು ಮುಂದೆ ಬಂದು, ಕರ್ನಾಟಕದ ಉಳಿದ ಮೂರು ಜಿಲ್ಲೆಗಳಲ್ಲಿ ಅಂದರೆ ಧಾರವಾಡ, ಕಾರವಾರ, ವಿಜಾಪುರಗಳಲ್ಲಿ ಒಂದೊಂದು ಬಾಲಿಕೆಯರ ಹಾಯಸ್ಕೂಲುಗಳನ್ನು ಸ್ಥಾಪಿಸಬೇಕಂದು ನಾನು ಸೂಚಿಸಿದ್ದೇನೆ. ಇಲಾಖೆಯ ಉಳಿದ ಭಾಗಗಳಲ್ಲಿ ಒಂದೇ ಒಂದು ಇಂತಹ ಶಾಲೆಯಿದ್ದು ಕರ್ನಾಟಕದಲ್ಲಿ ಏಕೆ ಮೂರು? ಕರ್ನಾಟಕದ ಸಲುವಾಗಿ, ಅದರ ಪಾಲಿಗೆ ಮೀಸಲಾದುದಕ್ಕಿಂತ ಏಕೆ ಹೆಚ್ಚು ಖರ್ಚು ಮಾಡಬೇಕು? ಎಂಬ ವಾದವೇಳಬಹುದು. ಹಿಂದೆ ಕರ್ನಾಟಕವು ವರುಷ ವರುಷಗಳವರೆಗೆ ಮರೆಯಲ್ಪಟ್ಟಿ ತ್ತೆಂಬುದನ್ನು ನಾವು ನೆನಪಿಗೆ ತಂದರೆ, ಈ ವಾದವೇಳಲಾರದು. ಉಳಿದ ಭಾಗಗಳು ಶಿಕ್ಷಣವನ್ನು ಕರ್ನಾಟಕಕ್ಕಿಂತ ಎಷ್ಟೋ ವರ್ಷ ಮೊದಲು ಪ್ರಾರಂಭಿಸಿದವು. ಕರ್ನಾಟಕದಲ್ಲಿ ಶಾಲೆ ಕಾಲೇಜುಗಳ ಸ್ಥಾಪನೆಯಾಗುವ ಮೊದಲು ಉಳಿದ ಭಾಗಗಳಲ್ಲಿ ಶಾಲೆ ಕಾಲೇಜು ಗಳಿಗೆ ಸಾವಿರಾರು ರೂಪಾಯಿಗಳು ವೆಚ್ಚವಾಗಿದ್ದವು. ನಾವು ಶಿಕ್ಷಣದ ವಿಷಯದಲ್ಲಿ ಹಿಂದೆ ಬಿದ್ದುದಕ್ಕೆ ಇದೂ ಒಂದು ಕಾರಣವೆಂದು ಹಿಂದೆಯೇ ಹೇಳಿದ್ದೇನೆ. ನಮಗಿಂತ ಬಹಳ

ಮುಂದೆ ಹೋಗಿರುವ ಗುಜರಾಥ ಮತ್ತು ಮಹಾರಾಷ್ಟ್ರ ಪ್ರಾಂತಗಳ ಸರಿಜೋಡಿಗೆ ನಾವು ಬರಲು ಅನುಕೂಲವಾಗುವಂತೆ, ಕರ್ನಾಟಕದ ಸಲುವಾಗಿ, ಕೆಲವು ವರ್ಷಗಳ ಪೂರ್ತಿ ಸರಕಾರವು ಹೆಚ್ಚು ಹಣವನ್ನು ಒದಗಿಸಿ ಕೊಡುವುದಕ್ಕಿಂತ ಹೆಚ್ಚಿನ ನ್ಯಾಯ ಯಾವುದು?

**ಖಾಸಗಿ ಸಂಸ್ಥೆಗಳು :** ಸ್ತ್ರೀಯರ ಮಾಧ್ಯಮಿಕ ಶಾಲೆಗಳನ್ನು ಸ್ಥಾಪಿಸುವುದು ಸುಲಭಸಾದ್ಯವಲ್ಲ. ಸ್ತ್ರೀಶಿಕ್ಷಿಕೆಯರಿಗೆ ಶಿಕ್ಷಕರಿಗಿಂತ ಹೆಚ್ಚಿನ ಪಗಾರ ಬೇಕು. ಬಾಲಕರ ಶಾಲೆಗಳಿಗಿಂತ ಬಾಲಿಕೆಯರ ಶಾಲೆಗಳಲ್ಲಿ ಹೆಚ್ಚಿನ ಸೌಕರ್ಯಗಳು ಬೇಕು. ಬಾಲಿಕೆಯರ ಶಾಲೆಗಳಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ಕಡಿಮೆ ಇರುವುದು, ಮತ್ತು ಅವರಿಂದ ಬರುವ ಫೀ ಬಾಲಕರ ಶಾಲೆಗಳಿಗಿಂತ ಕಡಿಮೆ ಇರುವುದು. ಇವೆಲ್ಲ ಕಾರಣಗಳ ಸಲುವಾಗಿ, ಖಾಸಗೀ ಸಂಸ್ಥೆಗಳು ಸ್ತ್ರೀಯರ ಹಾಯಸ್ಕೂಲುಗಳನ್ನು ನಡೆಸುವುದು, ಸಾವಿರಾರು ರೂಪಾಯಿಗಳನ್ನು ಕೊಡಬಲ್ಲ ದಾತೃಗಳು ಮುಂದೆ ಬಾರದೆ ಹೋದರೆ ಅಶಕ್ಯವಾಗುತ್ತದೆ. ಕರ್ನಾಟಕದಲ್ಲಿ ಸಾವಿರಾರು ರೂಪಾಯಿಗಳನ್ನು ನೀಡಬಲ್ಲವರು ಅತಿ ವಿರಳ. ಕೊಡಲು ಶಕ್ತರಾದವರು ಕೆಲವರಿದ್ದರೂ ಅವರಿಗೆ ಶಿಕ್ಷಣದ ಮಹತ್ಕಾರ್ಯದಲ್ಲಿ ಅಭಿರುಚಿಯಿಲ್ಲ. ಆದ್ದರಿಂದ ಸ್ತ್ರೀಯರ ಸಲುವಾಗಿ ಹಾಯಸ್ಕೂಲುಗಳನ್ನು ನಡೆಸುವ ಕೆಲಸವನ್ನು ಸರಕಾರವು ಮತ್ತು ಪೌರಸಭೆಗಳು ಕೈಕೊಳ್ಳಬೇಕೆಂದು ಸೂಚಿಸಿರುತ್ತೇನೆ.

ಆದರೆ ಖಾಸಗೀ ಪ್ರಯತ್ನವು ಯಶಸ್ವಿಯಾಗಬಹುದಾದ ಇನ್ನೊಂದು ಮಾರ್ಗವಿದೆ. ಈಗ ನಾವು ನಮ್ಮ ಮಾಧ್ಯಮಿಕ ಶಾಲೆಗಳಲ್ಲಿ ಹುಡುಗರಿಗೆ ಕೊಡುವ ಶಿಕ್ಷಣವು, ಮುಂದೆ ವಿವಾಹಿತರಾಗಿ ತಮ್ಮ ಮನೆಯನ್ನು ನೋಡಿಕೊಳ್ಳಲಿಚ್ಛಿಸುವ ಬಹುಸಂಖ್ಯಾತರಾದ ಬಾಲಿಕೆಯರಿಗೆ ಅಷ್ಟೊಂದು ತಕ್ಕುದಲ್ಲವೆಂದು ನಾವು ಒಪ್ಪಬೇಕು. ಇದಕ್ಕೆ ಒಪ್ಪಿದರೆ, ನಾವು, ಮಹಾರಾಷ್ಟ್ರದಲ್ಲಿ ಮಹರ್ಷಿಕರ್ವೆಯವರು ಸ್ಥಾಪಿಸಿಗ ವಿಶ್ವವಿದ್ಯಾನಿಲಯದ ಮಾದರಿಯಲ್ಲಿ, ಕರ್ನಾಟಕದಲ್ಲಿಯೂ ಒಂದು ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದು ಅತ್ಯಗತ್ಯ. 'ಸುಮಾತೆ', 'ಸುಗೃಹಿಣಿ'ಯರನ್ನು ತಯಾರು ಮಾಡುವುದೇ ಕರ್ವೆ ವಿಶ್ವ ವಿದ್ಯಾನಿಲಯದ ಧ್ಯೇಯ. ಈ ಸಂಸ್ಥೆಯು ಮಾತೃಭಾಷೆಯಲ್ಲಿ ಶಿಕ್ಷಣವನ್ನು ಕೊಡುವ ವ್ಯವಸ್ಥೆಯನ್ನು ಮಾಡಿದೆ; ಮತ್ತು ಹೆಣ್ಣು ಮಕ್ಕಳಿಗೆ ಅವಶ್ಯವಿರುವ ವಿವಿಧ ವಿಷಯಗಳ ಅಭ್ಯಾಸಕ್ಕೆ ಸೌಕರ್ಯವನ್ನು ಒದಗಿಸಿಕೊಡುತ್ತದೆ. ಈ ಸಂಸ್ಥೆಯು, ಪ್ರಾಥಮಿಕ ಶಿಕ್ಷಣದಿಂದ ಪದವೀಧರಾ ನಂತರ ಶಿಕ್ಷಣದ ವರೆಗಿನ, ತನ್ನದೇ ಒಂದು ಹೊಸ ರೀತಿಯ ಅಭ್ಯಾಸ ಕ್ರಮವನ್ನು ಸಿದ್ಧಮಾಡಿರುತ್ತದೆ. ಕರ್ನಾಟಕದಲ್ಲಿಯೂ ಇಂಥದೊಂದು ವಿಶ್ವವಿದ್ಯಾನಿಲಯವನ್ನು ನಡೆಸುವ ಕಾಲವಿನ್ನೂ ಬಂದಿಲ್ಲವೇ? ನಾವೆಲ್ಲರೂ ಒಮ್ಮತದಿಂದ ಪ್ರಯತ್ನಮಾಡಿ ಇಂಥ ಒಂದು ಸಂಸ್ಥೆಯನ್ನು ಸ್ಥಾಪಿಸಲಿಕ್ಕೇ ಬೇಕು. ನಮ್ಮ ಈ ಆಶೆಯು ಫಲಿಸಿದ ದಿನವು ಸುದಿನವಲ್ಲವೇ?

೧೯೩೧-೩೨ ಮತ್ತು ೧೯೩೬-೩೭ರ ಅಂಕೆ ಹೋಲಿಸಲಾಗಿ, ಬೇರೆ ಬೇರೆ ವಿಭಾಗಗಳಲ್ಲಿ ಸ್ತ್ರೀ ಶಿಕ್ಷಣದ ಪ್ರಗತಿಯ ಪ್ರಮಾಣ:- ಮುಂಬೈ ವಿಭಾಗ ನೂರಕ್ಕೆ ೩೮.೫; ಮಧ್ಯ ವಿಭಾಗ ೩.೨.೩; ಉತ್ತರ ವಿಭಾಗ ೨೭.೩; ದಕ್ಷಿಣ ವಿಭಾಗ (ಎಂದರೆ ಕರ್ನಾಟಕ) ೧೪.೬. ಪ್ರಗತಿಯ ವೇಗ ಇದೇ ರೀತಿಯಾಗುಳಿದರೆ, ಬೇರೆ ವಿಭಾಗಗಳಿಗೂ ನಮಗೂ ದಿನೇ ದಿನೇ ಅಂತರ ಹೆಚ್ಚಾಗುವುದು ಅನಿವಾರ್ಯ

ನನ್ನದು ಇನ್ನೂ ಒಂದು ಸೂಚನೆಯಿದೆ. ಹಾಗೆ ನಡೆದಲ್ಲಿ ಸ್ತ್ರೀಯರ ಮಾಧ್ಯಮಿಕ ಶಿಕ್ಷಣದ ಪ್ರಗತಿಯು ಇನ್ನೂ ತ್ವರಿತವಾಗಿ ಸಾಗುವುದು. ಪ್ರಾಥಮಿಕ ಶಾಲೆಗಳಲ್ಲಿ ಬಾಲಿಕೆಯರಿಗೆ ಈಗ ಫೀ ಇಲ್ಲ. ಮಾಧ್ಯಮಿಕ ಶಾಲೆಗಳಲ್ಲಿ ಸಹ ಅವರಿಂದ ಫೀ ತೆಗೆದುಕೊಳ್ಳದಿರಲಿಕ್ಕೆ ಆಗಲಿಕ್ಕಿಲ್ಲವೇ? ಅಥವಾ ಬಾಲಕರು ಕೊಡುವ ಫೀಯ ಅರ್ಧದಷ್ಟು ಮಾತ್ರ ತೆಗೆದುಕೊಳ್ಳಬಾರದೇಕೆ? ಕೊಲ್ಹಾಪುರ ಸಂಸ್ಥಾನದಲ್ಲಿ ಪ್ರಾಥಮಿಕ ಶಾಲೆಯಿಂದ ಕಾಲೇಜಿನವರೆಗೆ, ಸ್ತ್ರೀಯರಿಗೆ ಫೀ ಇಲ್ಲ. ಇದರಂತೆಯೇ ಕರ್ನಾಟಕದಲ್ಲಿ ನಾವೇಕೆ ಮಾಡಬಾರದು? ಕಡೆಗೆ, ಈಗಿನ ಫೀಯನ್ನು ಬಾಲಿಕೆಯರ ಪೂರ್ತಿ ಅರ್ಧದಷ್ಟಾದರೂ ಒಮ್ಮೆಲೆ ಏಕೆ ಕಡಿಮೆ ಮಾಡಬಾರದು? ಮುಂಬೈ ಪ್ರಾಂತದಲ್ಲಿ ಹೆಣ್ಣು ಮಕ್ಕಳ ಮಾಧ್ಯಮಿಕ ಶಾಲೆಗಳ ಸಲುವಾಗಿ ಖರ್ಚಾದ, ೭,೬೪,೮೬೧ ರೂಪಾಯಿಗಳಲ್ಲಿ ನೂರಕ್ಕೆ ೪೫ರಂತೆ ಫೀಯಿಂದ ಉತ್ಪನ್ನ ಬಂದಿರುತ್ತದೆ. ಹೆಣ್ಣು ಮಕ್ಕಳಿಗೆ ಅರ್ಧ ಫೀ ಮಾಡಿದಲ್ಲಿ ಈಗಿನ ಖರ್ಚಿನಲ್ಲಿ ನೂರಕ್ಕೆ ೨೦ ರಂತೆ ಹೆಚ್ಚು ಖರ್ಚು ಮಾಡಬೇಕಾಗುವುದು.

ಬಾಲಕರ ಶಾಲೆಗಳಲ್ಲಿ ಓದುತ್ತಿರುವ ಬಾಲಕೆಯರ ಫೀಯನ್ನು ಅರ್ಧಕ್ಕೆ ತಗ್ಗಿಸುವುದರಿಂದ ಆಗಬಹುದಾದ ನಷ್ಟವು ಅತ್ಯಲ್ಪವಿರುತ್ತದೆ. ಆದರೆ ಇದು ರಾಷ್ಟ್ರದ ಪ್ರಗತಿಯ ಸಲುವಾಗಿ ಉತ್ತಮ ರೀತಿಯಿಂದ ಮುಡಿಪಿಟ್ಟ ಹಣವಾಗುವುದು. ಆದ್ದರಿಂದ ಸರಕಾರವು ಕೂಡಲೆ, ತಮ್ಮ ಮಾಧ್ಯಮಿಕ ಶಾಲೆಗಳಲ್ಲಿ ಬಾಲಿಕೆಯರಿಗೆ ಅರ್ಧ ಫೀ ಮಾಡಬೇಕು; ಮತ್ತು ಖಾಸಗೀ ಸಂಸ್ಥೆಗಳಿಗೆ ಸಾಕಷ್ಟು ಸಹಾಯಕ ದೇಣಿಗೆಗಳನ್ನು (Grant-i-aid) ಕೊಡಬೇಕೆಂದು ನನ್ನ ಸೂಚನೆಯಿದೆ. ಇನ್ನು ಬಾಲಿಕೆಯರ ಪ್ರಾಥಮಿಕ ಶಿಕ್ಷಣ ಪ್ರಸಾರದ ವಿಷಯಕ್ಕೆ ಬರೆಯುತ್ತೇನೆ.

ಕರ್ನಾಟಕದಲ್ಲಿ ೯ರಿಂದ ೧೧ ವರುಷದ ಒಳಗಿನ ಬಾಲಿಕೆಯರ ಸಂಖ್ಯೆ ೨,೨೫,೩೪೬. ಒತ್ತಾಯದ ಶಿಕ್ಷಣವು ಜಾರಿಯಾದಲ್ಲಿ ಈ ಹೆಣ್ಣು ಹುಡುಗಿಯರ ಸಲುವಾಗಿಯೇ ೫೦೦೦ ಮಂದಿ ಶಿಕ್ಷಕರು ಬೇಕು. ಇದಲ್ಲದೆ ಪ್ರಾಥಮಿಕ ಶಿಕ್ಷಣದ ಮೇಲಿನ ತರಗತಿಗಳಲ್ಲಿ ಕಲಿಯುವ ವಿದ್ಯಾರ್ಥಿನಿಯರ ಮತ್ತು ಬಾಲಕರ ಶಾಲೆಗಳ ಕೆಳತರಗತಿಗಳಲ್ಲಿ ಓದುತ್ತಿರುವ ವಿದ್ಯಾರ್ಥಿಗಳ ಸಲುವಾಗಿ ಶಿಕ್ಷಕರು ಬೇಕು. ಒಟ್ಟಾರೆ ನಮಗೆ ೧೦,೦೦೦ ಮಂದಿ ಉಪಾಧ್ಯಾಯರು ಬೇಕು. ಮತ್ತು ಅವರಲ್ಲಿ ಪ್ರತಿವರ್ಷ ೩೫೦ ಮಂದಿ ಶಿಕ್ಷಕರನ್ನು ಕಳಿಸುವ ಸಂಸ್ಥೆಗಳು ಬೇಕು. ಅಂದರೆ ನಮ್ಮ ಹೆಣ್ಣುಮಕ್ಕಳ ಟ್ರೇನಿಂಗ್ ಸಂಸ್ಥೆಗಳಲ್ಲಿ

೮೦೦ ಮಂದಿ ಸೇವಾ ನಿವೃತ್ತರಾಗುವರು. ಆದ್ದರಿಂದ ಎರಡು ವರುಷ ಶಿಕ್ಷಣ ಕೊಟ್ಟು ಶಿಕ್ಷಕರನ್ನು ತಯಾರು ಮಾಡುವ ಮತ್ತು ವರ್ಷಪ್ರತಿ ೪೫೦ ಜನ ವಿದ್ಯಾರ್ಥಿನಿಯರಿಗೆ ಸ್ಥಳವಿರಬೇಕು. ಸದ್ಯಕ್ಕೆ ನಮ್ಮಲ್ಲಿ ಒಂದೇ ಒಂದು ಸರಕಾರದಿಂದ ನಡೆಸಲ್ಪಟ್ಟ ಟ್ರೇನಿಂಗ್ ಕಾಲೇಜ್ ಇದೆ.ಮತ್ತು ಅಲ್ಲಿ ವಿದ್ಯಾರ್ಥಿನಿಯರ ಸಂಖ್ಯೆ ೫೦. ಉಳಿದ ಭಾಗಗಳಲ್ಲಿ ಹೆಣ್ಣು ಮಕ್ಕಳ ಟ್ರೇನಿಂಗ್‌ನ ಸಲುವಾಗಿ, ಖಾಸಗೀ ಸಂಸ್ಥೆಗಳಿಂದ ನಡೆಸಲ್ಪಟ್ಟ ೧೧ ಕಾಲೇಜ್ ಗಳಿದ್ದು, ನಮ್ಮಲ್ಲಿ ಒಂದೇ ಒಂದು, ಅದೂ ಸರಕಾರದಿಂದ ಸಂಚಾಲಿತವಾದ ಕಾಲೇಜು ಇರುತ್ತದೆಂಬುದನ್ನು ಕೇಳಿ ನಮಗೆ ನಾಚಿಕೆ ಬರಬೇಕು. ಸರಕಾರವು ಕರ್ನಾಟಕದಲ್ಲಿ ಈಗ ಇರುವ ಸಂಸ್ಥೆಯನ್ನು ಇದರ ಎರಡರಷ್ಟು ದೊಡ್ಡದು ಮಾಡಬೇಕು, ಅಥವಾ ಇನ್ನೊಂದು ಇಂತಹ ಕಾಲೇಜ್ ಸ್ಥಾಪಿಸಬೇಕೆಂದು ನನ್ನ ಸೂಚನೆಯಿದೆ. ಈ ಪ್ರಜಾಪ್ರಭುತ್ವ ಯುಗದಲ್ಲಿ ಮೈಯಲ್ಲಿರುವ ಕಸುವಿನಿಂದ ಗಟ್ಟಿಯಾಗಿ ಕೂಗದ ವಿನಾ, ಒದರದ ವಿನಾ, ಬೊಬ್ಬೆ ಹೊಡೆಯುವ ವಿನಾ, ಏನೂ ಸಿಗುವುದಿಲ್ಲ. ಕರ್ನಾಟಕದಲ್ಲೇ ಒಂದಲ್ಲ ಒಂದು ಕಡೆಗೆ ಸ್ಥಾಪಿತವಾಗುವ, ಮಾಧ್ಯಮಿಕ ಶಾಲಾ ಶಿಕ್ಷಕರ ಕಾಲೇಜು ಯಾವ ಊರಲ್ಲಿರಬೇಕೆಂಬ ಬಗ್ಗೆ ಈಗ ಅದೆಷ್ಟೋ ಚರ್ಚೆ ನಡೆದಿದೆ ಆದರೆ ಪ್ರಾಥಮಿಕ ಶಾಲಾ ಶಿಕ್ಷಿಕೆಯರ ಟ್ರೇನಿಂಗಿನ ಸಲುವಾಗಿ ಒಂದು ಶಬ್ದವನ್ನು ಸಹಿತ ಯಾರೂ ಉಸುರಿಲ್ಲ. ಶಿಕ್ಷಿಕೆಯರ ಶಿಕ್ಷಣವು ಹೆಚ್ಚಿನ ಮಹತ್ವದ್ದಿದೆ. ಕರ್ನಾಟಕದ ಮುಂದಾಳುಗಳು ಇತ್ತ ಕಡೆಗೆ ಲಕ್ಷ್ಯ ಕೊಡುವರೇ?

ಎರಡನೆಯದಾಗಿ, ಗ್ರಾಮಗಳಲ್ಲಿ ದುಡಿಯುತ್ತಿರುವ ಶಿಕ್ಷಿಕಿಯರಿಗೆ ಹೆಚ್ಚು ಸೌಕರ್ಯ ಗಳನ್ನು ಕಲ್ಪಿಸಿಕೊಡಬೇಕು; ಬಹಳ ಮಂದಿ ಶಿಕ್ಷಿಕೆಯರು ದೊಡ್ಡ ಪಟ್ಟಣಗಳಿಂದ ಬರುತ್ತಾರೆ ಮತ್ತು ಸಾಮಾನ್ಯತಃ ದೂರದ ಅಥವಾ ಒಂದೇ ಇರುವ ಹಳ್ಳಿಗಳಲ್ಲಿ ಕೆಲಸ ಮಾಡಲು ಇಚ್ಛೆಪಡುವುದಿಲ್ಲ. ನಾವು, ಶಿಕ್ಷಿಕಿಯರಿಗೆ ಈಗಿನ ಗ್ರಾಮಗಳ ವಾತಾವರಣವು ಯಾವಾಗಲೂ ಅನುಕೂಲವಿರುವುದಿಲ್ಲವೆಂಬದನ್ನು ಒಪ್ಪಬೇಕು. ಶಿಕ್ಷಿಕೆಯರು ಗ್ರಾಮಗಳಲ್ಲಿ ಸೌಖ್ಯದಿಂದ ಜೀವಿಸಲಿಕ್ಕೆ ಅನುಕೂಲವಾಗುವಂತೆ ನಾವು ಸುಸಂಘಟಿತ ರೀತಿಯಿಂದ ಪ್ರಯತ್ನ ಮಾಡಬೇಕು, ಮತ್ತು ಜನಾಭಿಪ್ರಾಯವು ಇದೇ ಗುರಿಯನ್ನು ಹಿಡಿದು ನಡೆಯು ವಂತೆ ಮಾಡಬೇಕು. ಇಷ್ಟೆಲ್ಲ ಮಾಡಿದರೂ ಈಗಿನ ಶಿಕ್ಷಿಕೆಯರಲ್ಲಿ ಬಹುಸಂಖ್ಯಾಕರಾದಂಥ ನಗರವಾಸಿಗಳಾದ ಹೆಣ್ಣುಮಕ್ಕಳು ಈಗ ಗ್ರಾಮಗಳಿಗೆ ಹೋಗಿ ನೆಲಸಲಿಕ್ಕೆ ಒಪ್ಪುತ್ತಾರೆಂಬ ಬಗ್ಗೆ ನನಗೆ ಸಂಶಯವಿದೆ. ಈ ಬಿಕ್ಕಟ್ಟಿನಿಂದ ಪಾರಾಗಲಿಕ್ಕೆ ಗ್ರಾಮಗಳಿಂದ ಬರುವ ಸ್ತ್ರೀಯರಿಗೆ ಹೆಚ್ಚಾಗಿ ಶಿಕ್ಷಣವನ್ನು ಕೊಟ್ಟು ಶಿಕ್ಷಿಕೆಯರನ್ನಾಗಿ ಮಾಡುವುದು ಉತ್ತಮ ಮಾರ್ಗವೆನಿಸುತ್ತದೆ. ಹೀಗೆ ಮಾಡಿದಲ್ಲಿ ಗ್ರಾಮಗಳಲ್ಲಿ ಶಿಕ್ಷಿಕೆಯರನ್ನಾಗಿ ಕಳಿಸಲಿಕ್ಕೆ ನಮಗೆ ಸಾಕಷ್ಟು ಮಂದಿ ಸ್ತ್ರೀಯರು ಸಿಕ್ಕುವರು. ಇದರಿಂದ ಪ್ರಾಥಮಿಕ ವಿದ್ಯಾಭ್ಯಾಸದ ಪ್ರಸರಣವು ಸುಲಭವಾಗುವುದು.

ಬಾಲಿಕೆಯರ ಸಲುವಾಗಿ ಈಗ ಇರುವುದಕ್ಕಿಂತ ಹೆಚ್ಚಿನ ಶಾಲೆಗಳನ್ನು ತೆರೆಯುವ ಪ್ರಶ್ನೆಯನ್ನು ಇನ್ನು ವಿಚಾರಿಸೋಣ. ನಾನು ಈ ಮೊದಲೇ ಬರೆದಿರುವಂತೆ, ಹೆಣ್ಣುಮಕ್ಕಳ ಸಲುವಾಗಿಯೇ ಪ್ರತ್ಯೇಕ ಪ್ರಾಥಮಿಕ ಶಾಲೆಗಳನ್ನು ನಡೆಸುವುದು ಸರಿಯೆನಿಸವುದಿಲ್ಲ, ಮತ್ತು ನಾವು ಈಗಿನ ಬಾಲಕರ ಶಾಲೆಗಳಿಗೇ ನಮ್ಮ ಹೆಣ್ಣು ಹುಡುಗಿಯರನ್ನು ಕಳಿಸಬೇಕು. ಆದರೆ ಈ ಮತವು ಜನಸಾಮಾನ್ಯರ ಮಾನ್ಯತೆಯನ್ನು ಪಡೆಯಬೇಕಾದರೆ ಇನ್ನೂ ಕೆಲವು ದಿನಗಳು ಬೇಕು. ಆದ್ದರಿಂದ ಕೆಲಕಾಲ ಮಟ್ಟಿಗೆ ಕೆಲವು ಶಾಲೆಗಳನ್ನು ಬಾಲಿಕೆಯರ ಸಲುವಾಗಿಯೇ ತೆರೆಯಬೇಕೆಂದು ನನ್ನ ಸೂಚನೆಯಿದೆ. ಆದರೆ ಈ ಶಾಲೆಗಳನ್ನು ಯಾರು ತೆರೆಯಬೇಕೆಂಬುದು ಈಗ ನಮ್ಮನ್ನೆದುರಿಸುತ್ತಿರುವ ಪ್ರಶ್ನೆಯಾಗಿದೆ.

ಸರಕಾರವು ಈಗಿನದಕ್ಕಿಂತ ಹೆಚ್ಚು ಪ್ರಾಥಮಿಕ ಶಾಲೆಗಳನ್ನು ಸ್ಥಾಪಿಸುವುದಕ್ಕೆ ತನಗಿಚ್ಛೆ ಇಲ್ಲೆಂದೂ ಸಾರ್ವಜನಿಕ ಸಂಸ್ಥೆಗಳು ಮತ್ತು ಖಾಸಗೀ ಜನರು ಪ್ರಾಥಮಿಕ ಶಾಲೆಗಳನ್ನು ತೆರೆದಲ್ಲಿ ಸಹಾಯಕ ದೇಣಿಗೆಯನ್ನು(Grant-i-aid) ಕೊಡುವುದಾಗಿಯೂ ಪ್ರಸಿದ್ಧಿಸಿರುವರು. ಸ್ಥಾನಿಕ ಸಂಸ್ಥೆಗಳೂ ಕೂಡ, ಹಣದ ಅಡಚಣೆಯಲ್ಲಿರುವುದರಿಂದ (ಉದಾರ ಹೃದಯದ ದಾನಿಗಳು ಮುಂದೆ ಬಂದು ಖಾಸಗೀ ಶಾಲೆಗಳನ್ನು ತೆರೆದರೆ ಉಪಯುಕ್ತವಾಗುತ್ತದೆ.)

# ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಹಿಳಾ ಶಿಕ್ಷಣದ ಪ್ರಗತಿ ಒಂದು ವಿಶ್ಲೇಷಣೆ

ಡಾ. ಉಷಾ ರಾಮಕುಮಾರ್
ಶ್ರೀ ಗೋವಿಂದರಾಜು

ದಕ್ಷಿಣ ಕನ್ನಡದ ಮಹಿಳಾ ಶಿಕ್ಷಣದ ಅಭಿವೃದ್ಧಿಯನ್ನು ೪ ಹಂತಗಳಲ್ಲಿ ವಿಂಗಡಿಸಬಹುದು ಅಂದರೆ

೧. ೧೯೦೦ರ ಪೂರ್ವ ಹಿನ್ನೆಲೆಯೊಂದಿಗೆ ಏಕೀಕರಣದವರೆಗೆ(೧೯೫೬)

೨. ೧೯೫೬ ರಿಂದ ೧೯೭೬ರವರೆಗೆ

೩. ೧೯೭೬ ರಿಂದ ೧೯೯೬ರ ವರೆಗೆ

೪. ೧೯೯೬ ರಿಂದ ೨೦೦೦ ಇಸವಿಯವರೆಗೆ ಪೂರ್ವ ಪ್ರಾಥಮಿಕ, ಪ್ರಾಥಮಿಕ, ಪ್ರೌಢಹಂತದ ಶಿಕ್ಷಣದ ಪ್ರಗತಿಯನ್ನು ಇಲ್ಲಿ ವರ್ಣಿಸಿದೆ.

**೧೯೯೦ ರ ಪೂರ್ವ ಹಿನ್ನೆಲೆ**

೧೯೦೦ ಪೂರ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣದ ಪ್ರಗತಿಯು ಮಂದಗತಿಯಲ್ಲಿ ಸಾಗುತ್ತಿತ್ತು. ಅಲ್ಲಿ ಶಿಕ್ಷಣ ಆಡಳಿತ ವ್ಯವಸ್ಥೆ ಸರಿಯಾಗಿರಲಿಲ್ಲ. ಆದರೆ ೧೮೫೪ರ 'ವುಡ್ಡನ ವರದಿ'ಯು ದಕ್ಷಿಣ ಕನ್ನಡ ಜಿಲ್ಲೆಯ ಶಿಕ್ಷಣದ ಪ್ರಗತಿಯಲ್ಲಿ ಹೊಸ ತಿರುವುವನ್ನು ಕೊಟ್ಟಿತು. ಇದರಿಂದಾಗಿ ಪ್ರಾಥಮಿಕ, ಪ್ರೌಢಶಾಲೆ ಮತ್ತು ಕಾಲೇಜು ಶಿಕ್ಷಣ ಒಂದು ನಿರ್ಧಿಷ್ಟವಾದ ರೂಪವನ್ನು ಪಡೆಯಿತಲ್ಲದೆ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಪ್ರೋತ್ಸಾಹ ದೊರೆಯಿತು. ಶಿಕ್ಷಕರ ತರಬೇತಿಗಾಗಿ 'ನಾರ್ಮಲ್ ಸ್ಕೂಲ್ 'ನ್ನು ತೆರೆಯಲಾಯಿತು. ಈ ಸಂದರ್ಭದಲ್ಲಿ ಸರ್ಕಾರಿ ಶಾಲೆಗಳನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸ್ಥಾಪಿಸಲಾಯಿತು ಮತ್ತು ಮಿಶನರಿ ಸಂಸ್ಥೆಗಳು ಶಾಲೆಗಳನ್ನು ತೆರೆದವು. ಅಷ್ಟೇ ಅಲ್ಲದೇ ಜೆಸ್ಯೂಟ್ ಮಿಶನ್ ಮಂಗಳೂರಿನಲ್ಲಿ ತನ್ನ ಶಾಲೆಯನ್ನು ೧೮೮೮ರಲ್ಲಿ ಪ್ರಾರಂಭಿಸಿತು. ಇದಲ್ಲದೇ ಶಿಕ್ಷಣ ಖಾತೆ(ಮಂಡಳಿ) ಪಠ್ಯಪುಸ್ತಕ, ಪಠ್ಯ ವಸ್ತುಗಳು ಮತ್ತು ಶಾಲೆಗಳಲ್ಲಿ ವಿದ್ಯಾಭ್ಯಾಸದ ಮಟ್ಟವನ್ನು ಗೊತ್ತುಮಾಡಲಾಯಿತು.

ಈ ಅವಧಿಯಲ್ಲಿಯೇ ಮದ್ರಾಸಿನಲ್ಲಿ ವಿಶ್ವವಿದ್ಯಾನಿಲಯವನ್ನು ೧೮೫೭ರಲ್ಲಿ ಸ್ಥಾಪಿಸಲಾಯಿತು. ಇದರ ವತಿಯಿಂದ ಮೆಟ್ರಿಕ್ಯುಲೇಷನ್ ಮತ್ತು ಡಿಗ್ರಿ ಪರೀಕ್ಷೆಗಳನ್ನು ನಡೆಸಲು ಪ್ರಾರಂಭಿಸಿತು. ಇದರಡಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯೂ ಪಾಲ್ಗೊಳ್ಳುವಂತಾಯಿತು ಮತ್ತು ಖಾಸಗಿ ಸಂಸ್ಥೆಗಳಿಗೆ ಉತ್ತೇಜನ ನೀಡಲಾಯಿತು. ಇದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಹೆಣ್ಣು ಮಕ್ಕಳ ಪ್ರೌಢ ಮತ್ತು ಉನ್ನತ ಶಿಕ್ಷಣದ ಹೆಚ್ಚಿನ ಪ್ರಗತಿಗೆ ನಾಂದಿಯಾಯಿತು.

೧೮೬೩ರಲ್ಲಿ ಅಂಗೀಕರಿಸಲಾದ 'ಮದ್ರಾಸ್ ಪ್ರಾಥಮಿಕ ಶಿಕ್ಷಣದ ಅಧಿನಿಯಮ' ದಿಂದಾಗಿ ಮಹಿಳೆಯರ ಶಿಕ್ಷಣಕ್ಕೆ ಆಧ್ಯತೆ ದೊರಕಿತು. ಆಂಗ್ಲ ಭಾಷಾ ಮಾಧ್ಯಮವಷ್ಟೇ ಅಲ್ಲದೇ ದೇಶಿಯ ಮಾಧ್ಯಮದಲ್ಲಿ ಶಿಕ್ಷಣ ನೀಡುವಂತಾಯಿತು. ೧೮೭೦-೭೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೭೩ ವಿದ್ಯಾ ಸಂಸ್ಥೆಗಳಿದ್ದವು ೧೮೮೦-೮೧ರಷ್ಟೊತ್ತಿಗೆ ೧೪೮ಕ್ಕೆ ಏರಿತು. ಈ ರೀತಿಯಲ್ಲಿ ೧೯೦೦ ಪೂರ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಿಕ್ಷಣದ ಪ್ರಗತಿ ಮಂದಗತಿಯಲ್ಲಿ ಸಾಗುತ್ತ ಮುಂದುವರಿಯಿತು.

**ಪೂರ್ವ ಪ್ರಾಥಮಿಕ ಶಿಕ್ಷಣ ೧೯೦೦ ರಿಂದ ೧೯೫೬ ರವರೆಗೆ**

೧೯೦೦ ಕಾಲಾವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣ ಅಥವಾ ನರ್ಸರಿ ಶಿಕ್ಷಣವು ಬಹುತೇಕವಾಗಿ ಖಾಸಗಿ ಶೈಕ್ಷಣಿಕ ಸಂಸ್ಥೆಗಳಿಂದ ನಡೆಸಲ್ಪಡುತ್ತಿದ್ದು, ಸರ್ಕಾರವು ಇವುಗಳಿಗೆ ನೇರವಾಗಿ ಸಹಕಾರವನ್ನು ನೀಡುತ್ತಿತ್ತು. ಅಲ್ಲದೇ ಖಾಸಗಿ ಮತ್ತು ಸ್ಥಳೀಯ ಸಂಸ್ಥೆಗಳು ಕಿಂಡರ್ ಗಾರ್ಟನ್ ಮತ್ತು ನರ್ಸರಿ ಶಾಲೆಗಳಿಗೆ ಅನುದಾನವನ್ನು ನೀಡಲು ಸಹಕರಿಸುತ್ತಿದ್ದವು. ಇದರಿಂದ ನರ್ಸರಿ ಶಾಲೆಗಳಿಗೆ ಪ್ರೋತ್ಸಾಹ ಕೊಟ್ಟಿದ್ದರಿಂದ ಹೆಣ್ಣು ಮಕ್ಕಳ ಪ್ರವೇಶದಲ್ಲಿ ಗಣನೀಯವಾಗಿ ಹೆಚ್ಚಳವಾಗಲು ಸಹಕಾರಿಯಾಯಿತು. ಸಮಾಜ ಕಲ್ಯಾಣ ಬೋರ್ಡ್ ವಿಶೇಷವಾಗಿ ಗ್ರಾಮೀಣ ಪ್ರದೇಶಗಳಲ್ಲಿ ಕೆಲವು 'ಬಾಲವಾಡಿ ಶಾಲೆ'ಗಳನ್ನು ಪ್ರಾರಂಭಿಸಿತು. ಇದರಿಂದ ಗ್ರಾಮೀಣ ಪ್ರದೇಶದ ಮಹಿಳೆಯರೂ(ಹೆಣ್ಣು ಮಕ್ಕಳೂ) ಪೂರ್ವ ಪ್ರಾಥಮಿಕ ಅಥವಾ ನರ್ಸರಿ ಶಿಕ್ಷಣ ಪಡೆಯಲು ಅವಕಾಶ ಲಭಿಸಿತು.

ಸರ್ಕಾರವು ಗ್ರಾಮೀಣ ಪ್ರದೇಶಗಳಲ್ಲಿನ ಪೂರ್ವ ಪ್ರಾಥಮಿಕ ಶಾಲೆಗಳಿಗೆ ಶೇ.೭೦ ರಷ್ಟನ್ನು ಮತ್ತು ನಗರ ಪ್ರದೇಶಗಳಲ್ಲಿನ ಶಾಲೆಗಳಿಗೆ ಶೇ.೫೦ರಷ್ಟು ಖರ್ಚು ವಹಿಸಿಕೊಳ್ಳುತ್ತಿತ್ತು. ಇದರಿಂದ ಪೂರ್ವ ಪ್ರಾಥಮಿಕ ಶಾಲೆಗಳು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚುವುದಕ್ಕೆ ಸಹಕಾರಿಯಾಯಿತು. ಈ ಶಾಲೆಗಳಲ್ಲಿ ಎಸ್.ಎಸ್.ಎಲ್.ಸಿ ಪಡೆದವರನ್ನು ಶಿಕ್ಷಕರನ್ನಾಗಿ ನೇಮಿಸಿಕೊಳ್ಳಲಾಗುತ್ತಿತ್ತು. ಇವರಲ್ಲಿ ಬಹುತೇಕವಾಗಿ ಮಹಿಳಾ ಶಿಕ್ಷಕಿಯರನ್ನು ಮಾತ್ರ ನೇಮಿಸಿಕೊಳ್ಳಲಾಗಿತ್ತು. ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಮಹಿಳಾ ಶಿಕ್ಷಕಿಯರೇ ಹೆಚ್ಚಾಗಿದ್ದುದರಿಂದ ನಗರ ಮತ್ತು ಗ್ರಾಮೀಣ ಪ್ರದೇಶಗಳ ನರ್ಸರಿ ಅಥವಾ ಪೂರ್ವ

ಪ್ರಾಥಮಿಕ ಶಾಲೆಗಳಿಗೆ ಬಾಲಕಿಯರ ಪ್ರವೇಶವು ಸಹ ಹೆಚ್ಚುವುದಕ್ಕೆ ಸಹಕಾರಿಯಾಯಿತು. ೧೯೪೫-೪೬ರಲ್ಲಿ ದಕ್ಷಿಣ ಕನ್ನಡದ ಕರಾವಳಿಯ ಪ್ರದೇಶದಲ್ಲಿ ಆರಿಸಿದ ಕೆಲವು ಭಾಗಗಳಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣ ಜಾರಿಗೆ ತರಲಾಯಿತು. ಇದು ಪೂರ್ವ ಪ್ರಾಥಮಿಕ ಶಿಕ್ಷಣದ ಮೇಲೆ ಪ್ರಭಾವ ಬೀರಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣದ ಪ್ರಗತಿಗೆ ಚಾಲನೆ ದೊರತಂತಾಯಿತು.

## ೧೯೫೬ ರಿಂದ ೧೯೭೬

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೪೫-೪೬ರಲ್ಲಿ ಜಾರಿಗೆ ತಂದ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ೧೯೫೭ರಲ್ಲಿ ಒತ್ತಾಯ ಪೂರ್ವಕವಾಗಿ ಅನುಷ್ಠಾನಗೊಳಿಸಲಾಯಿತು. ಇದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಎರಡು ನಗರ ಮತ್ತು ೨೨೨ ಹಳ್ಳಿಗಳಲ್ಲಿ, ೯(ನಗರ) ಮತ್ತು ೧೮೬(ಹಳ್ಳಿ) ಶಾಲೆಗಳನ್ನು ದಾಖಲಾತಿಗಾಗಿ ಒಳಪಡಿಸಲಾಯಿತು. ಇದು ಮುಂದಿನ ವರ್ಷಗಳಲ್ಲಿ ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಮಹಿಳೆಯರ ಪ್ರವೇಶದ ಬೆಳವಣಿಗೆಗೆ ಪ್ರೋತ್ಸಾಹವಾಯಿತು.

೧೯೭೦-೭೨ರ ಅಂಕಿ-ಅಂಶಗಳ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೭ ಅನುದಾನಕ್ಕೊಳಪಟ್ಟ ನರ್ಸರಿ ಶಾಲೆಗಳಿದ್ದವು. ಈ ಶಾಲೆಗಳಲ್ಲಿ ಒಟ್ಟು ೬೨೪ ವಿದ್ಯಾರ್ಥಿಗಳ ಪೈಕಿ ಬಾಲಕರ ಸಂಖ್ಯೆ ೨೦೮, ಬಾಲಕಿಯರ ಸಂಖ್ಯೆ ೩೨೬ ರಷ್ಟು ಇದ್ದರು. ಇದನ್ನು ಗಮನಿಸಿದರೆ ಈ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಪ್ರಾಥಮಿಕ ಶಿಕ್ಷಣವು ಪ್ರಗತಿಯತ್ತ ಸಾಗುತ್ತಿರುವುದು ಮತ್ತು ಪುರುಷರಿಗಿಂತ ಸ್ತ್ರೀಯರು ಸ್ವಲ್ಪ ಹೆಚ್ಚು ಕಡಿಮೆ ಎರಡು ಪಟ್ಟು ಹೆಚ್ಚು ಪ್ರವೇಶ ಪಡೆದಿರುವುದು ಸ್ತ್ರೀ ಶಿಕ್ಷಣದ ಬೆಳವಣಿಗೆಯ ಒಂದು ಗಮನಾರ್ಹವಾದ ಸಂಗತಿಯಾಗಿದೆ. ಈ ೧೭ ನರ್ಸರಿ ಶಾಲೆಗಳಲ್ಲಿ ೧೭ ತರಬೇತಿ ಹೊಂದಿದ ಶಿಕ್ಷಕರ ಪೈಕಿ ವಿರಾಮದ ಸದುಪಯೋಗಕ್ಕಾಗಿ ಒಬ್ಬ ಪುರುಷ ಶಿಕ್ಷಕನನ್ನು ಬಿಟ್ಟರೇ ಉಳಿದೆಲ್ಲವರು ಸಹ ಮಹಿಳೆಯರಾಗಿದ್ದರು. ಅಂದು ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ಮಹಿಳಾ ಶಿಕ್ಷಕರಿಗೆ ಮಾತ್ರ ಹೆಚ್ಚಿನ ಆದ್ಯತೆ ನೀಡಿದ್ದರು. ಆದ್ದರಿಂದಲೇ ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ಮಹಿಳೆಯರು ಹೆಚ್ಚಾಗಲು ಮತ್ತು ಪೋಷಕರು ಸಹ ಮಹಿಳೆಯರ ಶಿಕ್ಷಣಕ್ಕೆ ಗಮನಹರಿಸಲು ಅನುಕೂಲವಾಯಿತು.

ಮುನ್ಸಿಪಾಲ್ಟಿಯವರು ಅವರ ನೇತೃತ್ವದಲ್ಲಿ 'ಶಿಶು ವಿಹಾರ'ಗಳನ್ನು ನಡೆಸಲಾಗುತ್ತಿತ್ತು. ಅಲ್ಲದೇ ಸಮಾಜ ಕಲ್ಯಾಣ ಇಲಾಖೆಯಿಂದ ೧೯೭೧ ಡಿಸೆಂಬರ್ ನಲ್ಲಿ ೨೨ ಮಹಿಳಾ ಕಲ್ಯಾಣ ಕೇಂದ್ರಗಳನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನಡೆಸಲಾಗುತ್ತಿತ್ತು. ಇವುಗಳು ನರ್ಸರಿ ಶಿಕ್ಷಣ ಕೊಡುತ್ತಿದ್ದವು. ಈ ಶಿಕ್ಷಣದಲ್ಲಿ ಸುಮಾರು ಸಾವಿರ(೧೦೦೦) ವಿದ್ಯಾರ್ಥಿಗಳು ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರುತ್ತಿದ್ದರು. ಇದರಿಂದ ಹಿಂದುಳಿದ, ದುರ್ಬಲ ವರ್ಗದ ಬಾಲಕಿಯರ ಶಿಕ್ಷಣ ಅಭಿವೃದ್ಧಿಗೆ ಪ್ರೋತ್ಸಾಹ

ದೊರೆಯಿತು. ಈ ಪ್ರತಿಯೊಂದು ಮಹಿಳಾ ಕಲ್ಯಾಣ ಕೇಂದ್ರದ ಆಡಳಿತ ನಿರ್ವಹಣೆ ಮಹಿಳಾ ಕಾರ್ಯಕರ್ತರಿಂದಲೇ ನಡೆಯುತ್ತಿತ್ತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಅವಧಿಯಲ್ಲಿ ಉತ್ತಮ ರೀತಿಯಲ್ಲಿ ಬಾಲಕಿಯರ ಪೂರ್ವ ಪ್ರಾಥಮಿಕ ಶಿಕ್ಷಣ ಅಭಿವೃದ್ಧಿ ಹೊಂದಿತು.

**೧೯೭೬ ರಿಂದ ೧೯೯೬**

ಈ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಪ್ರಾಥಮಿಕ ಶಿಕ್ಷಣದ ಪ್ರಗತಿಯನ್ನು ಅವಲೋಕಿಸಿದರೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಹಯೋಗದೊಂದಿಗೆ ಹಮ್ಮಿಕೊಂಡಿರುವ ವಿವಿಧ ಯೋಜನೆಗಳಿಂದ ಪೂರ್ವ ಪ್ರಾಥಮಿಕ ಶಿಕ್ಷಣದ ಸಮಸ್ಯೆಗಳನ್ನು ಪರಿಹರಿಸಿಕೊಂಡು ಪ್ರತಿಯೊಂದು ಹಳ್ಳಿಗೂ ಒಂದು ಪೂರ್ವ ಪ್ರಾಥಮಿಕ ಶಾಲೆಯನ್ನು ತೆರೆಯುವ ನಿಟ್ಟಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರತಿಯೊಂದು ಹಳ್ಳಿ(ಊರು)ಯಲ್ಲಿ ಸರ್ಕಾರದ ಸಹಯೋಗದೊಂದಿಗೆ ಜಿಲ್ಲಾ ಉಸ್ತುವಾರಿ ಅಧಿಕಾರಿಗಳು ಗಮನಹರಿಸಿರು. ಇದರ ಫಲವಾಗಿ ಹೊಸ ಪ್ರಾಥಮಿಕ ಶಾಲೆಗಳನ್ನು ಕೆಲವು ಭಾಗಗಳಲ್ಲಿ ತೆರೆದು ಹಳೆಯ ಪೂರ್ವಪ್ರಾಥಮಿಕ ಶಾಲೆಗಳನ್ನು ಬಲಪಡಿಸುವ ಯೋಜನೆಗಳನ್ನು ಹಾಕಿಕೊಂಡಿದ್ದರಿಂದ ಅನೇಕ ಸೌಲಭ್ಯಗಳನ್ನು ಮತ್ತು ಶಿಕ್ಷಕರಿಗೆ ಉತ್ತಮ ತರಬೇತಿಯನ್ನು ನೀಡಿ ಉತ್ತಮ ಮಟ್ಟದಲ್ಲಿ ಪೂರ್ವ ಪ್ರಾಥಮಿಕ ಶಿಕ್ಷಣದ ಪ್ರಗತಿಗೆ ಅಲ್ಲಿನ ಸರ್ಕಾರಿ, ಖಾಸಗಿ, ಅನುದಾನರಹಿತ ಖಾಸಗಿ ಸಂಸ್ಥೆಗಳು, ಸ್ಥಳೀಯ ಸಂಸ್ಥೆಗಳ ಸಹಕಾರದಿಂದ ಇಂದು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿನ ಬಾಲಕಿಯರ ಪೂರ್ವ ಪ್ರಾಥಮಿಕ ಶಿಕ್ಷಣದ ಪ್ರಗತಿಗೆ ಶ್ರಮಿಸುತ್ತಿವೆ ಮತ್ತು ಪ್ರಗತಿಯತ್ತ ಕೊಂಡೊಯ್ದಿವೆ ಎಂದು ಹೇಳಬಹುದು.

**೧೯೯೬ ರಿಂದ ೨೦೦೦ದವರೆಗೆ**

ಈ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ಪ್ರಾಥಮಿಕ ಶಿಕ್ಷಣವು ಪ್ರತಿಯೊಂದು ಹಳ್ಳಿಗಳಿಗೂ ತಲುಪಿ ಅಲ್ಲಿನ ದುರ್ಬಲ ವರ್ಗದವರಿಗೆ, ಹಿಂದುಳಿದವರಿಗೆ, ಅಲ್ಪ ಸಂಖ್ಯಾತರಿಗೆ ವಿವಿಧ ಯೋಜನೆಗಳಡಿಯಲ್ಲಿ ಅಂದರೆ ಪ್ರತಿಯೊಂದು ಪಂಚವಾರ್ಷಿಕ ಯೋಜನೆಗಳಲ್ಲಿ ಶಿಶುವಿಹಾರಗಳನ್ನು ಪ್ರಾರಂಭಿಸುತ್ತ ಬಂದಿದೆ. ಸರ್ಕಾರ ಇದರಂತೆ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಹೊಸ ಶಿಶುವಿಹಾರಗಳನ್ನು ಪ್ರಾರಂಭಿಸಿದೆ. ಈಗಾಗಲೇ ನಗರ ಜಿಲ್ಲೆಯಲ್ಲೂ ಹೊಸ ಶಿಶುವಿಹಾರಗಳನ್ನು ಪ್ರಾರಂಭಿಸಿದೆ. ಈಗಾಗಲೇ ನಗರ ಪ್ರದೇಶಗಳಲ್ಲಿ ಸಾಕಷ್ಟಿವೆ. ಇವುಗಳಲ್ಲಿ ಹೆಚ್ಚಾಗಿ ಇಂಗ್ಲಿಷ್ ಮಾಧ್ಯಮ ಪೂರ್ವ ಪ್ರಾಥಮಿಕ ಶಾಲೆಗಳಿವೆ. ಬಾಲ ಸೇವಿಕಾ ಶಿಕ್ಷಣ ಕೇಂದ್ರದ ಶಿಶುವಿಹಾರ ಶಿಕ್ಷಿಕಿಯರ ತರಬೇತಿ ಶಿಕ್ಷಣ ಸಂಸ್ಥೆಗಳಲ್ಲಿ ತರಬೇತಿಯನ್ನು ಪಡೆಯುತ್ತಾರೆ. ಇತ್ತೀಚಿನ ದಿನಗಳಲ್ಲಿ ಸರ್ಕಾರಿ, ಖಾಸಗಿ ಸಂಸ್ಥೆಗಳಲ್ಲೂ ಶಿಶು ವಿಹಾರ ಶಿಕ್ಷಕರ ತರಬೇತಿಯನ್ನು ನೀಡಲಾಗುತ್ತಿದೆ.

ಅಲ್ಲದೇ ಅವುಗಳ ಮೇಲ್ವಿಚಾರಣೆ, ತನಿಖೆ, ಆಡಳಿತ ವ್ಯವಸ್ಥೆ ಮುಂತಾದವುಗಳು ಸಹ ಉತ್ತಮ ದಕ್ಷತೆಯಿಂದ ಕಾರ್ಯನಿರ್ವಹಿಸಲು ಯೋಜಿಸಿದೆ. ಪೂರ್ವ ಪ್ರಾಥಮಿಕ ಶಾಲೆಗಳಲ್ಲಿ ಬಹುತೇಕವಾಗಿ ಮಹಿಳಾ ಶಿಕ್ಷಕಿಯರನ್ನು ಮಾತ್ರ ನೇಮಕ ಮಾಡಿರುವುದು ಮಕ್ಕಳ ಪೋಷಣೆ, ಶಿಕ್ಷಣಕ್ಕೆ ಮಕ್ಕಳನ್ನು ಸಿದ್ಧತೆಗೊಳಿಸುವ ಕಾರ್ಯ, ಮಕ್ಕಳ ಆರೋಗ್ಯ ಉತ್ತಮ ಪಡಿಸಲು ಸಹಾಯಕವಾಗಿದೆ. ಇದರಿಂದಾಗಿ ಬಹುತೇಕವಾಗಿ ಎಲ್ಲಾ ತಾಲ್ಲೂಕ್, ಹಳ್ಳಿ, ನಗರಗಳಲ್ಲೂ ಪೂರ್ವ ಪ್ರಾಥಮಿಕ ಶಿಕ್ಷಣ ಗಮನಾರ್ಹವಾದ ಪ್ರಗತಿ ಸಾಧಿಸುತ್ತಿದೆ ಎಂದು ಹೇಳಬಹುದು.

## ಪ್ರಾಥಮಿಕ ಶಿಕ್ಷಣ ೧೯೦೦ ರಿಂದ ೧೯೫೬ವರೆಗೆ

ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಥಮಿಕ ಶಿಕ್ಷಣವು ೧೯೦೦ರ ಪೂರ್ವದಲ್ಲಿ, ನಂತರದಲ್ಲೂ ಸ್ಥಳೀಯ ಸಂಸ್ಥೆಗಳು, ಮುನ್ಸಿಪಾಲ್ಟಿ, ಮಿಶನರಿ ಮತ್ತು ಇತರೆ ಖಾಸಗಿ ಸಂಸ್ಥೆಗಳ ನೇತೃತ್ವದಲ್ಲಿ ನಡೆಯುತ್ತಿತ್ತು. ೧೮೫೫ರ 'ಸಹಾಯಕ ಅನುದಾನ ಸಂಹಿತೆ' ಅನೇಕ ಶಾಲೆಗಳನ್ನು ದೇಶಿ ಶಾಲೆಗಳನ್ನಾಗಿ ಮಾಡಿತು. ೧೮೭೧ರ 'ಸ್ಥಾನಿಕ ಅಧಿನಿಯಮ'ಗಳಿಂದ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಥಮಿಕ ಶಾಲೆಗಳ ಸ್ಥಾಪನೆ, ನಿರ್ವಹಣೆ, ಸಮೀಕ್ಷೆ, ಸ್ಥಳೀಯ ಸಂಸ್ಥೆಗಳ ಧನ ಸಹಾಯ ನೀತಿಗಳ ಬದಲಾವಣೆಗಳಿಂದ ಪ್ರಾಥಮಿಕ ಶಿಕ್ಷಣಕ್ಕೆ ಸುಭದ್ರವಾದ ತಳಹದಿಯನ್ನು ಹಾಕಿದವು. ಈ ತಳಹದಿಯ ಮೇಲೆ ಮುಂದೇ ಪ್ರಾಥಮಿಕ ಶಿಕ್ಷಣದಲ್ಲಿ ಹೆಚ್ಚಿನ ಪ್ರಗತಿಯನ್ನು ಕಾಣಬಹುದು. ಸರ್ಕಾರವು ಪ್ರಾಥಮಿಕ ಶಿಕ್ಷಣದ ಪ್ರಗತಿಯಲ್ಲಿ ಹೆಣ್ಣು ಮಕ್ಕಳ ಸಂಖ್ಯೆ ಜಾಸ್ತಿಯಾಗುವುದಕ್ಕೆ ಅನುಕೂಲವಾದ ಅಂಶಗಳೆಂದರೆ ಆಂಗ್ಲ ಮಾಧ್ಯಮದ ಶಾಲೆಗಳನ್ನು 'ದೇಶಿ ಶಾಲೆ'ಗಳನ್ನಾಗಿ ಮಾಡಿ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವಿಕೆ ಮತ್ತು ಪ್ರಾಥಮಿಕ ಶಿಕ್ಷಣದ ಸೌಲಭ್ಯಗಳು ಉತ್ತಮವಾದ ರೀತಿಯಲ್ಲಿ ಪೂರೈಸಲಾಯಿತು. ಇದರಿಂದ ೧೯೦೦ ನಂತರವೂ ಸಹ ಇದೇ ಬುನಾದಿಯ ಮೇಲೆ ಒಂದು ನಿರ್ಧಿಷ್ಟ ರೂಪವನ್ನು ಪಡೆದುಕೊಂಡು ಪ್ರಗತಿಯ ಪಥದಲ್ಲಿ ಸಾಗಿತು.

೧೯೧೪ರಲ್ಲಿ ಪ್ರಾರಂಭವಾದ ಪ್ರಪಂಚದ ಮಹಾಯುದ್ಧವು ಶಿಕ್ಷಣದ ಮೇಲೆ ಪ್ರಭಾವ ಬೀರಿತು ಆದರೂ ಕೇಂದ್ರ ಸರ್ಕಾರದ ವಿಶೇಷ ಧನಸಹಾಯದಿಂದ ಪ್ರಾಥಮಿಕ ಶಿಕ್ಷಣದಲ್ಲಿ ಗಮನಾರ್ಹವಾದ ವಿಸ್ತರಣೆಯಾಯಿತು. 'ಮದ್ರಾಸ್ ಪ್ರಾಥಮಿಕ ಶಿಕ್ಷಣ ಅಧಿನಿಯಮ'(ಅಧಿನಿಯಮ-VII ೧೯೨೦)ವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಾಥಮಿಕ ಶಿಕ್ಷಣದ ನಿರ್ವಹಣೆ, ಧನಸಹಾಯ, ಸಮೀಕ್ಷೆ ಮುಂತಾದವುಗಳಲ್ಲಿ ಬಹುತೇಕ ಬದಲಾವಣೆಯನ್ನು ತಂದಿತು. ಇದರಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಾಲಕಿಯರು ಗಂಡು ಮಕ್ಕಳ ಶಾಲೆಗೆ ಸೇರುವ ಅವಕಾಶವನ್ನಷ್ಟೇ ಅಲ್ಲದೇ ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳಿದ್ದುದು ಬಹಳ ಅಪರೂಪವಾಗಿತ್ತು. ಅದನ್ನು ಹೋಗಲಾಡಿಸುವ ನಿಟ್ಟಿನಲ್ಲಿ

ಬಾಲಕಿಯರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯುವ ಅವಕಾಶ ಸಿಕ್ಕಿತು ಇದರಿಂದ ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು.

೧೯೨೦-೨೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗಂಡು ಮಕ್ಕಳ ಶಾಲೆಗಳ ಸಂಖ್ಯೆ ೬೧೪ಕ್ಕೆ ಏರಿತು. ಹೆಣ್ಣು ಮಕ್ಕಳ ಶಾಲೆಗಳ ಸಂಖ್ಯೆ ೪೮ಕ್ಕೆ ಏರಿತು. ೧೯೨೩ರಲ್ಲಿ ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸುವ ದೃಷ್ಟಿಯಿಂದ ಎರಡು ಸಮ್ಮೇಳನಗಳನ್ನು ಮಾಡಲಾಯಿತು. ಇದರಿಂದ ಗ್ರಾಮೀಣ ಜನತೆಗೆ ಶಿಕ್ಷಣ ಒದಗಿಸುವುದು ಅಗತ್ಯವೆಂದು ತಿಳಿದು ಅದಕ್ಕೆ ಹೆಚ್ಚಿನ ಗಮನ ಕೊಡಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದರಿಂದ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿದ್ದ ಬಾಲಕಿಯರು ಸೌಲಭ್ಯಗಳಿಲ್ಲದೇ ಶಿಕ್ಷಣದಿಂದ ವಂಚಿತರಾಗಿದ್ದರು ಇವರು ಶಿಕ್ಷಣ ಪಡೆಯಲು ಅನುಕೂಲವಾಗುವ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಗ್ರಾಮೀಣ ಮಹಿಳೆಯರಿಗೆ ಶಿಕ್ಷಣ ಒದಗಿಸುವುದಕ್ಕೆ ಒತ್ತು ನೀಡಲಾಯಿತು. ಅಲ್ಲದೇ ೧೯೨೪ರಲ್ಲಿ ವಿಶೇಷ ಸಮೀಕ್ಷೆಯನ್ನು ನಡೆಸಿ ಮದ್ರಾಸ್ ಪ್ರೆಸಿಡೆನ್ಸಿ ಸರಕಾರಕ್ಕೆ ವರದಿಯನ್ನು ಒಪ್ಪಿಸಲಾಯಿತು. ಇದರಿಂದ ಸರಕಾರ ಹೆಚ್ಚು ಪ್ರಾಥಮಿಕ ಶಾಲೆಗಳನ್ನು ತೆರೆಯಿತು. ಆಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶಾಲೆಗಳಿಲ್ಲದೇ ವಂಚಿತರಾಗಿದ್ದ ಮಹಿಳೆಯರು ಶಿಕ್ಷಣ ಪಡೆಯುವಂತಾಯಿತು. ಮತ್ತು ಮಹಿಳಾ ಶಿಕ್ಷಣದಲ್ಲಿ ಪ್ರಗತಿಯನ್ನು ಹೊಂದಲು ಸಹಕಾರಿಯಾಯಿತು. ೧೮೯೩ರಲ್ಲಿ ೪೩೭ ಶಾಲೆಗಳಿದ್ದವು ೧೯೩೩-೩೪ರಷ್ಟೊತ್ತಿಗೆ ೧,೧೭೯ ಪ್ರಾಥಮಿಕ ಶಾಲೆಗಳಾದವು. ಇದರಲ್ಲಿ ಒಟ್ಟು ೮೬,೩೮೯ ವಿದ್ಯಾರ್ಥಿಗಳಿದ್ದು ಅವರಲ್ಲಿ ಬಾಲಕರು ಸುಮಾರು ಶೇ.೬೦ರಷ್ಟು, ಬಾಲಕಿಯರು ಶೇ.೪೦ರಷ್ಟಿತ್ತು. ೧೯೨೦ ರಿಂದ ೧೯೪೭ರ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಥಮಿಕ ಶಿಕ್ಷಣದಲ್ಲಿ ಬಹಳ ವಿಸ್ತಾರಗೊಂಡಿತು. ಮಹಿಳಾ ಶಿಕ್ಷಣವೂ ಸಹ ವಿಸ್ತಾರಗೊಂಡು ಪ್ರಾಥಮಿಕ ಶಿಕ್ಷಣದಲ್ಲಿ ಗಮನಾರ್ಹವಾದ ಅಭಿವೃದ್ಧಿಯನ್ನು ಕಾಣಬಹುದು.

೧೯೪೫-೪೬ರಲ್ಲಿ ದಕ್ಷಿಣ ಕನ್ನಡದ ಕರಾವಳಿಯ ಪ್ರದೇಶದಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಜಾರಿಗೆ ತರಲಾಯಿತು. ನಂತರದಲ್ಲಿ ಪ್ರಾಥಮಿಕ ಶಿಕ್ಷಣ ವಿಸ್ತರಿಸುವ ಯೋಜನೆಯನ್ನು ಅನುಷ್ಠಾನಗೊಳಿಸಿತು. ಈ ದಿಶೆಯಲ್ಲಿ ಬಾಲಕಿಯರು ಕಡ್ಡಾಯವಾಗಿ ಶಾಲೆಗೆ ಸೇರುವ ಅವಕಾಶ ಸಿಕ್ಕಿ ಪ್ರಾಥಮಿಕ ಶಿಕ್ಷಣದಲ್ಲಿ ಬಾಲಕಿಯರು ಸಕ್ರಿಯವಾಗಿ ಭಾಗವಹಿಸುವಂತಾಯಿತು. ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೦೦ ರಿಂದ ೧೯೫೬ ರವರೆಗೆ ಮಹಿಳೆಯರ ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿ ಅದರ ಪ್ರಗತಿಯತ್ತ ಕೊಂಡ್ಯೊಯುವಲ್ಲಿ ಸ್ಥಳೀಯ ಸಂಸ್ಥೆಗಳು, ಖಾಸಗಿ ಸಂಸ್ಥೆಗಳು, ನಗರ ಸಭೆಗಳು, ಮಿಶನರಿಗಳು ಶ್ರಮಿಸಿದವು. ಜೊತೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪರೋಕ್ಷವಾಗಿ, ಪ್ರತ್ಯೇಕ್ಷವಾಗಿ ಪಾಲ್ಗೊಂಡಿವೆ ಎಂದು ಹೇಳಬಹುದು.

## ೧೯೫೬ ರಿಂದ ೧೯೭೬ ರವರೆಗೆ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೫೭ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಒತ್ತಡವನ್ನು ಎರಡು ಪಟ್ಟಣಗಳಲ್ಲೂ ಮತ್ತು ೨೨೨ ಗ್ರಾಮಗಳಲ್ಲೂ ಹಮ್ಮಿಕೊಳ್ಳಲಾಯಿತು. ಈ ಯೋಜನೆಗೆ ಪಟ್ಟಣದ ೯ ಶಾಲೆಗಳಲ್ಲಿ ಮತ್ತು ೧೮೬ ಶಾಲೆಗಳು ಹಳ್ಳಿಗಳಲ್ಲಿ ಆಯ್ಕೆಯಾದವು. ಇದರಿಂದ ನಗರ(ಪಟ್ಟಣ) ಪ್ರದೇಶಗಳಲ್ಲಿ ೧೧೫೨ ಬಾಲಕರು ಮತ್ತು ೯೬೪ ಬಾಲಕಿಯರು ಪ್ರಾಥಮಿಕ ಶಿಕ್ಷಣಕ್ಕೆ ದಾಖಲಾದರು. ಇದರಿಂದ ಸ್ವಲ್ಪ ಹೆಚ್ಚು ಕಮ್ಮಿ ಬಾಲಕರಷ್ಟೇ ಸರಿಸಮಾನವಾದ ರೀತಿಯಲ್ಲಿ ಪ್ರಾಥಮಿಕ ಶಿಕ್ಷಣದಲ್ಲಿ ಬಾಲಕಿಯರು ದಾಖಲಾಗುವುದಕ್ಕೆ ಅನುಕೂಲವಾಯಿತು. ಅಲ್ಲದೇ ನಗರ ಮತ್ತು ಗ್ರಾಮೀಣ ಪ್ರದೇಶದ ಬಾಲಕಿಯರು ಅದರಲ್ಲೂ ಹೆಚ್ಚು ಗ್ರಾಮೀಣ ಬಾಲಕಿಯರು ಪ್ರಾಥಮಿಕ ಶಿಕ್ಷಣದ ಹೆಚ್ಚಿನ ಸೌಲಭ್ಯ ಪಡೆಯಲು ಮತ್ತು ಪ್ರಾಥಮಿಕ ಶಿಕ್ಷಣಕ್ಕೆ ಸೇರಲು ಅನುಕೂಲವಾಯಿತು.

ಈ ಅವಧಿಯಲ್ಲಿ ಪ್ರಾಥಮಿಕ ಶಿಕ್ಷಣವು ಎರಡು ಹಂತದಲ್ಲಿ ನಡೆಯುತ್ತಿತ್ತು. ೧ನೇ ಹಂತದಲ್ಲಿ ೧ ರಿಂದ ೫ನೇ ತರಗತಿಯವರೆಗೆ ಕಿರಿಯ ಪ್ರಾಥಮಿಕ ಶಾಲೆಗಳೆಂದು ೨ನೇ ಹಂತದಲ್ಲಿ ೧ ರಿಂದ ೭ನೇ ತರಗತಿಯವರೆಗೆ ಶಿಕ್ಷಣ ನೀಡುವ ಶಾಲೆಗಳನ್ನು ಹಿರಿಯ ಪ್ರಾಥಮಿಕ ಶಾಲೆಗಳೆಂದು ವರ್ಗೀಕರಿಸಲಾಗಿತ್ತು. ಆಗ ಸಾರ್ವಜನಿಕ ಶಿಕ್ಷಣ ಇಲಾಖೆಯು ೧೯೫೭-೫೮ರಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ೧೧೫ ಕಿರಿಯ ಪ್ರಾಥಮಿಕ ಶಾಲೆಗಳು, ೬೭ ಮಾಧ್ಯಮಿಕ ಶಾಲೆಗಳು ನಗರ ಪ್ರದೇಶದಲ್ಲಿದ್ದವು. ಅನುಕ್ರಮವಾಗಿ ೧೫,೭೯೪ ಬಾಲಕರು, ೧೨,೩೫೮ ಬಾಲಕಿಯರು ಕಿರಿಯ ಪ್ರಾಥಮಿಕ ಶಾಲೆಗಳಲ್ಲೂ, ೬,೩೪೮ ಬಾಲಕರು, ೪,೨೫೯ ಬಾಲಕಿಯರು ಹಿರಿಯ ಪ್ರಾಥಮಿಕ ಶಾಲೆಗಳಲ್ಲಿದ್ದರು. ಈ ಅವಧಿಯಲ್ಲಿ ಪುರುಷರಿಗಿಂತ ಸ್ತ್ರೀಯರು ಅವರ ಜನಸಂಖ್ಯೆಗನುಣವಾಗಿ ಗಮನಿಸಿದರೆ ಹೆಚ್ಚು ಪ್ರವೇಶ ಪಡೆದಿದ್ದು, ಕಿರಿಯ ಪ್ರಾಥಮಿಕ ಶಾಲೆಗಳಾದ ಹಿರಿಯ ಪ್ರಾಥಮಿಕ ಶಾಲೆಗಳಿಗೆ ೧/೩ಭಾಗ ಮಾತ್ರ ಪ್ರವೇಶ ಮುಂದುವರಿಸಿದ್ದು, ಇನ್ನುಳಿದ ಎರಡು ಭಾಗ ಬಾಲಕಿಯರು ಹಿರಿಯ ಪ್ರಾಥಮಿಕ ಶಿಕ್ಷಣದಿಂದ ವಂಚಿತರಾಗಿರುತ್ತಾರೆ. ಗ್ರಾಮೀಣ ಪ್ರದೇಶದಲ್ಲಿ ೧,೦೯೬ ಕಿರಿಯ ಪ್ರಾಥಮಿಕ ಶಾಲೆಗಳಿದ್ದು, ೭೭,೧೯೯ ಬಾಲಕರು, ೫೦,೧೭೦ ಬಾಲಕಿಯರು ಈ ಶಾಲೆಗಳಲ್ಲಿ ಪ್ರವೇಶ ಪಡೆದಿದ್ದರು. ಹಾಗೆಯೇ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ೧೩, ೭೮೦ ಬಾಲಕರು, ೬,೮೪೧ ಬಾಲಕಿಯರು ಒಟ್ಟು ೨೨೪ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿದ್ದರು. ಇಲ್ಲಿ ಮುಖ್ಯವಾಗಿ ಗಮನಿಸುವುದಾದರೆ ಗ್ರಾಮೀಣ ಪ್ರದೇಶದಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ಪ್ರವೇಶ ಪಡೆದ ಬಾಲಕಿಯರು ಹಿರಿಯ ಪ್ರಾಥಮಿಕ ಶಾಲೆಗಳಿಗೆ ಮುಂದುವರಿಯುವುದು ಶೇ.೧೦ ರಷ್ಟು ಇನ್ನೂ ಶೇ.೯೦ರಷ್ಟು ಮಹಿಳೆಯರು ಹಿರಿಯ ಪ್ರಾಥಮಿಕ ಶಿಕ್ಷಣಕ್ಕೆ ಹೋಗದೇ ಇರುವುದನ್ನು ಕಾಣಬಹುದು.

೧೯೬೧ರಲ್ಲಿ ಕರ್ನಾಟಕ ರಾಜ್ಯದಲ್ಲಿ ಪ್ರಾಥಮಿಕ ಶಿಕ್ಷಣ ಕಡ್ಡಾಯವಾಯಿತು. ಆಗ ಮೊದಲೇ ಜಾರಿಯಲ್ಲಿದ್ದ ಆ ಯೋಜನೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮತ್ತಷ್ಟು ಬಲಗೊಂಡು ಬಾಲಕಿಯರ ಶಿಕ್ಷಣಕ್ಕೆ ಹೆಚ್ಚು ಪ್ರಾಶಸ್ತ್ಯ ದೊರಕಿತು. ೧೯೫೭-೫೮ ರಿಂದ ೧೯೬೭-೬೮ರ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ತ್ವರಿತಗತಿಯಲ್ಲಿ ಪ್ರಗತಿಯನ್ನು ಹೊಂದಿದವು. ಆಗ ೧ ರಿಂದ ೪ನೇ ತರಗತಿಯವರೆಗೆ ಕಿರಿಯ ಪ್ರಾಥಮಿಕ ಶಾಲೆಗಳೆಂದು ೧ ರಿಂದ ೭ ಅಥವಾ ೫ ರಿಂದ ೭ನೇ ತರಗತಿಯವರೆಗೆ ಹಿರಿಯ ಪ್ರಾಥಮಿಕ ಶಾಲೆಗಳೆಂದು ಕರೆಯಲಾಗುತ್ತಿತ್ತು. ಮುಂದೇ ೧೯೬೭-೬೮ರಲ್ಲಿ ಇವುಗಳನ್ನು ಜೂನಿಯರ್ ಪ್ರಾಥಮಿಕ ಶಾಲೆಗಳು, ಸೀನಿಯರ್ ಪ್ರಾಥಮಿಕ ಶಾಲೆಗಳೆಂದು ಕರೆಯಲಾಯಿತು. ಆಗ ೪೧೧ ಜೂನಿಯರ್ ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ ३೦೮ ಸರಕಾರವು ೯೭ ಸ್ಥಳೀಯ ಸಂಸ್ಥೆಗಳು ೬ ಖಾಸಗಿ ಸಂಸ್ಥೆಗಳು ನಡೆಸುತ್ತಿದ್ದವು. ಇವುಗಳಲ್ಲಿದ್ದ ಒಟ್ಟು ವಿದ್ಯಾರ್ಥಿಗಳಲ್ಲಿ ೧,೧೪,೧೪೬ ಬಾಲಕರು, ೮೭,೦೦೦ ಬಾಲಕಿಯರು ಓದುತ್ತಿದ್ದರು. ಆಗ ೧೦,೦೦೦ ಜನಸಂಖ್ಯೆಗೆ ೧,೧೨೬ ವಿದ್ಯಾರ್ಥಿಗಳು ಜೂನಿಯರ್ ಪ್ರಾಥಮಿಕ ಶಾಲೆಗಳಿಗೆ ಬರುತ್ತಿದ್ದರು. ಇದರಲ್ಲಿ ಮಹಿಳಾ ವಿದ್ಯಾರ್ಥಿಗಳು ಸುಮಾರು ಶೇ.೫೦ ರಿಂದ ೬೦ ರಷ್ಟು ಇರುತ್ತಿದ್ದರು. ಹಾಗೆಯೇ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ೭೮ ಸರಕಾರವು, ೬೦೬ ಸ್ಥಳೀಯ ಸಂಸ್ಥೆಗಳು ೪೭೧ ಖಾಸಗಿ ಸಂಸ್ಥೆಗಳು ನಡೆಸುತ್ತಿದ್ದು, ಒಟ್ಟು ೧೧೫೫ ಇದ್ದವು. ಇವುಗಳಲ್ಲಿ ೫೦,೧೩೩ ಬಾಲಕರು, ३३,೯೨೧ ಬಾಲಕಿಯರು ಓದುತ್ತಿದ್ದು, ೧೦,೦೦೦ ಜನಸಂಖ್ಯೆಗೆ ೪೭೦ ವಿದ್ಯಾರ್ಥಿಗಳು ಹಿರಿಯ ಪ್ರಾಥಮಿಕ ಶಾಲೆಗಳಿಗೆ ಬರುತ್ತಿದ್ದರು. ಇದನ್ನು ಗಮನಿಸಿದರೆ ಕಿರಿಯ ಪ್ರಾಥಮಿಕ ಶಿಕ್ಷಣದಲ್ಲಿ ಬಾಲಕಿಯರು ಮುಂದೇ ಇದ್ದು ಹಿರಿಯ ಪ್ರಾಥಮಿಕ ಶಿಕ್ಷಣದಲ್ಲಿ ಹಿಂದುಳಿದಿರುವಿಕೆಯನ್ನು ನೋಡಬಹುದು.

೧೯೭೧-೭೨ರಲ್ಲಿ ಸರಕಾರವು ಖಾಸಗಿ ಕ್ಷೇತ್ರದಲ್ಲಿದ್ದ ಪ್ರಾಥಮಿಕ ಶಾಲೆಗಳನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಇವುಗಳಲ್ಲಿ ४೮೯ ಕಿರಿಯ ಪ್ರಾಥಮಿಕ ಶಾಲೆಗಳು, ೧೧೬೦ ಹಿರಿಯ ಪ್ರಾಥಮಿಕ ಶಾಲೆಗಳಾಗಿದ್ದವು. ಇವುಗಳಲ್ಲಿ ೬ ಕಿರಿಯ ಪ್ರಾಥಮಿಕ ಶಾಲೆಗಳು ೪೮೦ ಹಿರಿಯ ಪ್ರಾಥಮಿಕ ಶಾಲೆಗಳು ಖಾಸಗಿ ಸಂಸ್ಥೆಗಳು ನಡೆಸುತ್ತಿದ್ದವು. ಈ ವರ್ಷದಲ್ಲಿ ೧ರಿಂದ ೪ನೇ ತರಗತಿಯಲ್ಲಿ ೧,೨೬,೯३೨ ಬಾಲಕರು ೯೬,೫೯೪ ಬಾಲಕಿಯರು ಮತ್ತು ೫ರಿಂದ ೭ನೇ ತರಗತಿಯಲ್ಲಿ ೫೭,೯೪೪ ಬಾಲಕರು, ३೯,೯೯೦ ಬಾಲಕಿಯರು ಓದುತ್ತಿದ್ದರು. ಈ ಕಿರಿಯ ಪ್ರಾಥಮಿಕ ಶಾಲೆಗಳಲ್ಲಿ ೬೦೭ ಜನ ಕಾರ್ಯ ನಿರ್ವಹಿಸುತ್ತಿದ್ದು, ಇವರಲ್ಲಿ ತರಬೇತಿ ಹೊಂದಿದ ೪೦३ ಪುರುಷ ಶಿಕ್ಷಕರು ೧३३ ಹೆಂಗಸರು ಮತ್ತು ತರಬೇತಿ ಹೊಂದದೇ ಇದ್ದವರಲ್ಲಿ ೬೧ ಪುರುಷರು, ೧೦(೧೦) ಮಹಿಳಾ ಶಿಕ್ಷಕಿಯರಿದ್ದರು. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ೭೨೦೦ ಶಿಕ್ಷಕರು ಕೆಲಸ ಮಾಡುತ್ತಿದ್ದು ಇವರಲ್ಲಿ ತರಬೇತಿ ಪಡೆದ ೪,೦೧೮ ಪುರುಷ, ೨,೯೦೫ ಮಹಿಳಾ

ಶಿಕ್ಷಕಿಯರಿದ್ದರು. ತರಬೇತಿ ಪಡೆಯದಿರುವ ೧೬೯ ಪುರುಷರು, ೧೦೮ ಮಹಿಳಾ ಶಿಕ್ಷಕಿಯರಿದ್ದರು. ಒಟ್ಟಾರೇ ತರಬೇತಿ ಹೊಂದಿದ ಶಿಕ್ಷಕರು ಶೇ.೯೫ರಷ್ಟು ಇದ್ದು ಮಹಿಳಾ ಶಿಕ್ಷಕಿಯರಿಗೆ ಆದ್ಯತೆ ನೀಡಿದ್ದರಿಂದ ಬಾಲಕಿಯರ ಶಿಕ್ಷಣಕ್ಕೆ ಅನುಕೂಲವಾಯಿತು. ೧೯೫೬-೧೯೭೬ರ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಹಿಳೆಯರ ಪ್ರಾಥಮಿಕ ಶಿಕ್ಷಣಕ್ಕೆ ೧೯೫೭ರ ಕಡ್ಡಾಯ ಪ್ರಾಥಮಿಕ ಶಿಕ್ಷಣದ ಒತ್ತಡ, ೧೯೬೧ರ ಕಡ್ಡಾಯ ಪ್ರಾಥಮಿಕ ಶಿಕ್ಷಣ ಶಾಸನ ಜಾರಿಗೊಳಿಸಿದ್ದು, ೧೯೬೨-೬೩ರಲ್ಲಿ ಹೊಸ ಪಠ್ಯ ಕ್ರಮವನ್ನು ಪ್ರಾರಂಭಿಸಿ ಏಕರೂಪತೆಯನ್ನು ತಂದಿದ್ದು, ೧೯೬೬-೬೭ರಲ್ಲಿ ಎಲ್ಲರಿಗೂ ಉಚಿತ ಪ್ರಾಥಮಿಕ ಶಿಕ್ಷಣ, ೧೯೭೧-೭೨ರಲ್ಲಿ ಖಾಸಗಿ ಕ್ಷೇತ್ರದ ಶಾಲೆಗಳನ್ನು ಸರಕಾರ ತನ್ನ ವಶಕ್ಕೆ ತೆಗೆದುಕೊಂಡಿದ್ದರಿಂದ ಇವೆಲ್ಲವುಗಳು ಮಹಿಳಾ ಶಿಕ್ಷಣದ ಮೇಲೆ ಪ್ರಭಾವ ಬೀರಿ ಈ ಜಿಲ್ಲೆಯ ಪ್ರಾಥಮಿಕ ಶಿಕ್ಷಣದಲ್ಲಿ ಮಹಿಳೆಯರು ಹೆಚ್ಚು ಪ್ರಗತಿ ಹೊಂದುವಂತಾಯಿತು.

**೧೯೭೬ ರಿಂದ ೧೯೯೬**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೭೬ರಲ್ಲಿ ಸರಕಾರವು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಗಮನ ನೀಡಿದರೂ ಹೆಣ್ಣು ಮಕ್ಕಳ ಶಿಕ್ಷಣದಲ್ಲಿದ್ದ ಅಪವ್ಯಯ ಮತ್ತು ನಿಲುಗಡೆ ಸಮಸ್ಯೆಯನ್ನು ಪರಿಹರಿಸಿಕೊಳ್ಳುವಲ್ಲಿ ಮಂದಗತಿಯಲ್ಲಿತ್ತು. ಇದನ್ನು ಅಭಿವೃದ್ಧಿಗೊಳಿಸುವ ದೃಷ್ಟಿಯಿಂದ ಸರಕಾರದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಗತಿಯತ್ತ ಸಾಗಲು ಮುಂದಾಯಿತು. ೧೯೭೯-೮೦ರಲ್ಲಿ ಮಕ್ಕಳ ಜನಗಣತಿಯ ಪ್ರಕಾರ ರಾಜ್ಯದಲ್ಲಿ ೩೧.೭೦ ಲಕ್ಷ ಮಕ್ಕಳಿದ್ದು ಇವರಲ್ಲಿ ೧೭.೪೪ ಲಕ್ಷ ಗಂಡುಮಕ್ಕಳು ೧೪.೨೬ ಲಕ್ಷ ಹೆಣ್ಣು ಮಕ್ಕಳು ಇದ್ದರು. ಆದ್ದರಿಂದ ಸರಕಾರವು ಪ್ರಾಥಮಿಕ ಶಿಕ್ಷಣದಲ್ಲಿ ಅಭಿವೃದ್ಧಿಯನ್ನು ಸಾಧಿಸುವ ದೃಷ್ಟಿಯಿಂದ ಮಧ್ಯಾಹ್ನದ ಉಪಾಹಾರ, ಹೆಣ್ಣುಮಕ್ಕಳ ಹಾಜರಾತಿ, ವಿದ್ಯಾರ್ಥಿವೇತನ ಹಾಗೂ ಹಿಂದುಳಿದ ಮಕ್ಕಳಿಗೆ ಉಚಿತ ಸಮವಸ್ತ್ರ, ಪಠ್ಯಪುಸ್ತಕಗಳು ಮುಂತಾದ ಸೌಲಭ್ಯಗಳನ್ನು ನೀಡಿದ್ದರಿಂದ ದಕ್ಷಿಣ ಕನ್ನಡ ಜಿಲ್ಲೆಯ ಬಾಲಕಿಯರು ಈ ಸೌಲಭ್ಯಗಳಿಂದ ಓದುವತ್ತ ಗಮನಹರಿಸಿ ಪ್ರಾಥಮಿಕ ಶಿಕ್ಷಣದಲ್ಲಿ ಹೆಚ್ಚಾಗಿ ಭಾಗವಹಿಸುವಂತಾಯಿತು. ಅಲ್ಲದೇ ಹಿಂದುಳಿದ ಗ್ರಾಮೀಣ ಬಾಲಕಿಯರು ಶಿಕ್ಷಣ ಪಡೆಯಲು ಮುಂದೆ ಬರುವಂತಾಯಿತು.

೧೯೮೦ರಷ್ಟೊತ್ತಿಗೆ ದಕ್ಷಿಣ ಕನ್ನಡ ಜಿಲ್ಲೆಯು ಪ್ರಾಥಮಿಕ ಶಿಕ್ಷಣದಲ್ಲಿ ಅಭಿವೃದ್ಧಿಯನ್ನು ಸಾಧಿಸುತ್ತ ಮುಂದುವರಿದಿತ್ತು. ೧೯೮೦-೮೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಟ್ಟು ೧೭೦೨ ಪ್ರಾಥಮಿಕ ಶಾಲೆಗಳಿದ್ದು ಅವುಗಳಲ್ಲಿ ೨,೦೮,೯೪೩ ಬಾಲಕರು, ೧,೬೬,೪೭೭ ಹೆಣ್ಣು ಮಕ್ಕಳು ಓದುತ್ತಿದ್ದು ೮,೭೬೬ ಶಿಕ್ಷಕರಿದ್ದರು. ಇದನ್ನು ಗಮನಿಸಿದಾಗ ಒಟ್ಟು ವಿದ್ಯಾರ್ಥಿಗಳಲ್ಲಿ ಸುಮಾರು ಶೇ.೭೦ರಷ್ಟು, ಬಾಲಕರ ಸಂಖ್ಯೆಗೆ ಹೋಲಿಸಿದರೆ ಬಾಲಕರಿಗಿಂತ ಬಾಲಕಿಯರು ಪ್ರಾಥಮಿಕ ಶಿಕ್ಷಣದಲ್ಲಿ ಹೆಚ್ಚಾಗಿ ಪ್ರವೇಶ ಪಡೆದಿರುವುದನ್ನು ಕಾಣಬಹುದು.

೧೯೮೭-೮೮ರ ಸಾಲಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧ನೇ ತರಗತಿಯಲ್ಲಿ ೪೨,೧೭೨ ಬಾಲಕಿಯರು ಪ್ರವೇಶ ಪಡೆದವರು ೪ನೇ ತರಗತಿಗೆ ಬರುವಷ್ಟರಲ್ಲಿಯೇ ೩೪,೯೩೩ ವಿದ್ಯಾರ್ಥಿನಿಯರಿರುತ್ತಿದ್ದರು. ಇದರಿಂದ ತಿಳಿಯುವುದೇನೆಂದರೆ ಪ್ರಾಥಮಿಕ ಹಂತದಲ್ಲಿಯೇ ಬಾಲಕಿಯರು ೮೦೦೦ ಜನ ಅಪವ್ಯಯ ಮತ್ತು ನಿಲುಗಡೆಗೆ ಅನೇಕ ಕಾರಣಗಳಾದ ಬಡತನ, ಬಾಲಕಾರ್ಮಿಕ, ಮೂಢನಂಬಿಕೆ, ಸೌಲಭ್ಯಗಳ ಕೊರತೆ ಮುಂತಾದವುಗಳಿಂದ ಸಿಲುಕಿರುತ್ತಿದ್ದರು. ಹಾಗೆಯೇ ೧೯೯೬-೯೭ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಿರಿಯ ಪ್ರಾಥಮಿಕ ಶಿಕ್ಷಣದ ೧ನೇ ತರಗತಿಯಲ್ಲಿ ೩೯,೧೦೦ ಜನ ಬಾಲಕಿಯರು ದಾಖಲಾದರೆ ಅವರು ೪ನೇ ತರಗತಿಗೆ ಬರುವಷ್ಟರಲ್ಲಿ ೩೮,೮೧೮ ಆಗಿರುತ್ತಿತ್ತು. ಈ ವರ್ಷದಲ್ಲಿ ಗಮನಿಸಿದರೆ ಕೇವಲ ೨೮೨ ಬಾಲಕಿಯರು ಮಾತ್ರ ವಂಚಿತರಾಗಿರುವುದು ಕಂಡುಬರುತ್ತದೆ. ಇದನ್ನು ಹಿಂದಿನ ವರ್ಷಗಳಿಗೆ ಹೋಲಿಸಿದರೆ ಮಹಿಳೆಯರು ಪ್ರಾಥಮಿಕ ಶಿಕ್ಷಣಕ್ಕೆ ಸರಕಾರದ ಕಡ್ಡಾಯ ಪ್ರಾಥಮಿಕ ಶಿಕ್ಷಣ. ಮಧ್ಯಾಹ್ನದ ಉಪಾಹಾರ, ವಿದ್ಯಾರ್ಥಿವೇತನ, ಉಚಿತ ಪಠ್ಯವಸ್ತು, ಸಮವಸ್ತ್ರ, ಹೆಣ್ಣು ಮಕ್ಕಳ ಹಾಜುರಾತಿ, ಮುಂತಾದವು ಪ್ರೋತ್ಸಾಹದಾಯಕವಾಗಿದ್ದು ದಕ್ಷಿಣ ಕನ್ನಡ ಜಿಲ್ಲೆಯ ಬಾಲಕಿಯರು ಪ್ರಾಥಮಿಕ ಶಿಕ್ಷಣದಲ್ಲಿ ಉತ್ತಮ ಮಟ್ಟದಲ್ಲಿ ಪ್ರಗತಿ ಸಾಧಿಸಿರುವುದು ಒಂದು ಗಮನಾರ್ಹವಾದ ಸಂಗತಿಯಾದರೂ ನೂರಕ್ಕೆ ನೂರರಷ್ಟು ಪ್ರಗತಿ ಸಾಧಿಸಿಲ್ಲದ್ದು ಗಮನಿಸಬೇಕಾದ ಅಂಶವಾಗಿದೆ. ಮತ್ತೊಂದು ಅಂಶವೆಂದರೆ ೧೯೯೭ರಲ್ಲಿ ೪ನೇ ತರಗತಿಯಲ್ಲಿ ದಾಖಲಾದ ಹೆಣ್ಣು ಮತ್ತು ಗಂಡು ಮಕ್ಕಳನ್ನು ಗಮನಿಸಿದರೆ ೧ನೇ ತರಗತಿಯಲ್ಲಿ ಬಾಲಕಿಯರು ಅಧಿಕವಾಗಿದ್ದು ೪ನೇ ತರಗತಿಯಷ್ಟೊತ್ತಿಗೆ ಕಡಿಮೆಯಾಗುತ್ತಾರೆ. ಆದರೆ ಬಾಲಕರು ೧ನೇ ತರಗತಿಯಲ್ಲಿ ಹೆಣ್ಣು ಮಕ್ಕಳಿಗಿಂತ ಕಡಿಮೆಯಿದ್ದು ೪ನೇ ತರಗತಿಯಲ್ಲಿ ಜಾಸ್ತಿಯಿರುತ್ತಾರೆ. ಅಂದರೆ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಕಿರಿಯ ಪ್ರಾಥಮಿಕ ಶಿಕ್ಷಣವನ್ನು(ಶಾಲೆಯನ್ನು) ಬಿಡುತ್ತಿರುವುದು ಕಂಡುಬರುತ್ತದೆ. ಮುಂದೇ ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕರಣ, ಕಡ್ಡಾಯ ಪ್ರಾಥಮಿಕ ಶಿಕ್ಷಣ, ಎಲ್ಲರಿಗೂ ಶಿಕ್ಷಣ ಎಂದು ಘೋಷಣೆಗಳ ಯೋಜನೆಗಳಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪುರುಷರಗಿಂತ ಸ್ತ್ರೀಯರು ಹೆಚ್ಚಾಗಿ ಶಿಕ್ಷಣ ಪಡೆದಿರುವುದು ತಿಳಿಯಬಹುದು. ೧೯೯೧ರ ಜನಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯು ಸಾಕ್ಷರತೆಯಲ್ಲಿ ರಾಜ್ಯದಲ್ಲಿ ಪ್ರಥಮ ಸ್ಥಾನದಲ್ಲಿದ್ದು ಸ್ತ್ರೀಯರ ಸಾಕ್ಷರತೆಯ ಪ್ರಮಾಣ ಶೇ ೬೭.೯೬ರಷ್ಟು ಇದೆ. ಇನ್ನೂ ಸಂಪೂರ್ಣ ಸಾಕ್ಷರತೆಯನ್ನು ಮಹಿಳೆಯರಲ್ಲಿ ಸಾಧಿಸಿಲ್ಲದೇ ಇರುವುದಕ್ಕೆ ಕಾರಣಗಳೇಣು? ತಿಳಿದು ಸರಕಾರ, ಸ್ವಯಂ ಸೇವಾ ಸಂಸ್ಥೆಗಳು, ಸ್ವಯಂ ಸೇವಕರು, ವಿದ್ಯಾವಂತ ಯುವತಿ-ಯುವಕರು ಸಾಕ್ಷರತೆ ಪ್ರಮಾಣದ ಮಟ್ಟದಲ್ಲಿ ಉತ್ತಮ ಸಾಧನೆಯನ್ನು ಮಾಡಲು ಪಾಲ್ಗೊಳ್ಳುವುದು ಉತ್ತಮ.

೧೯೯೬-೨೦೦೦ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೯೬ರಿಂದ ೨೦೦೦ದವರೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಪ್ರಾಥಮಿಕ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಿದಂತೆ

ಈ ಜಿಲ್ಲೆಯಲ್ಲೂ ಪ್ರಾಥಮಿಕ ಶಿಕ್ಷಣ ಮತ್ತು ಸಾಕ್ಷರತೆಗೆ ಸಂಬಂಧಿಸಿದಂತೆ ವಿವಿಧ ಕಾರ್ಯಕ್ರಮಗಳೊಂದಿಗೆ ಅಭಿವೃದ್ಧಿಗೆ ಆದ್ಯತೆ ನೀಡಿತು. ೧೯೯೯-೨೦೦೦ನೇ ವರ್ಷದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಚಿತ ಸಮವಸ್ತ್ರ, ಬ್ಯಾಗ್ ಗಳ ವಿತರಣೆಯ ಯೋಜನೆಯಲ್ಲಿ ಬಾಲಕರಲ್ಲಿ ಸಾಮಾನ್ಯ ೧೨,೨೧೪, ಎಸ್.ಸಿ-೨೫೫೭, ಎಸ್.ಟಿ-೧೧೦೪) ಒಟ್ಟು ೧೫,೫೭೫ ಬಾಲಕರು ೧ನೇ ಮತ್ತು ೨ನೇ ತರಗತಿ ಮಕ್ಕಳು ಪಡೆದರು. ೩ ಮತ್ತು ೪ನೇ ತರಗತಿಯ ಬಾಲಕರಲ್ಲಿ (ಸಾಮಾನ್ಯ ೧೩,೭೪೮, ಎಸ್.ಸಿ-೨೬೦೧, ಎಸ್.ಟಿ-೧೩೩೪,) ಒಟ್ಟು ೧೭,೬೮೩ ಮಕ್ಕಳು ಸದುಪಯೋಗವನ್ನು ಪಡೆದಿದ್ದಾರೆ. ಹಾಗೆಯೇ ಬಾಲಕಿಯರು ಈ ಯೋಜನೆಯಲ್ಲಿ ೧ನೇ ಮತ್ತು ೨ನೇ ತರಗತಿಯಲ್ಲಿ ಸಾಮಾನ್ಯ ೧೧,೧೦೩, ಎಸ್.ಸಿ.೨೧೧೧, ಎಸ್.೧೯-೧೦.೧೬ ಒಟ್ಟು ೧೪,೨೩೦ ಬಾಲಕಿಯರು ಹಾಗೆಯೇ ೩ ಮತ್ತು ೪ನೇ ತರಗತಿಗಳಲ್ಲಿ ಒಟ್ಟು ೧೬,೦೩೮ ಬಾಲಕಿಯರ ಪೈಕಿ ಸಾಮಾನ್ಯ-೧೨,೪೦೦, ಎಸ್.ಸಿ-೨೩೨೦, ಎಸ್.ಟಿ.೧೩೧೮ ಬಾಲಕಿಯರು ಇದರ ಸದುಪಯೋಗ ಪಡೆದುಕ್ಕೊಂಡಿದ್ದಾರೆ. ಈ ಸಮವಸ್ತ್ರದ ವಿತರಣೆಯಲ್ಲಿ ಪುರುಷರಿಗಿಂತ ಸ್ವಲ್ಪ ಸ್ತ್ರೀಯರು ಕಡಿಮೆಯಿದ್ದು, ಈ ಸೌಲಭ್ಯಗಳ ಪಡೆಯುವ ನಿಟ್ಟಿನಲ್ಲಿ ಪ್ರಾಥಮಿಕ ಶಿಕ್ಷಣ ಅಭಿವೃದ್ಧಿಯತ್ತ ಸಾಗುತ್ತಿದೆಯೆಂದು ಹೇಳಬಹುದು. ಅಲ್ಲದೇ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬ್ಯಾಗ್ ಗಳ ವಿತರಣೆಯನ್ನು ಒಟ್ಟು ೨೪೯೭ (೫ನೇ-೭ನೇ ತರಗತಿಯವರೆಗಿನ) ಮಕ್ಕಳಿಗೆ ನೀಡಲಾಗಿದೆ. ಈ ಸೌಲಭ್ಯಗಳಿಂದ ಹಿಂದುಳಿದ, ಪರಿಶಿಷ್ಟಜಾತಿ-ಪಂಗಡದ ಬಾಲಕಿಯರ ಪ್ರಾಥಮಿಕ ಶಿಕ್ಷಣದಲ್ಲಿ ಸುಧಾರಿಸಿದೆ ಎಂದು ಹೇಳಬಹುದು.

೧೯೯೭ರಲ್ಲಿ ಸರಕಾರವು ೭ನೇ ತರಗತಿ ಪರೀಕ್ಷೆಯನ್ನು ಸಾರ್ವಜನಿಕ ಪರೀಕ್ಷೆಯನ್ನಾಗಿ ಮಾರ್ಪಡಿಸಿತು. ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಫಲಿತಾಂಶವು ೧೯೯೭ರಲ್ಲಿ ೨೫,೭೫೯ ಬಾಲಕರು ಪರೀಕ್ಷೆಗೆ ಕುಳಿತಿದ್ದು, ೨೨,೨೬೫ ಮಕ್ಕಳು ಪಾಸಾದರು. ಶೇ ೮೬.೪೩ ಫಲಿತಾಂಶ ಬಾಲಕರಲ್ಲಿ ಬಂದರೆ, ಹೆಣ್ಣು ಮಕ್ಕಳಲ್ಲಿ ಪರೀಕ್ಷೆಗೆ ಕುಳಿತವರು ೨೪,೩೯೨ ಪಾಸಾದವರು ೨೨,೨೩೬ ಶೇ ೯೧.೧೬ರಷ್ಟು. ಇದನ್ನು ಗಮನಿಸಿದರೆ ಫಲಿತಾಂಶದಲ್ಲಿ ಸ್ತ್ರೀಯರು ಪುರುಷರಿಗಿಂತ ಮೇಲುಗೈ ಸಾಧಿಸಿದ್ದಾರೆ. ಅದೇ ರೀತಿ ೯೯-೨೦೦೦ದ ಸಾಲಿನಲ್ಲಿ ನೋಡಿದರೆ ಬಾಲಕರಲ್ಲಿ ಪರೀಕ್ಷೆಗೆ ಕುಳಿತವರು ೧೭,೪೧೩ ಪಾಸಾದವರ ಸಂಖ್ಯೆ ೧೫,೩೫೩ ಒಟ್ಟು ಶೇ.೮೮.೧೬ ಬಾಲಕಿಯರಲ್ಲಿ ಪರೀಕ್ಷೆಗೆ ಕುಳಿತವರು ೧೬,೨೪೦, ಪಾಸಾದವರು ೧೫,೦೪೧. ಶೇಕಡವಾರು ೯೨.೬೧ರಷ್ಟು. ಒಟ್ಟಾರೆ ೧೯೯೭ ರಿಂದ ೨೦೦೦ದವರೆಗಿನ ೭ನೇ ತರಗತಿಯ ಪರೀಕ್ಷೆಯ ಫಲಿತಾಂಶದಲ್ಲಿ ಬಾಲಕರಿಗಿಂತ ಬಾಲಕಿಯರು ಮುಂದೇ ಇರುವುದು ನೋಡಿದರೆ ಸ್ತ್ರೀಯರಲ್ಲಿ ಪ್ರಾಥಮಿಕ ಶಿಕ್ಷಣ ಅಭಿವೃದ್ಧಿ ಹೊಂದುತ್ತಿದೆ ಎಂದು ಹೇಳಬಹುದು ಹಾಗೆಯೇ ಸಾಕ್ಷರತೆಯಲ್ಲಿಯೂ ಅಭಿವೃದ್ಧಿ ಹೊಂದುತ್ತಿದ್ದು ಪರಿಪೂರ್ಣವಾದ ಸಾಧನೆಯಾಗಿಲ್ಲವೆಂದು ತಿಳಿಯಬಹುದು.

## ಪ್ರೌಢ ಶಿಕ್ಷಣ

ಪ್ರೌಢ ಶಿಕ್ಷಣವು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೮೬೦-೬೧ರಲ್ಲಿ ಪ್ರಾರಂಭವಾಯಿತು. ಈ ಅವಧಿಯಲ್ಲಿ ಈ ಜಿಲ್ಲೆಯು ಸ್ತ್ರೀ ಶಿಕ್ಷಣಕ್ಕೆ ಸಾಕಷ್ಟು ಜನಪ್ರಿಯವಾಗಿತ್ತು. ೧೮೮೧-೮೨ರಲ್ಲಿಯೇ ೭ ಪ್ರತ್ಯೇಕ ಹೆಣ್ಣು ಮಕ್ಕಳ ಶಾಲೆಗಳಿದ್ದವು. ೨೦ನೇ ದಶಕದಲ್ಲಿ ಅನೇಕ ಖಾಸಗಿ ಸಂಸ್ಥೆಗಳು ಪ್ರೌಢಶಾಲೆಗಳನ್ನು ಪ್ರಾರಂಭಿಸಿದವು. ಇದರಿಂದ ಪ್ರೌಢಶಿಕ್ಷಣ ಬೆಳವಣಿಗೆಯಾಯಿತು. ೧೯೧೯ರಲ್ಲಿ ಮಂಗಳೂರಿನಲ್ಲಿ ಒಂದು ಹೆಣ್ಣು ಮಕ್ಕಳ ಪ್ರಾಥಮಿಕ ಶಾಲೆಯನ್ನು ಪ್ರೌಢಶಾಲೆಯಾಗಿ ಮಾರ್ಪಡಿಸಿದರು. ಇತರೆ ಪ್ರೌಢಶಾಲೆಗಳೆಂದರೆ ಸೇಂಟ್ ಆಗ್ನೆಸ್ ಪ್ರೌಢಶಾಲೆ ಮತ್ತು ಉಡುಪಿಯ ಸೇಂಟ್ ಸಿಸಿಲಿಯ ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದವು. ೧೯೩೧-೩೨ರಲ್ಲಿ ಜಿಲ್ಲೆಯಲ್ಲಿ ೭ ಹೆಣ್ಣುಮಕ್ಕಳ ಪ್ರೌಢಶಾಲೆಗಳಿದ್ದು ಅವುಗಳಲ್ಲಿ ೨,೪೭೪ ಬಾಲಕಿಯರು ಓದುತ್ತಿದ್ದರು. ಅದೇ ವರ್ಷದಲ್ಲಿ ಪ್ರಾಥಮಿಕ ಶಾಲೆಗಳ ಸಂಖ್ಯೆ ೧೩೪ ಇದ್ದು ಇವುಗಳಲ್ಲಿ ೧೦,೫೩೯ ಬಾಲಕಿಯರು ಪ್ರವೇಶ ಪಡೆದಿದ್ದರು. ಇದನ್ನು ಅವಲೋಕಿಸಿದರೆ ಶೇ.೭೫ರಷ್ಟು ಹೆಣ್ಣುಮಕ್ಕಳು ಪ್ರಾಥಮಿಕ ಶಿಕ್ಷಣದಲ್ಲಿ ದಾಖಲಾದವರ ಪೈಕಿ ಪ್ರೌಢ ಶಿಕ್ಷಣದಿಂದ ದೂರ ಸರಿದಿದ್ದರು. ೭ ಪ್ರೌಢಶಾಲೆಗಳಷ್ಟೆ ಅಲ್ಲದೇ ಬಾಲಕಿಯರು ಬಾಲಕರ ಪ್ರೌಢಶಾಲೆಗಳಲ್ಲಿ ಓದುತ್ತಿದ್ದು ಅವುಗಳಲ್ಲಿ ೧೯,೦೭೮ ಮಹಿಳೆಯರು ಓದುತ್ತಿದ್ದರು. ೧೯೪೬-೪೭ರಲ್ಲಿ ಬಾಲಕಿಯರ ಪ್ರೌಢಶಾಲೆಗಳ ಸಂಖ್ಯೆ ೧೬ಕ್ಕೆ ಏರಿತು. ಆಗ ಅವುಗಳಲ್ಲಿದ್ದ ಬಾಲಕಿಯರ ಸಂಖ್ಯೆ ೪,೭೦೩ ಹೀಗೆ ೧೯೦೦ ರಿಂದ ೧೯೫೬ರವರೆಗೆ ಪ್ರೌಢ ಶಿಕ್ಷಣದಲ್ಲಿ ಪ್ರಗತಿಯು ಬೆಳವಣಿಗೆ ಹೊಂದುತ್ತ ಸಾಗಿತ್ತು. ೧೯೩೧-೩೨ ರಿಂದ ೧೯೪೭ರ ಅವಧಿಯಲ್ಲಿ ಸ್ತ್ರೀ ಶಿಕ್ಷಣದಲ್ಲಿ ಸೌಲಭ್ಯಗಳಲ್ಲಿ ಎರಡರಷ್ಟು ಹೆಚ್ಚಾಯಿತು. ೧೯೫೫-೫೬ರಲ್ಲಿ ವಿವಿಧೋದ್ದೇಶ ಪ್ರೌಢ ಶಾಲೆಗಳನ್ನು ಸರ್ಕಾರ ಆರಂಭಿಸಿತು. ಆಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೫ ಪ್ರೌಢಶಾಲೆಗಳನ್ನು ಇದಕ್ಕೆ ಒಳಪಡಿಸಲಾಯಿತು. ಇದರಿಂದ ಹೆಣ್ಣು ಮಕ್ಕಳು ಇದರ ಅನುಕೂಲ ಪಡೆದುಕೊಳ್ಳಲು ಸಹಕಾರಿಯಾಯಿತು. ಪ್ರತ್ಯೇಕವಾದ ವಿವಿಧೋದ್ದೇಶ ಶಾಲೆಗಳು ಆಗ ಇರಲಿಲ್ಲ. ಆದರೂ ಇದರ ಸದುಪಯೋಗ ಸಾಮಾನ್ಯ ಶಾಲೆಗಳಲ್ಲಿ ಪಡೆಯಲು ಅವಕಾಶವಿತ್ತು.

### ೧೯೫೬-೧೯೭೬

೧೯೫೬-೫೭ರಲ್ಲಿ ಪ್ರೌಢಶಿಕ್ಷಣದಲ್ಲಿ ವಿವಿಧೋದ್ದೇಶ ಯೋಜನೆಯ ಶಾಲೆಗಳು ಪ್ರಾರಂಭವಾದವು. ಈ ಯೋಜನೆಯಡಿಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ೫ ಶಾಲೆಗಳನ್ನು ಅದಕ್ಕೆ ಒಳಪಡಿಸಲಾಯಿತು. ಅಲ್ಲದೇ ಪ್ರತಿಯೊಂದು ಶಾಲೆಯಲ್ಲಿಯೂ ಭಿನ್ನ-ಭಿನ್ನ ರೀತಿಯ ಪಠ್ಯಕ್ರಮಗಳನ್ನು ಆರಂಭಿಸಿತು. ಇದರಿಂದ ಪಠ್ಯವಸ್ತು ಮತ್ತು ಪರೀಕ್ಷೆಗಳಲ್ಲಿದ್ದ ಭಿನ್ನತೆಯಿಂದಾಗಿ ಬಾಲಕಿಯರು ಪ್ರೌಢಶಿಕ್ಷಣ ಪಡೆಯುವಲ್ಲಿ ಅವರಿಗೆ ಗೊಂದಲವುಂಟಾಗಿ

ಅವರ ಶಿಕ್ಷಣದ ಮೇಲೆ ಪ್ರಭಾವ ಬೀರಿ ಸ್ವಲ್ಪ ಮಂದಗತಿಯಲ್ಲಿ ಸಾಗುವಂತೆ ಮಾಡಿತು.೧೯೬೨-೬೩ರ ಹೊತ್ತಿಗೆ ಪ್ರೌಢಶಾಲಾ ಶಿಕ್ಷಣದಲ್ಲಿ ಏಕರೂಪತೆ ಬಂದು ಪಠ್ಯವಸ್ತು ಮತ್ತು ಪರೀಕ್ಷೆಗಳು ಎಲ್ಲಾ ಶಾಲೆಗಳಿಗೂ ಒಂದೇ ಆದವು. ಆಗ ಬಾಲಕಿಯರಿಗೆ ಈ ಹಿಂದೆ ಸಮಸ್ಯೆಯಾಗಿದ್ದ ಪಠ್ಯವಸ್ತು, ಪರೀಕ್ಷೆಗಳಲ್ಲಿ ಪರಿಹಾರ ಸಿಕ್ಕಿತು. ಇದರಿಂದ ಅವರು ಪ್ರೌಢಶಿಕ್ಷಣ ಪಡೆಯಲು ಅನುಕೂಲವಾಯಿತು. ೧೯೬೪-೬೫ರಲ್ಲಿ ಪ್ರೌಢಶಾಲೆಗಳನ್ನು ಉನ್ನತ ಪ್ರೌಢಶಾಲೆಗಳನ್ನಾಗಿ ಪರಿವರ್ತಿಸುವ ಯೋಜನೆ ಆರಂಭವಾಗಿ ದೂರದ ಊರಿಗೆ ಹೋಗದ ಹಳ್ಳಿಯ ಬಾಲಕಿಯರಿಗೆ ತಮ್ಮ ವ್ಯಾಸಂಗ ಮುಂದುವರಿಸಲು ಸಹಾಯಕವಾಯಿತು. ಇದರಿಂದ ಪೋಷಕರು ಹೆಣ್ಣುಮಕ್ಕಳಿಗೆ ಉನ್ನತ ಶಿಕ್ಷಣ ಪಡೆಯುವುದು ಸುಲಭವಾದುದ್ದರಿಂದ ಪ್ರೌಢಶಿಕ್ಷಣಕ್ಕೆ ಕಳಹಿಸುವ ಪ್ರೋತ್ಸಾಹ ದೊರೆಯಿತು. ೧೯೬೬ರಲ್ಲಿ ಕರ್ನಾಟಕ ರಾಜ್ಯ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ಜಾರಿಗೆ ಬಂತು. ಇದರಿಂದ ಪರೀಕ್ಷೆಯ ಸಮಸ್ಯೆಗಳನ್ನು ಹೋಗಲಾಡಿಸುವಂತಾಯಿತು. ಇದರಿಂದ ಬಾಲಕಿಯರು ಪರೀಕ್ಷಾ ಸಮಸ್ಯೆಗಳನ್ನು ಎದುರಿಸಿ ಪ್ರೌಢಶಿಕ್ಷಣ ಪಡೆಯಲು ಅನುಕೂಲವಾಯಿತು. ೧೯೭೫-೭೬ರಲ್ಲಿ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆ ಅಸ್ತಿತ್ವಕ್ಕೆ ಬಂದು ಬಾಲಕಿಯರ ಶಿಕ್ಷಣದ ಸಮಸ್ಯೆಗಳನ್ನು ಗುರ್ತಿಸಿ ಅವರಿಗೆ ಪೂರಕವಾದ ಶಿಕ್ಷಣವನ್ನು ಒದಗಿಸಲು ಅನುಕೂಲ ಮಾಡಿತು. ಇದರಿಂದ ಸ್ತ್ರೀ ಶಿಕ್ಷಣದ ಬೆಳವಣಿಗೆಗೆ ಸಹಾಯವಾಯಿತು. ೧೯೭೧ರ ಜನಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಕ್ಷರತೆಯ ಪ್ರಮಾಣ ಇತರೆ ಜಾತಿ-ಸಾಮಾನ್ಯ-ಪುರುಷರಲ್ಲಿ ಶೇ ೫೪.೧೧ರಷ್ಟು, ಸ್ತ್ರೀಯರಲ್ಲಿ ಶೇ ೩೬.೩೯ರಷ್ಟು ಇದ್ದು ಒಟ್ಟು ೪೪.೯೯ ಇತ್ತು. ಇದರಿಂದ ಇತರೆ ಜಾತಿಗಳಲ್ಲಿ ಸ್ತ್ರೀಯರು ಪುರುಷರಿಗಿಂತ ಹಿಂದುಳಿದಿರುವಿಕೆಯನ್ನು ಗಮನಿಸಬಹುದು. ಆದರೂ ಸ್ತ್ರೀಯರ ಜನಸಂಖ್ಯೆಗನುಗುಣವಾಗಿ ಪುರುಷರಿಗಿಂತ ಮುಂದೇ ಇದ್ದಾರೆ. ಅದೇ ರೀತಿ ಪರಿಶಿಷ್ಟ ಜಾತಿ-ಪಂಗಡಗಳಲ್ಲಿ ಪುರುಷರು ೨೦.೭೧, ಸ್ತ್ರೀಯರು ೯.೪೭ರಷ್ಟು ಸಾಕ್ಷರತೆಯನ್ನು ಹೊಂದಿದ್ದು ಒಟ್ಟು ೧೫.೦೭ಇತ್ತು. ಇದರಿಂದ ಪರಿಶಿಷ್ಟಜಾತಿ-ಪಂಗಡಗಳಲ್ಲಿ ಪುರುಷರಿಗಿಂತ ಸ್ತ್ರೀಯರು ಸಾಕ್ಷರತೆಯಲ್ಲಿ ಬಹಳ ಹಿಂದುಳಿದಿರುವಿಕೆ ಕಂಡು ಬರುತ್ತದೆ.

**೧೯೭೬-೧೯೯೬**

೧೯೭೬ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರೌಢಶಿಕ್ಷಣ ವಿವಿಧ ರೀತಿಯ ಕೋರ್ಸ್‌ಗಳನ್ನೊಳಗೊಂಡಿತ್ತು. ೧೯೭೫-೭೬ರಲ್ಲಿ ಜಾರಿಗೆ ಬಂದ ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿ ಸಂಸ್ಥೆಯು ಶಿಕ್ಷಣದಲ್ಲಿನ ಪಠ್ಯಕ್ರಮ, ಬೋಧನಾ ವಿಧಾನ, ಶಿಕ್ಷಕರ, ಭಾಷೆ, ಮುಂತಾದ ಸಮಸ್ಯೆಗಳನ್ನು ಗುರ್ತಿಸಿ ಸೂಕ್ತ ಪರಿಹಾರ ಮತ್ತು ತರಬೇತಿಯನ್ನು ನೀಡುವುದರೊಂದಿಗೆ ಪ್ರೌಢಶಿಕ್ಷಣದ ಬೆಳವಣಿಗೆಗೆ ಪೂರಕವಾಯಿತು. ಇದರಿಂದ ಹೆಣ್ಣು ಮಕ್ಕಳ ಶಿಕ್ಷಣದ ಸಮಸ್ಯೆ, ಸ್ತ್ರೀ ಶಿಕ್ಷಕಿಯರ ಸಮಸ್ಯೆಗಳನ್ನು ಪತ್ತೆ ಹಚ್ಚಿ ಪರಿಹರಿಸುವ

ನಿಟ್ಟಿನಲ್ಲಿ ಶ್ರಮಿಸಿತು. ಹೀಗಾಗಿ ಪ್ರೌಢಶಿಕ್ಷಣದಲ್ಲಿ ಸ್ತ್ರೀಯರು ಹೆಚ್ಚಾಗಿ ಪ್ರವೇಶ ಪಡೆಯುವಂತಾಯಿತು. ಪ್ರೌಢಶಿಕ್ಷಣವು ಈ ಅವಧಿಯಲ್ಲಿ ಸರ್ಕಾರಿ, ಮುನ್ಸಿಪಲ್, ಜಿಲ್ಲಾಬೋರ್ಡ್‌ಗಳು, ತಾಲ್ಲೂಕ್ ಬೋರ್ಡ್‌ಗಳು, ಖಾಸಗಿ ಸಂಸ್ಥೆಗಳ ಅಡಿಯಲ್ಲಿ ನಡೆಯುತ್ತಿದ್ದವು. ಇವು ಹೆಚ್ಚು ಮಕ್ಕಳ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ನೀಡಿದವು ಇದರಿಂದ ಮಹಿಳೆಯ ಶಿಕ್ಷಣ ಪ್ರಗತಿಯತ್ತ ಸಾಗಿತು. ಸರ್ಕಾರ ಹೆಣ್ಣು ಮಕ್ಕಳ ಮದುವೆಯ ವಯಸ್ಸನ್ನು ೧೮ಕ್ಕೆ ಏರಿಸಿದ್ದರಿಂದ ಅದು ದಕ್ಷಿಣ ಕನ್ನಡ ಜಿಲ್ಲೆಯ ಹೆಣ್ಣು ಮಕ್ಕಳು ಪಾಲಿಸಬೇಕಾದ್ದರಿಂದ ಅದಕ್ಕೆ ಮುಂಚೇಯೇ ಪ್ರೌಢಶಿಕ್ಷಣ ಮುಗಿಯುವುದರಿಂದ ಪೋಷಕರು ಆಗ ಸ್ತ್ರೀಯರನ್ನು ಶಿಕ್ಷಣದಲ್ಲಿ ತೊಡಗಿಸಲು ಪ್ರೋತ್ಸಾಹ ದೊರೆತು ಶಿಕ್ಷಣದಲ್ಲಿ ಪ್ರಗತಿಯತ್ತ ಸಾಗಲು ಸಹಕಾರಿಯಾಯಿತು.

೧೯೯೦-೯೧ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೮ನೇ ತರಗತಿಯಲ್ಲಿ ೨೩,೫೭೦ ಬಾಲಕರು, ೧೭,೦೮೦ ಬಾಲಕಿಯರು, ೯ನೇ ತರಗತಿಯಲ್ಲಿ ೨೧,೭೭೫ ಬಾಲಕರು ೧೪,೭೪೮ ಬಾಲಕಿಯರು ಓದುತ್ತಿದ್ದರು. ಇದರಿಂದ ತಿಳಿದು ಬರುವುದೇನೆಂದರೆ ಈ ಅವಧಿಯಲ್ಲಿ ೮ನೇ ತರಗತಿಯಲ್ಲಿ ಪ್ರವೇಶ ಪಡೆದ ಬಾಲಕಿಯರು ೧೦ನೇ ತರಗತಿಗೆ ಬರುವಷ್ಟರಲ್ಲಿ ಕ್ರಮೇಣವಾಗಿ ಕಡಿಮೆಯಾಗುತ್ತಿದ್ದು ಸುಮಾರು ಶೇ.೩೦ರಷ್ಟು ಬಾಲಕಿಯರು ೧೦ನೇ ತರಗತಿಯಷ್ಟೊತ್ತಿಗೆ ಶಾಲೆ ಬಿಡುತ್ತಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ಬಡತನ, ಶಾಲಾ ಸೌಲಭ್ಯಗಳ ಕೊರತೆ, ಬಾಲಕಾರ್ಮಿಕ ವೃತ್ತಿ, ಮುಂತಾದವುಗಳ ಪ್ರಭಾವವಿರಬಹುದು. ಪುರುಷರಿಗೆ ಹೋಲಿಕೆ ಮಾಡಿದರೆ ಸ್ವಲ್ಪ ಹೆಚ್ಚು ಕಡಿಮೆ ಇಬ್ಬರಲ್ಲೂ ಸಮಾನವಾಗಿ ಶಾಲೆ ಬಿಡುತ್ತಿರುವುದು ಕಾಣಬಹುದು.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೯೬ರಲ್ಲಿ ಪ್ರೌಢ ಶಿಕ್ಷಣದ ಎಸ್ .ಎಸ್ .ಎಲ್ .ಸಿ ಪರೀಕ್ಷೆಯಲ್ಲಿ ಕುಳಿತವರ ಸಂಖ್ಯೆ ಬಾಲಕರು ೧೫,೦೭೯ ಬಾಲಕಿಯರು ೧೩,೯೭೪ ಇದರಲ್ಲಿ ಉತ್ತೀರ್ಣರಾದವರ ಸಂಖ್ಯೆ ಬಾಲಕರು ೮೬೮೮, ಬಾಲಕಿಯರು ೮೮೧೪, ಶೇಕಡವಾರು ಪುರುಷರು ೫೭.೬೧ ಮಹಿಳೆಯರು ೬೩.೦೭ರಷ್ಟು ಫಲಿತಾಂಶವನ್ನು ಕಾಣಬಹುದು. ಈ ಪರೀಕ್ಷೆಯಲ್ಲಿ ಮಹಿಳೆಯರು ಉತ್ತಮ ಫಲಿತಾಂಶ ಪುರುಷರಿಗಿಂತ ಮೇಲೆ ಪಡೆಯುತ್ತಾರೆಂದು ತಿಳಿದು ಬರುತ್ತದೆ. ಈ ಜಿಲ್ಲೆಯಲ್ಲಿ ೧೯೯೬ರ ಅವಧಿಯಲ್ಲಿ ಸ್ತ್ರೀಯರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತಮ ಫಲಿತಾಂಶ ಪಡೆದಿದ್ದಾರೆ. ಮತ್ತು ಪ್ರೌಢಶಿಕ್ಷಣವು ಅಭಿವೃದ್ಧಿ ಹೊಂದುತ್ತಿದೆ ಎಂದು ಹೇಳಬಹುದು.

### ೧೯೯೬ ರಿಂದ ೨೦೦೦

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೯೬ರಿಂದ ಉತ್ತಮ ಮಟ್ಟದಲ್ಲಿ ಬಾಲಕಿಯರ ಪ್ರೌಢಶಿಕ್ಷಣ ಸಾಗುತ್ತಿರುವುದು ಕಂಡು ಬರುತ್ತದೆ. ಸರಕಾರ ನಿಯೋಜಿಸಿರುವ ವಿವಿಧ ಕಾರ್ಯಕ್ರಮಗಳ ಯೋಜನೆಯನ್ವಯ ತಾಂತ್ರಿಕ ಶಿಕ್ಷಣ(ಕಂಪ್ಯೂಟರ್) ಒಳಗೊಂಡಂತೆ

ಹೆಣ್ಣುಮಕ್ಕಳಿಗೆ ಶಿಕ್ಷಣ ನೀಡುತ್ತಿದೆ. ಅಲ್ಲದೇ ಶಾಲಾ ಸೌಲಭ್ಯಗಳ ಕೊರತೆಯನ್ನು ನೀಗಿಸಿ, ಹೊಸ ಕಟ್ಟಡಗಳು, ಹಳೆಯ ಕಟ್ಟಡಗಳ ಭದ್ರತೆ ಮತ್ತು ಶಿಕ್ಷಕರ ಕೊರತೆಯನ್ನು ಹೋಗಲಾಡಿಸಿ ವಿಜ್ಞಾನಕ್ಕೆ ಸಂಬಂಧಿಸಿದ ಪ್ರಯೋಗಶಾಲೆಗಳ ಸಲಕರಣೆಗಳ ಒದಗಿಸುವಿಕೆ, ಮತ್ತು ಶಿಕ್ಷಕರಿಗೆ ಸೇವಾವಧಿ-ಸೇವಾಪೂರ್ವ ತರಬೇತಿಯನ್ನು ನೀಡಿ ಉತ್ತಮ ಶಿಕ್ಷಣ ನೀಡುವಲ್ಲಿ ಸರಕಾರ ಗಮನ ಹರಿಸುವುದರ ಜೊತೆಯಲ್ಲಿ ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿರುವುದು ಮತ್ತು ಅವರಿಗೆ ಪ್ರತ್ಯೇಕ ಮೀಸಲಾತಿ ಸೌಲಭ್ಯಗಳನ್ನು ಕಲ್ಪಸಿರುವುದು ಪ್ರೌಢಶಿಕ್ಷಣದಲ್ಲಿ ಸ್ತ್ರೀಯರು ಹೆಚ್ಚಾಗಿ ಪಾಲ್ಗೊಳ್ಳುತ್ತಿರುವುದಕ್ಕೆ ಪ್ರೋತ್ಸಾಹವಾಯಿತು. ೧೯೯೬ ರಿಂದ ೨೦೦೦ದವರೆಗಿನ ಎಸ್ .ಎಸ್ .ಎಲ್ .ಸಿ ಪರೀಕ್ಷೆಯಲ್ಲಿ ದಕ್ಷಿಣ ಕನ್ನಡದ ಜಿಲ್ಲೆಯ ಪ್ರೌಢಶಾಲಾ ವಿದ್ಯಾರ್ಥಿಗಳಲ್ಲಿ ೧೯೯೬ರಲ್ಲಿ ಪರೀಕ್ಷೆಗೆ ಕುಳಿತವರಲ್ಲಿ ಬಾಲಕಿಯರು ೧೩,೯೭೪ ಇದರಲ್ಲಿ ಪಾಸಾದವರ ಸಂಖ್ಯೆ ೮೮೧೪, ಶೇಕಡವಾರು ೬೩.೦೭ರಷ್ಟು ಉತ್ತೀರ್ಣತೆಯನ್ನು ಪಡೆದಿದ್ದಾರೆ. ೨೦೦೦ದ ವರ್ಷದಲ್ಲಿ ಗಮನಿಸಿದರೆ ಪರೀಕ್ಷೆಗೆ ಕುಳಿತವರು ೯೦೪೬, ಪಾಸಾದ ಬಾಲಕಿಯರು ೬೨೯೭, ಶೇ ೬೯.೬೩ರಷ್ಟು ಉತ್ತೀರ್ಣತೆ ಪಡೆದಿದ್ದಾರೆ. ಇಲ್ಲಿ ೧೯೯೬ ರಿಂದ ೨೦೦೦ ವರ್ಷಗಳ ಫಲಿತಾಂಶವನ್ನು ಅವಲೋಕಿಸಿದರೆ ವರ್ಷದಿಂದ ವರ್ಷಕ್ಕೆ ಕ್ರಮೇಣವಾಗಿ ಅಂದರೆ ೧೯೯೬ರಲ್ಲಿ ಶೇ೬೩.೦೭, ೧೯೯೭ರಲ್ಲಿ ಶೇ೬೬.೯೫, ೧೯೯೮ರಲ್ಲಿ ೬೮.೪೪ ೧೯೯೯ರಲ್ಲಿ ೭೮.೨೦, ೨೦೦೦ದಲ್ಲಿ ೬೯.೬೩, ಹೀಗೆ ಹೆಚ್ಚುತ್ತ ಬಂದಿದೆ. ಇದರಿಂದ ಹೆಣ್ಣು ಮಕ್ಕಳು ಪ್ರೌಢಶಿಕ್ಷಣದಲ್ಲಿ ಹೆಚ್ಚಾಗಿ ಭಾಗವಹಿಸುತ್ತಿದ್ದಾರೆಂದು ತಿಳಿಯಬಹುದು. ಅಲ್ಲದೇ ಗಂಡುಮಕ್ಕಳಿಗೆ ಹೋಲಿಸಿದರೆ ೧೯೯೬ರಲ್ಲಿ ಶೇ.೬ರಷ್ಟು ಬಾಲಕಿಯರು ಫಲಿತಾಂಶದಲ್ಲಿ ಮುಂದೇ ಇದ್ದಾರೆ ಇದರಿಂದ ಫಲಿತಾಂಶದಲ್ಲಿ ಹೆಣ್ಣುಮಕ್ಕಳು ಮೇಲುಗೈ ಸಾಧಿಸುತ್ತ ಬಂದಿದ್ದಾರೆಂದು ತಿಳಿಯುತ್ತದೆ. ಒಟ್ಟಾರೆ ಹೆಣ್ಣು ಮಕ್ಕಳ ಎಸ್ .ಎಸ್ .ಎಲ್ .ಸಿ ಫಲಿತಾಂಶವನ್ನು ನೋಡಿದಾಗ ೧೯೯೯ರಲ್ಲಿ ಪುರಷರಗಿಂತ ಸ್ತ್ರೀಯರು ಫಲಿತಾಂಶದಲ್ಲಿ ಹಿಂದುಳಿದಿದ್ದಾರೆ. ಇನ್ನುಳಿದ ವರ್ಷದಲ್ಲಿ ಅವರಿಗಿಂತ ಮೇಲುಗೈ ಸಾಧಿಸಿದ್ದಾರೆ. ಆದರೂ ಅವರು ಪರಿಪೂರ್ಣವಾಗಿ ಶಿಕ್ಷಣ ನೀಡಬೇಕಾದರೆ ಅವರಿಗೆ ಪ್ರತ್ಯೇಕವಾದ ಸೌಲಭ್ಯಗಳನ್ನು ಒದಗಿಸಿ, ಹೆಚ್ಚಿನ ತರಬೇತಿಯನ್ನು ನೀಡಿದರೆ ಅವರು ಶಿಕ್ಷಣದಲ್ಲಿ ರಾಜ್ಯದಲ್ಲಿಯೇ ಉತ್ತಮ ಮಟ್ಟದಲ್ಲಿ ಶಿಕ್ಷಣವನ್ನು ಪಡೆದಿರುವ ಜಿಲ್ಲೆಯಾಗಿ ಮಾರ್ಪಡಿಸಬಹುದು. ಈ ಜಿಲ್ಲೆಯಲ್ಲಿ ಸಾಕ್ಷರತೆಯ ಮಟ್ಟವನ್ನು ೧೯೯೧ರಲ್ಲಿದ್ದಂತೆ ನೋಡಿದರೆ ರಾಜ್ಯದಲ್ಲಿಯೇ ೨ನೇ ಸ್ಥಾನವನ್ನು ಗಳಿಸಿಕೊಂಡಿದ್ದು ಇದರಲ್ಲಿ ಪುರುಷರ ಸಾಕ್ಷರತಾ ಪ್ರಮಾಣ ಶೇ.೮೪.೦೦ರಷ್ಟು ಇದ್ದು ರಾಜ್ಯದಲ್ಲಿ ಒಂದನೇ ಸ್ಥಾನದಲ್ಲಿದೆ. ಸ್ತ್ರೀಯರ ಸಾಕ್ಷರತಾ ಪ್ರಮಾಣದಲ್ಲಿ ಶೇ.೬೭.೯೬ರಷ್ಟು ಇದ್ದು ರಾಜ್ಯದಲ್ಲಿ ೨ನೇ ಸ್ಥಾನ ಗಳಿಸಿದೆ. ಸ್ತ್ರೀಯರ ಸಾಕ್ಷರತೆ ಪ್ರಮಾಣ ಪುರುಷರಿಗೆ ಹೋಲಿಸಿದರೆ ಹಿಂದುಳಿದಿರುವಿಕೆಯನ್ನು ಕಾಣಬಹುದು. ಆದ್ದರಿಂದ ಸಮರ್ಪಕವಾದ

ಸಾಕ್ಷರತೆಯ ಪ್ರಮಾಣದ ಮಟ್ಟವನ್ನು ಮುಟ್ಟಬೇಕಾದರೆ ವಿವಿಧ ರೀತಿಯ ಸಾಕ್ಷರತೆಯ ಕಾರ್ಯಕ್ರಮಗಳನ್ನು ಹಾಕಿಕೊಂಡು ಸೂಕ್ತವಾದ ರೀತಿಯಲ್ಲಿ ಯಶಸ್ವಿ ಹೊಂದುವುದು ಅವಶ್ಯಕವಾಗಿದೆ. ಸ್ತ್ರೀಯರ ಪ್ರೌಢಶಿಕ್ಷಣವು ಸರಕಾರದ ವಿವಿಧ ಸೌಲಭ್ಯಗಳೊಂದಿಗೆ ಹಿಂದಿನ ವರ್ಷಗಳಿಗಿಂತ ಹೆಚ್ಚಿನ ಪ್ರಗತಿಯನ್ನು ಸಾಧಿಸುತ್ತ ಬಂದಿರುವುದು ಗಮನಾರ್ಹವಾದ ಅಂಶವಾಗಿದೆ.

**ಉಪಸಂಹಾರ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೯೦೦ರಿಂದ ೨೦೦೦ ದವರೆಗಿನ ಮಹಿಳೆಯರ ಪೂರ್ವಪ್ರಾಥಮಿಕ, ಪ್ರಾಥಮಿಕ, ಪ್ರೌಢಶಿಕ್ಷಣಗಳು ಈ ಅವಧಿಯಲ್ಲಿ ಪ್ರಗತಿಯನ್ನು ಹೊಂದುತ್ತಿರುವುದು ಕಂಡುಬರುತ್ತದೆ. ಮಹಿಳಾ ಶಿಕ್ಷಣಕ್ಕಾಗಿ ಪ್ರತ್ಯೇಕ ಶಾಲೆಗಳು, ಸಹಶಿಕ್ಷಣ ಶಾಲೆಗಳು, ಉಚಿತ ಸಮವಸ್ತ್ರ, ವಿದ್ಯಾರ್ಥಿವೇತನಗಳು ಮುಂತಾದ ಶಿಕ್ಷಣದ ಸೌಲಭ್ಯಗಳು ಸಹ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತ ಬಂದಿದೆ. ಅಲ್ಲದೇ ಪುರುಷ ಮತ್ತು ಸ್ತ್ರೀಯರ ಸಾಕ್ಷರತೆಯಲ್ಲಿ ವ್ಯತ್ಯಾಸ ಕಂಡುಬಂದರೂ ಮಹಿಳೆಯರಲ್ಲಿ ಸಾಕ್ಷರತೆಯ ಪ್ರಮಾಣ ಹೆಚ್ಚಾಗುತ್ತ ಬಂದಿರುವುದು ಗಮನಾರ್ಹವಾದ ಅಂಶವಾಗಿದೆ. ಮಹಿಳೆಯರ ಸಾಕ್ಷರತೆಯಲ್ಲಿ ರಾಜ್ಯದಲ್ಲಿಯೇ ೨ನೇಸ್ಥಾನ ಪಡೆದುಕ್ಕೊಂಡಿದೆ.

**ಗ್ರಂಥ ಋಣ**

೧. ಸಂಪದ್ಗಿರಿ ರಾವ್.ಕೆ ಮತ್ತು ಇತರರು(೧೯೭೦) : ದಕ್ಷಿಣ ಕನ್ನಡದ ಶಿಕ್ಷಣ ಸಂ.೧-೭, ಪು-೪೧೦, ೪೫೪-೪೫೭, ೪೦೨-೪೧೪) ಪ್ರಕಾಶಕರು ಮೈಸೂರು ರಾಜ್ಯ ಸರಕಾರ, ಮೈಸೂರು

೨. ನಾಯಕ ಹಾ.ಮಾ(೧೯೭೭) : ದಕ್ಷಿಣ ಕನ್ನಡ, ಸಂಪುಟ-೯, ಪು.೫೧೦ ರಿಂದ ೫೧೪, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ

೩. ಸೂರ್ಯನಾಥ ಯು.ಕಾಮತ್ (೧೯೮೩) : ಕರ್ನಾಟಕ ಗ್ಯಾಸಿಟೀಯರ್ ಸಂ.೭ ಕರ್ನಾಟಕ ಸರಕಾರ

೪. ದೇವಗೌಡ ಎ.ಸಿ(೧೯೫೪) : ಹಿಸ್ಟರಿ ಆಫ್ ಎಜುಕೇಷನ್ ಇನ್ ಸೌತ್ ಕೆನರಾ

೫. ಪಾಪ್ಯುಲೇಷನ್ ರಿಸರ್ಚ್ ಸೆಂಟರ್, ಇನ್ಸಟ್ಯೂಟ್ ಫರ್ ಸೋಶಿಯಲ್ ಆಂಡ್ ಎಕನಾಮಿಕ್ ಚೇಂಜ್ (೧೯೯೫) : ಸೆಲೆಕ್ಟಡ್, ಇಂಡಿಕೇಟರ್ಸ್ ಆಫ್ ಪಾಪ್ಯೂಲೇಷನ್ ಆಂಡ್ ಹೆಲ್ತ್, ಕರ್ನಾಟಕ (ಮಿಮಿಯೋ)

# ಕಟಕಟೆಯೊಳಗೆ ನಿಂತು......
# (ಎದುರು-ಬದರು (ಲೇಖ-ಲೋಕ ೧,೨,೩ರ ಕುರಿತು)

ಡಾ. ಮಲ್ಲಿಕಾ ಘಂಟಿ

ಜಗತ್ತಿನ ಯಾವ ಭಾಷೆಯ ಸಾಹಿತ್ಯದ ಸಂದರ್ಭದಲ್ಲಿಯೂ ಲೇಖಕಿಯರು ತಮ್ಮ ಬದುಕು-ಬರಹದ ಬಗ್ಗೆ ಹೇಳಿಕೊಳ್ಳುವ ಅನಿವಾರ್ಯತೆ ಎದುರಾಗಿರಲಿಕ್ಕಿಲ್ಲ. ಕನ್ನಡದ ಸಂದರ್ಭದಲ್ಲಿ ಇಂತಹದೊಂದು ಕ್ರಿಯೆ ನಡೆಯುತ್ತಿದೆ. ಬಹುಶಃ ನಮ್ಮ ಬಹುಪಾಲು ಲೇಖಕಿಯರು ಓದುವ ವರ್ಗದ ಜೊತೆಯಲ್ಲಿ ಮುಖಾಮುಖಿಯಾಗುವುದು ಅರ್ಥಪೂರ್ಣವಾದದ್ದು ಎಂದು ಭಾವಿಸುವುದರಲ್ಲಿ ತಪ್ಪಿಲ್ಲ. ಅದನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಔಚಿತ್ಯದ ಪ್ರಶ್ನೆಯನ್ನು ಎತ್ತಲಾರೆ. ಬರಹಗಾರನಿಗೆ ಎದುರಾಗದ ಬಿಕ್ಕಟ್ಟು ಹೆಣ್ಣಿಗೇಕೆ ಕಾಣಿಸಿಕೊಂಡಿತು. ಬರಹದಂತಹ ಸೃಜನಕ್ರಿಯೆಗಳು ವ್ಯಕ್ತಿಯಲ್ಲಿ ಸಾಮಾಜಿಕ ಬದುಕಿನ ಭಾಗವಾಗಿಯೇ ಬರಬೇಕಾದವುಗಳು ಎಂಬುದರ ಬಗ್ಗೆ ನಾವು ಮೂಲಭೂತವಾಗಿ ಚಿಂತನೆ ನಡೆಸಿಲ್ಲ. ಬರಹಗಾರ್ತಿಯರನ್ನು ಸಾರ್ವಜನಿಕ ಕಟಕಟೆಯಲ್ಲಿ ನಿಲ್ಲಿಸಿ ನಿನ್ನ ಬರಹದ ಉದ್ದೇಶವೇನು, ನಿನ್ನ ಪರಿಸರವೆಂತಹದ್ದು, ನಿನಗೆ ಬರೆಯುವ ಒತ್ತಾಸೆಗಳೆಲ್ಲ ಎಲ್ಲಿಂದ ಬಂದವು ಎಂದು ಕೇಳುವುದರ ಬಗ್ಗೆನೇ ಆಲೋಚಿಸಬೇಕಾಗಿದೆ. ಹೀಗೆ ಕೇಳುವುದರ ಹಿಂದಿರುವ ಧೋರಣೆ ಮತ್ತು ಕೇಳಿದ ಪ್ರಶ್ನೆಗಳಿಗೆ ತಡವರಿಸದೆ, ಹಾಕಿದ ಗೆರೆದಾಟದೆ ಹೇಳುವ ಉತ್ತರಗಳು ಹೆಣ್ಣಿನ ಬದುಕನ್ನು ಹಾಡುಹಗಲೇ ಬೆತ್ತಲೆಯಾಗಿಸುವ ಕ್ರಿಯೆಗಳಲ್ಲಿವೆ. ಯಾಕೆ ಲೇಖಕಿಯರು ತಾವು ಬರೆಯುವುದರ ಬಗ್ಗೆ ಡಂಗೂರ ಹೊಡೆದುಕೊಳ್ಳಬೇಕು. ಹೀಗೆ ಹೇಳಿಕೊಳ್ಳುವುದರಿಂದ ಸಾಹಿತ್ಯಿಕ, ಸಾಮಾಜಿಕ ಬದುಕಿನಲ್ಲೇನಾದರೂ ಸ್ಥಿತ್ಯಂತರಗಳು ಕಾಣಿಸಿಕೊಂಡವೇ. ಇಂತಹ ಪ್ರಶ್ನೆಗಳಿಗೆ ಉತ್ತರಗಳಿಲ್ಲವೆಂದಲ್ಲ. ಅವು ವ್ಯವಸ್ಥೆಯ ಹುದುಲೊಳಗೆ ಸಿಲುಕಿಕೊಂಡಿವೆ. ಆ ಕಾರಣಕ್ಕಾಗಿಯೇ ಹೆಣ್ಣನ್ನು ಕಟಕಟೆಯಲ್ಲಿ ನಿಲ್ಲಿಸುವ ಹುನ್ನಾರಗಳನ್ನು ಅಪ್ಯಾಯಮಾನವಾಗಿ ಸ್ವೀಕರಿಸುವ ವಿವೇಚನಾ ರಹಿತ ವ್ಯಕ್ತಿತ್ವವನ್ನು ರೂಪಿಸಿದ ಸಮಾಜ, ಕುಟುಂಬ, ಚರಿತ್ರೆಗಳೆಲ್ಲ ಮತ್ತೆ ಹೊಸ ಓದಿಗೆ ಒಳಗಾಗಬೇಕಾಗಿದೆ.

ಯಾವುದೇ ಸೃಜನಕ್ರಿಯೆ ಎಂಬುದು ವ್ಯಕ್ತಿಯ ಬೌದ್ಧಿಕ ಭಾವನಾತ್ಮಕ ಲೋಕಗಳ ಅನುಸಂಧಾನದ ಕೂಸುಗಳು. ಈ ಕೂಸುಗಳಿಗೆ ರಕ್ತಮಾಂಸವನ್ನು ಸಮಾಜವೊಂದು

ಒದಗಿಸಿದ ಅವಕಾಶಗಳಿಂದ ಪಡೆದುಕೊಂಡು ಅನುಭವದಿಂದ ನೀಡಲಾಗಿರುತ್ತದೆ. ಈ ಸಮಾಜಕ್ಕೊಂದು ಆರ್ಥಿಕ ಬುನಾದಿ ಇರುತ್ತದೆ. ಇದರ ಆಧಾರದ ಮೇಲಿಂದಲೇ ಸಮಾಜ, ಸಂಸ್ಕೃತಿ, ಸಾಹಿತ್ಯದ ಸಂಗತಿಗಳು ಪಲ್ಲವಿಸಿರುತ್ತವೆ. ಹೀಗೆ ಸೃಷ್ಟಿಕ್ರಿಯೆಯ ಸೂತ್ರವಿರುವಾಗ ದೀಢೀರನೆ ಮಹಿಳೆಯಾದವಳು ಶೂನ್ಯದಲ್ಲಿ ಜಗತ್ತು ಬೆರಗಾಗುವಂತ ಹದ್ದೇನನ್ನು ಸೃಷ್ಟಿಸಲು ಸಾಧ್ಯವೆ? ಅಥವಾ ಗಂಡಸಾದವನು ಸೃಷ್ಟಿಸಿರುವನೆ? ನಮ್ಮಂತಹ ಸಮಾಜಗಳಲ್ಲಿ ಸಾಹಿತ್ಯಾದಿ ಲಲಿತಕತೆಗಳು ಗಂಡಸಾದವನು ಸಾಧಿಸಬೇಕಾದ ಸಂಗತಿಗಳಾಗಿ ರುವುದರಿಂದ ಅವು ಸಹಜತೆ ಮತ್ತು ಸಾಮಾಜಿಕ ಗೌರವಾದರಗಳೊಂದಿಗೆ ಬೆಳೆಯುತ್ತ ನಡೆದಿವೆ. ಸೃಜನಶೀಲತೆ, ಅಭಿವ್ಯಕ್ತಿಯ ಸಾಧ್ಯತೆಗಳನ್ನೆಲ್ಲ ಗಂಡಸು ತನ್ನದೇ ಲೋಕದಲ್ಲಿ ಮೂಡಿಮುಳುಗಬೇಕಾದವುಗಳು, ಅವುಗಳಿಗೆ ತಾನೇ ನಿಜವಾದ ವಕ್ತ, ವಾರಸುದಾರನೆಂದು ಹೇಳಿಕೊಂಡ. ಅರವತ್ನಾಲ್ಕು ಕಲೆಗಳಲ್ಲಿ ಪಾರಂಗತನಾಗಬೇಕಾದ ತನ್ನ ಬುದ್ಧಿವಂತಿಕೆಗೆ ಬೀಗಿದ. ಬರೆಯುವ, ಓದುವ ಬುದ್ಧಿ ಪ್ರಧಾನವಾದ ಕ್ರಿಯೆಗಳನ್ನು ಪಾಂಡಿತ್ಯವೆಂದ. ಅದನ್ನು ಪಡೆಯುವ ಶಕ್ತಿ ದೈವದತ್ತವಾಗಿ, ಹುಟ್ಟಿನ ಹೊಕ್ಕಳಿನಲ್ಲಿಯೇ ಕಟ್ಟಿಕೊಂಡು ಬಂದಿರುವ ಕಾರಣವೇ ತನ್ನನ್ನು ಪಂಡಿತನೆಂದು ಜಗತ್ತು ಕರೆಯುವುದು ಎಂದು ಹೆಮ್ಮೆಪಟ್ಟ. ಮನುಷ್ಯ ಲೋಕದ ಬುದ್ಧಿಪ್ರದವಾದ, ವಿಚಾರಪ್ರದವಾದ ಸಂಗತಿಗಳಲ್ಲಿಯೂ ಲಿಂಗನೆಲೆಯ ಭಾಷೆಯಿಂದ ತಾರತಮ್ಯ ಎಣಿಸಿತು ಸಮಾಜ. ಬುದ್ಧಿವಂತಿಕೆಯನ್ನುವುದು ಗಂಡುಲೋಕದ ಸಂಗತಿಯೇ ಆಗಿರುತ್ತದೆ ಎಂಬ ನಿರ್ಧಾರಕ ನೆಲೆಯಿಂದಲೇ ಬುದ್ಧಿವಂತನನ್ನು ಹುಟ್ಟಿಸಿರುವ ಸಮಾಜ ಹೆಣ್ಣಿಗೆ ಈ ಬುದ್ಧಿವಂತಿಕೆಯ ಪದವನ್ನು ಗೌರವ ಸೂಚಕವಾಗಿ ಅನ್ವಯಿಸಿ ಹೇಳುವುದಕ್ಕಿಂತಲೂ ಲೇವಡಿ ಮಾಡಲು ಹೀಗಳೆಯಲು ಬಳಸುವುದನ್ನು ಗಮನಿಸಬಹುದು.

ಇತ್ತೀಚಿನ ದಿನಗಳಲ್ಲಿ ನಮ್ಮ ಹಿರಿಯ ಸಾಹಿತಿಗಳು ಲೇಖಕಿಯರ ಬಗ್ಗೆ ಎಲ್ಲಿಲ್ಲದಕಾಳಜಿ ತೋರಿಸುತ್ತಿದ್ದಾರೆ. ಮಹಿಳೆಯರ ಸಾಹಿತ್ಯವನ್ನು ಓದುವ ವ್ಯವಧಾನವಾಗಲಿ, ಏಕಮುಖ ಓದಿನ ಸಾಂಸ್ಕೃತಿಕ ಗ್ರಹಿಕೆಯಿಂದ ಬಿಡುಗಡೆಗೊಂಡಾಗಲಿ, ಪಾರಂಪರಿಕವಾಗಿ ಬೆಳೆಸಿಕೊಂಡು ಬಂದ ನಿರ್ಧಾರಾತ್ಮಕ ನಿರಾಕರಣೆಯ ಧೋರಣೆಯಿಂದ ಹೊರಗುಳಿಯುವ ಆರೋಗ್ಯವಂತ ಮನಸ್ಸಿನಿಂದ ವ್ಯಕ್ತಗೊಂಡ ಕಾಳಜಿಯಂತೆ ಈ ಹೇಳಿಕೆಗಳು ಕಾಣಿಸುತ್ತಿಲ್ಲ. ಇಲ್ಲಿಯವರೆಗೂ ಹೇಳಿಕೊಂಡು ಬಂದ ಲೇಖಕಿಯರ ಸಾಹಿತ್ಯದ ವಿಮರ್ಶಾ ರೀತಿಯನ್ನೇ ಬೇರೊಂದು ಹೊಸ ಒರಸೆಯಿಂದ ಪ್ರಾರಂಭಿಸಿರುವುದುನ್ನು ಗಮನಿಸಬೇಕಾದ ಸಂಗತಿ. ಜಗತ್ತಿನ ಲೇಖಕಿಯರ ಬಗ್ಗೆ ಏಕೆ ಭಾರತೀಯ ಬೇರೆಬೇರೆ ಭಾಷೆಯ ಲೇಖಕಿಯರ ಕುರಿತು ಉಬ್ಬಿಟ್ಟು ಮಾತನಾಡುವ, ಮಾನಸನ್ಮಾನದ ಬಗ್ಗೆ ಬೀಗುವ, ಬಿರುದುಬಾವಲಿಗಳ ಲೆಕ್ಕ ಹಾಕುವ ಇವರು ಮರೆಯದೆ ಹೇಳುವ ಮಾತೊಂದಿದೆ. ಅದು ಕನ್ನಡದ ಲೇಖಕಿಯರಿಗೆ ಕಿವಿಮಾತು ಎಂದಾದರೂ ಆಯಿತು ಅಥವಾ ಉಪದೇಶ, ಬುದ್ಧಿಮಾತು ಎಂದಾದರೂ ಭಾವಿಸೋಣ. ಆ ಮಾತುಗಳು ಎಷ್ಟೊಂದು ಕಳ್ಳುಹರಿದು ಬಂದವುಗಳಾಗಿರುತ್ತವೆ ಎಂದರೆ

"ನಮ್ಮ ಲೇಖಕಿಯರು ಮರಾಠಿ ಲೇಖಕಿಯರಂತೆ ಅಥವಾ ಬಂಗಾಲಿ ಸಹೋದರಿಯಂತೆ ಇಲ್ಲವೆ ಜ್ಞಾನಪೀಠ ಪ್ರಶಸ್ತಿ ಪಡೆದುಕೊಂಡ ಅಮೃತಪ್ರೀತಮ್, ಮಹಾದೇವಿವರ್ಮ, ಇಂದಿರಾಗೋಪಾಲರಂತೆ ಬರೆಯಬೇಕು" ಎಂದು ಅಲವತ್ತುಕೊಂಡು ಹೇಳುತ್ತಾರೆ. ಇಂತಹವರು ಪರೋಕ್ಷವಾಗಿ ಕನ್ನಡದ ಲೇಖಕಿಯರು ಸಮರ್ಥರಲ್ಲವೆಂದು ಸಾರುತ್ತ ಹೋಗುವರು. ಸಾಹಿತ್ಯ ಸೃಷ್ಟಿಕ್ರಿಯೆಯೆಂಬುದು ಸಾಮಾಜಿಕ ಅನುಭವದ ಮೂಲಕ ಮನುಷ್ಯನಲ್ಲಿ ಗೂಡುಕಟ್ಟಿ, ಕನಸು, ಕಲ್ಪನೆ, ಸುಳ್ಳು ನಿತ್ಯಗಳನ್ನೆಲ್ಲ ಅರಗಿಸಿಕೊಂಡು ಪ್ರಸ್ತುತ ಸಮಾಜದಲ್ಲಿ ಬದುಕಲೆಂದು ಹುಟ್ಟಿಬರಬೇಕಾದ ಸುಂದರ ಚಿಟ್ಟೆ ಎಂಬುದನ್ನೇ ಮರೆತು ಮಾತನಾಡುವ ಮಾತುಗಳಿವು. ಭಾರತೀಯ ಸಮಾಜ ಅದರ ಭಾಗವಾದ ಕುಟುಂಬ, ಕುಟುಂಬದಲ್ಲಿ ಗಂಡಸಾಗಿ ಹುಟ್ಟಿದ ಒಂದೇ ಒಂದು ಕಾರಣಕ್ಕಾಗಿ ದಕ್ಕಿಸಿ ಕೊಳ್ಳುವ ಯಜಮಾನಪಟ್ಟ. ಈಪಟ್ಟದ ಮೇಲೆ ಕುಳಿತು ಹೆಣ್ಣಿನ ಬದುಕಿನ ಬೆಟ್ಟ ಕಟ್ಟುವ ಅಥವಾ ಕುಟುಂಬ ಮೂಲದಲ್ಲಿಯೇ ಹೆಣ್ಣು ಜೀವಕ್ಕೊಂದು ಕಟ್ಟನ್ನು ಹಾಕಿ ನೀರೆರೆದರೆ ಅದು ಕಟ್ಟು ಮೀರಿ ಬೆಳೆಯುವುದಾದರು ಹೇಗೆ ಸಾಧ್ಯ? ಕಟ್ಟಿಲ್ಲದ, ಬಿಕ್ಕಟ್ಟಿಲ್ಲದ ಗಂಡು ಸೃಷ್ಟಿಸಿದ್ದೆಲ್ಲ ಶ್ರೇಷ್ಠವೆಂದಾಗಲಿ, ಕನಿಷ್ಠವೆಂದಾಗಲಿ ಕರೆಯುವ ಉದ್ದೇಶ ನನ್ನದಲ್ಲ. ಬದುಕು ಕೊಡ ಮಾಡಿದ ಅವಕಾಶಗಳ ಅನುಭವದ ಹಿನ್ನೆಲೆಯೇ ವ್ಯಕ್ತಿಯ ಬುದ್ಧಿಭಾವಗಳನ್ನು ನಿರ್ಧರಿಸುವ ಸಂಗತಿಗಳು ಎಂಬ ಸತ್ಯವನ್ನು ಮನವರಿಕೆ ಮಾಡಿಕೊಡುವದಷ್ಟೇ ನನ್ನ ಉದ್ದೇಶ. ಹೆಣ್ಣಿಗೆ ಈ ಸಮಾಜ, ಬದುಕು ನೀಡಿದ್ದು 'ಕುಟುಂಬ'ವೆಂಬ ನೀರಿಲ್ಲದ ನೆರಳಿಲ್ಲದ ಚಿಕ್ಕ ಜಗತ್ತೊಂದನ್ನೆ. ಇದರಲ್ಲಿಯೇ ಹುಟ್ಟಿ ಬೆಳೆದ ಹೆಣ್ಣುಜೀವ ಕಂಡು ಉಂಡ, ಅನುಭವದಿಂದ ಹೇಳಿದ, ಹೇಳುವುದನ್ನು ಲಘುವಾಗಿ ಪರಿಗಣಿಸುತ್ತೇವೆ. ಚಾರಿತ್ರಿಕ ಅರಿವಿನಿಂದ ಅದನ್ನು ತೂಗಿನೋಡಲು ಮುಂದಾಗುವುದಿಲ್ಲ. ಗಂಡಿನ ಸಾಧನೆ ಸಿದ್ಧಿಗಳನ್ನು ಅವನ ಪ್ರಯತ್ನ ಪಾಂಡಿತ್ಯ, ಲೋಕಜ್ಞಾನದ ಉತ್ಪತ್ತಿಯೆಂದು ಹೆಮ್ಮೆಯಿಂದ ಹೇಳಿಕೊಂಡು ಪ್ರಚಾರ, ಪರಾಕುಗಳನ್ನು ಹಾಕುತ್ತೇವೆ. ಅದೇ ಹೆಣ್ಣು ಬರೆಯುವ ಕ್ರಿಯೆಯ ಬಗ್ಗೆ ಗುಮಾನಿ ಪಡುತ್ತೇವೆ, ತೂಗಿ ನೋಡುತ್ತೇವೆ, ಕಚ್ಚಿತಿಂದು ಬೆಲೆ ಕೇಳುವ ಆಶೆ ಬುರುಕ ಗ್ರಾಹಕನಂತೆ ಲೆಕ್ಕಾಚಾರಕ್ಕಿಳಿಯುತ್ತೇವೆ. ಇದು ಹೀಗೇಕಾಯಿತು ಎಂಬುದರ ಬಗ್ಗೆ ಇಲ್ಲಿಯವರಿಗೆ ಗಾಢವಾಗಿ ಕಾಡಿದ್ದಲ್ಲಿ ಹೆಣ್ಣಿನ ಸೃಜನಶೀಲತೆಯ ಒತ್ತಾಸೆಗಳನ್ನು ಕೇಳುತ್ತೇವೆ. ಅದರ ಹಿಂದಿರುವ ನೆರಳನ್ನು ಹುಡುಕಿ ಬಣ್ಣದ ಅಂಗಿಹೊಲಿದು ಹಾಕುತ್ತೇವೆ. ಇದೆಲ್ಲ ಎಷ್ಟೊಂದು ಸರಳವಾಗಿ ನಡೆದುಕೊಂಡು ಬಂದಿದೆ ಎಂಬುದರ ಕಡೆ ಗಂಭೀರವಾದ ಆಲೋಚನೆಗಳು ಹುಟ್ಟಿಕೊಳ್ಳಬೇಕಾಗಿವೆ.

ತುಮಕೂರಿನಲ್ಲಿ ನಡೆದ ಅಖಿಲ ಭಾರತ ಸಾಹಿತ್ಯ ಸಮ್ಮೇಳನದ ಸದರ್ಭದಲ್ಲಿ ಸಮ್ಮೇಳನಾಧ್ಯಕ್ಷರ ಜೊತೆಯಲ್ಲಿ ಒಂದು ಸಂವಾದ ಗೋಷ್ಠಿ ನಡೆಯಿತು. ಆ ಸಮಯದಲ್ಲಿ ವೈದೇಹಿಯವರು ಗಂಭೀರವಾದ ಲಿಂಗನೆಲೆಯಲ್ಲಿ ನಡೆದಿರಬಹುದಾದ

ಪುರುಷ ರಾಜಕಾರಣದ ಕುರಿತು ಹಾಗೇ ಕೇಳಿದ ಪ್ರಶ್ನೆಯನ್ನು ಅರ್ಥೈಸಿಕೊಳ್ಳುವ ಉದಾರತೆಯಿಲ್ಲದ ಲೇಖಕರು ತುಂಬಾ ಉದ್ದಟತನದ, ಜಾರಿಕೆಯ, ಲಘುವಾದ ರೀತಿಯಲ್ಲಿ ಉತ್ತರಿಸಿ ಕೈತೊಳೆದುಕೊಂಡರು. ಸಾರ್ವಜನಿಕವಾಗಿ, ಖಾಸಗಿಯಾಗಿ ಹೆಣ್ಣೊಂದು ತನ್ನ ಬದುಕಿನ ಬೆನ್ನೆಲುಬು ಎಂದು ಹೇಳಿಕೊಳ್ಳುವ ಲೇಖಕ ಅದನ್ನೇ ತನ್ನ ಕೃತಿಯಲ್ಲಿ ಮೂಡಿಸುವಾಗ ಉಪಭೋಗದ ವಸ್ತುವಿಗಿಂತಲೂ ಭಿನ್ನವಾಗಿ ಕಾಣಲಾರ. ಅವನ ದೃಷ್ಟಿಯಲ್ಲಿ ಸಾಹಿತ್ಯಾನೆ ಬೇರೆ ಬದುಕೆ ಬೇರೆ. ಅದು ಖಾಸಗಿ ಬದುಕು. ಇನ್ನೂ ಇನ್ನೂ ಬೇರೆ. ಅದನ್ನು ಕೇಳುವ, ಪ್ರಶ್ನಿಸುವ ಹಕ್ಕು ಯಾರಿಗೂ ಇಲ್ಲವೆಂದು ಸಂವಿಧಾನದ ಪಿನ್‌ಕೋಡ್‌ಗಳನ್ನು ಮುಂದಿಟ್ಟು ಮಾತನಾಡುತ್ತಾನೆ. ಅದನ್ನೇ ಇಂದು ಲೇಖಕಿಯರು ಬರೆಯುವ, ಬರೆದದ್ದರ ಬಗ್ಗೆ ಪ್ರಮಾಣಿಭೂತರಾಗಿ ಹೇಳಿಕೊಳ್ಳಲು ಹೊರಟಿರುವುದರ ಬಗ್ಗೆ ಆಲೋಚಿಸಬೇಕಾಗಿದೆ.

ಮೈಸೂರಿನಲ್ಲಿ ಮೊದಲ ಬಾರಿಗೆ ಕರ್ನಾಟಕ ಲೇಖಕಿಯರ ಸಂಘ ಮತ್ತು ಮೈಸೂರು ವಿಶ್ವವಿದ್ಯಾಲಯದ ಮಹಿಳಾ ವಿಭಾಗದ ಆಶ್ರಯದಲ್ಲಿ 'ಮಹಿಳೆ ಸಾಹಿತ್ಯ ಪರಿಸರ' ಎಂಬ ಸಂವಾದ ರೂಪದ ಕಾರ್ಯಕ್ರಮವೊಂದು ನಡೆದು ಅದು ಜನಪ್ರಿಯಗೊಂಡು ಅದೇ ಮಾದರಿಯ ಎರಡು ಕಾರ್ಯಕ್ರಮಗಳು ಬೇರೆ ಬೇರೆ ಭಾಗದಲ್ಲಿ ನಡೆದು ಅವುಗಳ ದಾಖಲೆಯಾಗಿ ಲೇಖ-ಲೋಕವೆಂಬ ಕೃತಿಗಳನ್ನು ಲೇಖಕಿಯರ ಸಂಘ ಹೊರತರುವುದರ ಮೂಲಕ ಚಾರಿತ್ರಿಕ ಕಾರ್ಯವೊಂದನ್ನು ಮಾಡಿದ ಸಂತೋಷದಲ್ಲಿದೆ. ಈ ಮೂರು ಕೃತಿಗಳಲ್ಲಿ ಲೇಖಕಿಯರ ಮತ್ತು ಪ್ರೇಕ್ಷಕರ ಮಧ್ಯ ನಡೆದ ಸಂವಾದದಲ್ಲಿಯ ಪ್ರಶ್ನೆಗಳು ಉತ್ತರಗಳು ಸಮಾಜವೊಂದರ ಅಂತರ್ಯವನ್ನು ಬಗೆದು ನಿತ್ಯದ ಹೊಳಹುಗಳನ್ನು ಕಾಣುವ ಪ್ರಾಮಾಣಿಕ ಪ್ರಯತ್ನಗಳೆಂದು ಕರೆಯಲಾಗದು. ಮೇಲ್ ಮೇಲ್‌ನೋಟಕ್ಕೆ ಸಿಕ್ಕ ಸಂಗತಿಯನ್ನೇ ಅಭೂತಪೂರ್ವವಾಗಿ ಹೇಳಿಕೊಂಡ ಧನ್ಯತೆಯ ಭಾವ ಇಲ್ಲಿದೆ. ಸಾಮಾಜಿಕವಾಗಿ ಮಾತನಾಡುವ ಮೊದಲ ಪ್ರಯತ್ನದಲ್ಲಿ ಹೇಳಿಕೊಳ್ಳುವ ಒತ್ತಡದಲ್ಲಿ ಹೀಗಾಗಿರಬಹುದು ಎಂದು ಭಾವಿಸಲು ಆಗದು. ಹೆಣ್ಣಿನ ಅಸ್ತಿತ್ವ, ಅನನ್ಯತೆಯ ಕುರಿತ ಹಾಗೆ ಸಿದ್ಧಾಂತವೊಂದರ(ಸ್ತ್ರೀವಾದ) ಬಲದಿಂದ ಮಾತನಾಡುತ್ತಿರುವ ಹೊತ್ತಿನಲ್ಲಿ ಭಾರತೀಯ ಸಮಾಜದ ಸಂರಚನೆಯನ್ನು ಅರ್ಥೈಸಿಕೊಳ್ಳುವ ಅನಿವಾರ್ಯತೆಯು ಇದೆ. ಜಾತಿ, ವರ್ಗಗಳ ಜೊತೆಯಲ್ಲಿ ಹುರಿಗೊಂಡಿರುವ ಲಿಂಗನೆಲೆಯ ಸಿಕ್ಕುಗಳನ್ನು ಬಿಚ್ಚುವುದಾಗ ಬೇಕಾಗಿದೆ. ಆದರೆ ಇಂದು ಸ್ತ್ರೀವಾದದ ಕನ್ನಡಕದಿಂದ ಬರೀ ನಗರಕೇಂದ್ರಿತ ಮೇಲ್ವರ್ಗ ಮೇಲ್‌ಜಾತಿಯ ಮಹಿಳೆಯರ ಭ್ರಮಾತ್ಮಕ ಬದುಕಿನ ಗುಮ್ಮನನ್ನು ಗುದ್ದುತ್ತ ಹೋದರೆ ಗ್ರಾಮೀಣ ಮೂಲದ ಮಹಿಳೆಯನ್ನು ನಿರಂತರ ಹರಿದು ತಿನ್ನುತ್ತಿರುವ ಹಸಿವು, ದುಡಿಮೆ, ಉರುವಲು, ಕುಡಿಯುವ ನೀರು, ಮಲಮೂತ್ರ ವಿಸರ್ಜಿಸುವ ಸಲುವಾಗಿ ಸೂರ್ಯ ಮುಳುಗುವವರೆಗೂ ಕಾಯುವ ಚಡಪಡಿಕೆ, ಜಾತಿ, ವರ್ಗನೆಲೆಯಲ್ಲಿಯ ಕ್ರೌರ್ಯದ ದಳ್ಳುರಿಯಲ್ಲಿ ಸುಟ್ಟು ಕರಕಲಾಗುವ ಮಹಿಳೆಯರ ಬದುಕು ಮಂಜುಗಡ್ಡೆಯ ಹಾಗೇ

ಉಳಿದು ಹೋಗುವ ಅಪಾಯವಿದೆ. ಇಂದು ಮಹಿಳಾ ಸಮಾನತೆಯ ಕುರಿತು ಮಾತನಾಡುವ, ಬರೆಯುವ ಬಹುಪಾಲು ಮಹಿಳೆಯರು ಮೈಪರಚಿಕೊಳ್ಳುವ ಕಾರ್ಯದಲ್ಲಿ ತೊಡಗಿರುವುದು ವಿಷಾದನೀಯ. ಮಾರ್ಕ್ಸ್‌ವಾದದ ಬಗ್ಗೆ ನಮ್ಮ ಬುದ್ಧಿಜೀವಿ ಗಂಡಸರ ಲೋಕದಲ್ಲಿ ಒಂದು ಸಂಗತಿ ಜಾರಿಯಲ್ಲಿದೆ. ಇದು ಗಂಭೀರವಾಗಿ ಪರಿಗಣಿಸಬೇಕಾದ ವಿಷಯ ಕೂಡಾ ಹೌದು. ಅದೇನೆಂದರೆ ಯಾವುದೇ ಸಿದ್ಧಾಂತ, ವಿಚಾರವಾದಗಳಾಗಲಿ ಅವು ಮೊದಲಿಗೆ ಬ್ರಾಹ್ಮಣರ ಬುದ್ಧಿಯ ಕುಲುಮೆಯಲ್ಲಿಯೇ ಹಾಯ್ದು ಬರುವುದರಿಂದ ಅವು ಬ್ರಾಹ್ಮಣ ಬುದ್ಧಿಮನಸ್ಸಿನ ಆಕಾರಕ್ಕೆ ಅನುಗುಣವಾಗಿಯೇ ಚಲಾವಣೆಗೆ ಬರುತ್ತದೆ. ಬ್ರಾಹ್ಮಣ ಬುದ್ಧಿಯಿಂದ ಶೂದ್ರ ಮೂಲದಲ್ಲಿ ಅಸ್ತಿತ್ವ ಹುಡುಕುವಷ್ಟರಲ್ಲಿಯೇ ಅವುಗಳ ಬಿಸಿ ಕರಗಿ ಭಾರತೀಯ ಸಾಮಾಜಿಕ ಜಡತ್ವವನ್ನೆಲ್ಲ ಪಡೆದುಕೊಂಡಿರುತ್ತವೆ. ಈ ತರಹದ ಮಾತುಗಳು ಪೂರ್ಣನಿತ್ಯವೂ ಅಲ್ಲ, ಸುಳ್ಳುಗಳೆಂದು ಅಲ್ಲಗಳೆಯಲೂ ಆಗದು. ಇವೆಲ್ಲವುಗಳು ಅರ್ಧಸತ್ಯಗಳೇ. ಈ ಅರ್ಧಸತ್ಯದ ತೆಕ್ಕೆಯಿಂದ ಸ್ತ್ರೀವಾದ, ವಿಚಾರಧಾರೆಯನ್ನು ಹೊರತುಪಡಿಸಲು ಆಗದು. ಹೀಗಾಗಿ ಇಂದು ಒಕ್ಕಣ್ಣಿನ ಧೋರಣೆಯಿಂದ ಭಾರತೀಯ ಮಹಿಳೆಯನ್ನು ಕಾಣುವುದೆಲ್ಲ ನಿಲ್ಲಬೇಕಾಗಿದೆ. ಇದೆಲ್ಲವನ್ನು ಯಾಕೆ ಹೇಳುವಂತಾಯಿತೆಂದರೆ ಲೇಖ-ಲೋಕದಲ್ಲಿ ಕಾಣಿಸಿಕೊಂಡ ಬಹುಪಾಲು ಲೇಖಕಿಯರೆಲ್ಲ ಮೇಲ್‌ಜಾತಿಯಿಂದ, ಮೇಲ್‌ವರ್ಗ, ಮೇಲ್‌ಮಧ್ಯಮವರ್ಗದಿಂದ ಬಂದವರಾಗಿರುವುದರಿಂದ ಅವರು ಹೇಳಿಕೊಂಡು ಹೋಗಿರುವ ಸಂಗತಿಗಳೆಲ್ಲ ಗಿಳಿಜಾತಕಗಳೆನಿಸುತ್ತವೆ.

ಜಾತಿಯ ನೆಲೆಯ ಸಾಮಾಜಿಕ ಅಪಮಾನದ ನೋವು, ವರ್ಗನೆಲೆಯ ದೈಹಿಕ ಮಾನಸಿಕ ಕ್ರೌರ್ಯ, ದೌರ್ಜನ್ಯಗಳನ್ನು ಈ ತರಹದ ಲೇಖಕಿಯರು ಅಯ್ಯೋಪಾಪವೆಂದು ನೋಡಿ ತಿಳಿಯಬೇಕೆ ಹೊರತು ಅನುಭವಿಸಿ ಪ್ರತಿಕ್ರಿಯಿಸುವ ಛಾತಿವಂತಿಕೆಯಿಂದಲ್ಲ. ಈ ಮೂರು ಕೃತಿಯಲ್ಲಿಯ ಸುಮಾರು ಇಪ್ಪತ್ತಾರು ಜನ ಲೇಖಕಿಯರು ಒಂದು ನಿರ್ದಿಷ್ಟ ಕೌಟುಂಬಿಕ, ಸಾಮಾಜಿಕ ನೆಲೆಯಿಂದ ಮಾತನಾಡುತ್ತಿರುವುದರಿಂದ ಯಾರಲ್ಲಿಯು ಸಾಮಾಜಿಕ ಭಾಗವಾಗುವ, ಚರಿತ್ರೆಯ ಗತಿಶೀಲತೆಗೆ ಹಿನ್ನೆಡೆ-ಮುನ್ನಡೆಯಾಗುವ ಕಿರಿಕ್ಕುಗಳಿಲ್ಲ. ಅದರ ಜೊತೆಯಲ್ಲಿ ಇನ್ನು ಒಂದು ಕಾರಣವೆಂದರೆ ಕರ್ನಾಟಕದ ಸಾಮಾಜಿಕ ಬದುಕಿನಲ್ಲಿ ಔದ್ಯೋಗಿಕತೆ ಮತ್ತು ಜಮೀನ್ದಾರಿಕೆಗಳು ಅಲ್ಲೋಲಕಲ್ಲೋಲ ವುಂಟು ಮಾಡುವ ಬಲಿಷ್ಠ ಶಕ್ತಿಗಳಲ್ಲ. ಬಂಗಾಲ, ಮಹಾರಾಷ್ಟ್ರ, ಆಂಧ್ರದಂತಹ ರಾಜ್ಯಗಳು ಜಮೀನ್ದಾರಿಕೆ, ವಸಾಹತುಶಾಹಿ ಔದ್ಯೋಗಿಕ ದವಡೆಯಲ್ಲಿ ಸಿಕ್ಕು ರಕ್ತರಂಜಿತವಾದ ಚರಿತ್ರೆಯನ್ನು ಹೊಂದಿವೆ. ಇಂತಹ ಮೂಲದಿಂದ ಬದುಕುಕಟ್ಟಿಕೊಂಡವರು ಹೆಣ್ಣುಗಂಡುಗಳಾದಿಯಾಗಿ ಒಂದು ತೀವ್ರ ಕ್ರಿಯಾತ್ಮಕ ತುಡಿತವನ್ನು ಹೊಂದಿರಲು ಸಾಧ್ಯವಾಗಿರುತ್ತದೆ. ಇಂದು ಮಹಾರಾಷ್ಟ್ರದಲ್ಲಿ ದಲಿತ ಲೋಕದಿಂದ ಬಂದವರು ಅಕ್ಷರ ಕಲಿಕೆಯಿಂದ ವಂಚಿತರಾಗಿ ಶತಶತಮಾನಗಳನ್ನು ಕತ್ತಲೆಯ ಕೈಯಿಂದಲೇ ದೂಡಿದವರಿಗೆ

ಇಂದು ಆಧುನಿಕ ಬ್ರಿಟಿಷರಾಗಮನದ ಮೂಲಕ ಕೈಗೆಹತ್ತಿದ ನಾಲ್ಕಕ್ಷರ ಕಲಿತವರು ಆಧುನಿಕ ಲೋಕದ ಬೆಳಕಿಗೆ ಕಣ್ಣು ಒಗ್ಗಿಸಿಕೊಳ್ಳುವ ಮೊದಲು ಕಣ್ಣು ಉಜ್ಜಿ ತಿಕ್ಕಿದವರೆ. ಅಕ್ಷರದ ಅರಿವಿನ ಬಲದಿಂದ ದಲಿತ ಮಹಿಳೆಯರು ತಮ್ಮ ಅನುಭವಗಳನ್ನು ಹೇಳಿಕೊಳ್ಳುವ ಒತ್ತಡಕ್ಕೆ ಒಳಗಾದವರು. ಈ ಒತ್ತಡ ಧಾವಂತತನ ಎಷ್ಟಿತ್ತೆಂದರೆ ಆತ್ಮಕಥೆಗಳು ಮೈದಾಳುವಷ್ಟಿತ್ತು. ಈ ಮಹಿಳೆಯರು ತಮ್ಮ ಬದುಕಿನ ಬಗ್ಗೆ ಹೇಳಿಕೊಂಡಿರುವುದರಲ್ಲಿ ಸಾಮಾಜಿಕ ಬದುಕಿದೆ. ಜಾತಿ, ಕುಲ, ಹಣ, ಕಲಿಕೆ, ಸಂಸ್ಕೃತಿಗಳೆಲ್ಲದರ ಮೊತ್ತದಂತೆ ಕಾಣಿಸಿಕೊಂಡಿರುವುದರಲ್ಲಿ ಸಮಷ್ಠಿ ಶಕ್ತಿಯಿದೆ. ಚರಿತ್ರೆಯ ಭಾಗವಾಗಿ ಅವರ ಬದುಕು ಬಿಚ್ಚಿಕೊಳ್ಳುವುದರಿಂದ ಅವು ಭಾರತೀಯ ಭವ್ಯದಿವ್ಯತೆಯ ಸೋಗಲಾಡಿತನಕ್ಕೆ ಮುಖಾಮುಖಿಯಾಗುತ್ತವೆ. ಹೀಗೆ ಬರೆಯುತ್ತಿರುವ ಲೇಖಕಿಯರಿಗೆ ಆತ್ಮಚರಿತೆಯನ್ನು ಬಿಟ್ಟು ಬೇರೆ ಸಾಹಿತ್ಯ ಪ್ರಕಾರಗಳ ಬಗ್ಗೆ ತಿಳಿದಿಲ್ಲ. ಕಥೆ, ಆತ್ಮಕಥೆ, ಕಾದಂಬರಿ, ಕವಿತೆ ಇವೆಲ್ಲವುಗಳು ಆಕೆ ಸಾಧಾಸೀದಾ ಹೇಳಿಕೊಂಡು ಹೋಗಿರುವ ನೆನಪಿನ ಬಲದ ಬದುಕಿನ ವಾಸ್ತವಗಳಾಗಿರುವುದರಿಂದ ಸಾಮಾಜಿಕ, ಸಾಹಿತ್ಯಿಕವಾದ ಒಂದು ಗಂಭೀರ ಚಿಂತನಾ ವರ್ಗ ರೂಪುದಾಳಲು ಸಾಧ್ಯವಾಯಿತು. ವ್ಯವಸ್ಥೆ, ವ್ಯವಸ್ಥೆಯ ಭಾಗವಾದ ಗಂಡು ಹೆಣ್ಣುಗಳು ಎದ್ದ ಗೋಡೆಯ ಮಧ್ಯ ಅನುಭವಿಸಿದ ಯಾತನಾಮಯ ಬದುಕಿನ ಪರಿಚಯ ಸಮಾಜಶಾಸ್ತ್ರಜ್ಞರು ಬೆಚ್ಚಿಬೀಳವಂತಹ ಹಲವು ಸಂಗತಿಗಳು ಹೊರಬಿದ್ದವು ಇದರ ಮೂಲಕ. ಆ ಮಾದರಿಯೊಂದು ನಮ್ಮ ಮೆದುಳು ಮನದಲ್ಲಿ ಸಣ್ಣಗೆ ಕೊರೆಯುತ್ತಿರುವುದರಿಂದ ನಾವುಗಳ ಕನ್ನಡದ ಆತ್ಮರೂಪಿ ಬರಹದಲ್ಲಿ ಅದನ್ನೇ ಹುಡುಕಲು ಮುಂದಾಗುತ್ತೇವೆ.

ಕರ್ನಾಟಕದ ಸಂದರ್ಭದಲ್ಲಿ ದಲಿತಲೋಕದಿಂದ, ಬೇರೆ ಧರ್ಮಗಳಿಂದ ಬಂದವರೆಲ್ಲ ಶ್ರೇಣಿಕೃತ ಜಾತಿಮತದ ವ್ಯವಸ್ಥೆಯಲ್ಲಿ ನೋವು ಅಪಮಾನಗಳನ್ನು ಸಾಮಾಜಿಕ ಬೆಳವಣಿಗೆಯ ಭಾಗವೆಂದಾಗಲಿ, ಚಾರಿತ್ರಿಕ ಗತಿಶೀಲತೆಯ ಭಾಗವೆಂದಾಗಲಿ ಭಾವಿಸಿ ವಸ್ತುನಿಷ್ಠವಾಗಿ ಬರೆಯುವ ಜವಾಬ್ದಾರಿಯನ್ನು ಹೊರಲೇ ಇಲ್ಲ. ಹೀಗಾಗಿ ದಲಿತ ಲೇಖಕರ ಆತ್ಮಚರಿತೆಗಳು ಲೇವಡಿ, ಹಾಸ್ಯ, ವೈಭವೀಕರಣದಿಂದಲೇ ತುಂಬಿತುಳುಕುತ್ತಿವೆ. ಗಳಿಸಿಕೊಂಡಿರುವ ಸಾಮಾಜಿಕ ಸ್ಥಾನಮಾನಗಳು ಗತವನ್ನು ಕೆದುಕುವುದರಿಂದ ಎಲ್ಲಿ ಕಳೆದು ಹೋಗುತ್ತವೋ ಎಂಬ ಒಂದು ಭಯ, ಎಚ್ಚರಿಕೆಯಿಂದಲೇ ಬರೆದವುಗಳಾಗಿವೆ. ಗಂಡಸರೇ ಹೀಗೆ ಬರೆದಿರಬೇಕಾದರೆ ಹೆಂಗಸರ ಬಗ್ಗೆಯಂತೂ ಹೇಳಲು ಆಗದು.

ಲೇಖ-ಲೋಕದಲ್ಲಿಯ ಆತ್ಮಕಥಾನಕದ ಈ ಕಿರುರೂಪಗಳಲ್ಲಿ ಸಾಮಾಜಿಕ ಸ್ಥಿತ್ಯಂತರಗಳಿಗೆ ಕಾರಣವಾಗಬಹುದಾದ ಬದುಕಿನ ತುಣುಕುಗಳು ಒಂದು ಕಾಣದೆ ಇರುವುದು ನಿರಾಶೆಯ ಸಂಗತಿ. ಹಿರಿಕಿರಿಯರೆಲ್ಲ ಇದರ ವ್ಯಾಪ್ತಿಯಲ್ಲಿ ಬಂದಿರುವ ಲೇಖಕಿಯರೆಲ್ಲ ಹೆಚ್ಚು ಕಡಿಮೆ ಬ್ರಾಹ್ಮಣ ಕುಟುಂಬದ ಸುಶಿಕ್ಷಿತ, ಪಂಡಿತ ವಾತಾವರಣದಿಂದ ಬಂದವರೆ ಆಗಿರುವರು. ಒಂದಿಬ್ಬರು ಮಧ್ಯಮ ಜಾತಿಯಿಂದ ಇನ್ನು

ಬಿ.ಟಿ.ಲಲಿತಾನಾಯಕರಂಥವರು, ಸಾರಾಅಬೂಬಕರಂಥವರು ಅನ್ಯಧರ್ಮ, ದಲಿತ ಲೋಕದಿಂದ ಬಂದವರಾಗಿದ್ದರೂ ವರ್ಗ ಮೂಲದಲ್ಲಿಗೆ ಗಟ್ಟಿತನದಿಂದ ಪಡೆದುಕೊಂಡ ಸಾಮಾಜಿಕ ಸ್ಥಾನಮಾನಗಳ ಬಲದಿಂದ ಬೆಂಕಿಯ ಬದುಕಿನಿಂದ ದೂರವಿದ್ದವರು. ಇವರೆಲ್ಲ ಆರ್ಥಿಕ ಭದ್ರತೆ, ಜಾತಿಯ ಶ್ರೇಷ್ಠತೆ, ಸಾಹಿತ್ಯ ಸಂಗೀತಾದಿಗಳ ಒಡನಾಟವಿರುವ ಕುಟುಂಬ ಪರಿಸರದಿಂದ ಬಂದಿರುವ ಕಾರಣ ಒಂದು ಸಿದ್ಧ ಚೌಕಟ್ಟಿನಲ್ಲಿ ತಮ್ಮ ಬದುಕು ಭಾಗ್ಯಗಳನ್ನು ಹೊಂದಿಸಿಕೊಂಡು ಹೇಳಿರುವ ಇವರೆಲ್ಲರ ಪ್ರಾಮಾಣಿಕತೆಯ ಬಗ್ಗೆಯೇ ಗುಮಾನಿ ಓದುವ ವರ್ಗದಲ್ಲಿ ಕಾಣಿಸಿಕೊಂಡರೆ ಆಶ್ಚರ್ಯ ಪಡಬೇಕಾಗಿಲ್ಲ. ನಮ್ಮ ಜನಪ್ರಿಯ ಕಥೆ ಕಾದಂಬರಿಯ ಒಂದು ಅಧ್ಯಾಯದಂತೆ ಇರುವ ಇವರ ಬದುಕಿನ ಹರಿವು, ಆಳ, ಎತ್ತರ, ಬಿತ್ತರಗಳ ಬಗ್ಗೆನೇ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಇಷ್ಟೊಂದು ಸಣ್ಣ ಲೋಕದಲ್ಲಿ ಬ್ರಹ್ಮಾಂಡ ಕಂಡ ಸುಖದಲ್ಲಿರುವ ಧನ್ಯತೆಯ ಬಗ್ಗೆ ಮರುಚಿಂತನೆ ನಡೆಯಬೇಕು. ಬರಹವೊಂದು ಹೊತ್ತು ಕೊಲ್ಲುವ ಸಾಧನವೆಂಬ ಅಭಿಪ್ರಾಯ ಈ ಲೋಕದಲ್ಲಿ ಗಟ್ಟಿಕೊಂಡಿರುವುದರಿಂದ ಇವರಿಂದ ಹೊರಬಂದ ಸಾಹಿತ್ಯ ಎಷ್ಟರ ಮಟ್ಟಿಗೆ ಅನನ್ಯತೆ, ಸಾಮಾಜಿಕತೆ, ಚಾರಿತ್ರಿಕತೆಯನ್ನು ಹೊತ್ತಿರಲು ಸಾಧ್ಯ. ಉಷಾ ಅವರು ಹೇಳಿಕೊಂಡು ಹೋಗಿರುವ ರೀತಿ ನೋಡಿದರೆ ಭಾರತದಲ್ಲಿ ಇಂತಹ ಸರಳ, ಸಹಜ, ನೆಮ್ಮದಿಯ ಬದುಕು ಇದೆಯೇ ಎನ್ನುವ ಆಶ್ಚರ್ಯ. ಈ ಎಲ್ಲ ಲೇಖಕಿಯರ ಬರಹವನ್ನು ಗಮನಿಸಿದರೆ ಅಜ್ಜಿ ಹೇಳುವ ಜನಪದ ಕಥೆಗಳು ನೆನಪಿಗೆ ಬರುತ್ತವೆ. ಇಂತಹ ಬರಹಗಳು ಸತ್ಯದ ಅನುಸಂಧಾನಕ್ಕಾಗಲಿ, ಸಮಾಜ, ಕುಟುಂಬ ಮೂಲದಲ್ಲಿ ಸೃಜನಶೀಲ ಮನಸ್ಸುಗಳು ನಡೆಸಿದ ಅನ್ವೇಷಣದ ಸಂದರ್ಭದಲ್ಲಿಯ ಬಿಕ್ಕಟ್ಟುಗಳು, ಆತಂಕ, ತಲ್ಲಣ, ಸಂಘರ್ಷದ ಬಿಸಿ, ಕಾವು ಕಿಡಿಗಳಾವವು ಇಲ್ಲದೆ ಕರುಣಾಳು ಬಾ ಬೆಳಕೆ ಕೈಹಿಡಿದು ನಡೆಸು ಎನ್ನುತ್ತ ತಂದೆ, ಗಂಡ, ಅಜ್ಜ ಅಜ್ಜಿ ತಾಯಿಯಾದಿಯಾಗಿ ಎಲ್ಲರು ಕರುಣಾಳುಗಳು ಈ ಕರುಣಾಳುಗಳ ಕೈಹಿಡಿದು ಎಡವದೆ ಮುಗ್ಗರಿಸದೆ ಬದುಕಿನ ಹಾದಿಯನ್ನು ಸವೆಸಿದವರಂತೆ ಬರೆದುಕೊಂಡಿರುವರು. ಇವರು ಹೇಳಿದ್ದು ಸುಳ್ಳು ಎಂದು ಹೇಳಲು ಆಗದು. ಇಂತಹ ನೆಮ್ಮದಿಯ, ಸುಖದ ಜೋಮುಗಟ್ಟಿದ ಮನಸ್ಸುಗಳಲ್ಲಿ ಒಡಮೂಡಿದ ವಸ್ತು ವಿಷಯಗಳು, ಪಾತ್ರ, ಘಟನೆ, ಅನಾಹುತಗಳು, ಆತ್ಮಹತ್ಯೆಗಳು, ಅನ್ಯಾಯ, ಪ್ರತಿಭಟನೆ ಸಿಟ್ಟು ಸೆಡವುಗಳು ಎಲ್ಲಿಂದ ಬಂದವುಗಳು. ನೋಡಿದ, ಕೇಳಿದ, ಪರಕಾಯ ಪ್ರವೇಶದ ಸಿದ್ಧಿಸಾಧನೆಯಿಂದ ದಕ್ಕಿದ ಸಂಗತಿಗಳು ಎಂದು ಹೇಳಿದರೆ ವಿಮರ್ಶೆಯ ಒರೆಗಲ್ಲಿಗೆ ಈ ಎಲ್ಲ ಸಾಹಿತ್ಯ ತಿಕ್ಕಲ್ಪಟ್ಟ ರೀತಿಯ ಬಗ್ಗೆ ಮತ್ತೆ ಆಲೋಚಿಸುವಂತಾಗುತ್ತದೆ.

ಮಲ್ಲಿಕಾರಂಥವರು ಸ್ವಾತಂತ್ರ್ಯ ಪೂರ್ವದಲ್ಲಿ ಹುಟ್ಟಿ ಬೆಳೆದವರು. ಶ್ರೀಮಂತವರ್ಗ ಬ್ರಿಟಿಷ್ ಆಡಳಿತಕ್ಕೆ ಒತ್ತಾಸೆಯಾಗಿದ್ದವು ಎನ್ನುವ ಕಾರಣಕ್ಕೆ ಸ್ವಾತಂತ್ರ್ಯ ಹೋರಾಟದ ಬಿಸಿ, ತಲ್ಲಣ, ತಳಮಳಗಳು ಇವರನ್ನು ಕಾಡಿದಂತಿಲ್ಲ. ಭಾರತೀಯ ಹೆಣ್ಣಿನಲ್ಲಿ ಒಂದು ಮನೋಭಾವವನ್ನು ನಿಚ್ಚಳವಾಗಿ ಕಾಣಬಹುದು. ಅದು ಯಾವ ವರ್ಗ, ಕಾಲ,

ಜಾತಿಯೆಂದು ಒಡೆದುಕೊಳ್ಳದೆ ಇಡಿಯಾಗಿ ಎಲ್ಲ ಮಹಿಳೆಯರಲ್ಲಿ ಕಾವುಕುಳಿತಿರುವುದನ್ನು ಗಮನಿಸಬೇಕಾಗಿದೆ. ತವರು ಮನೆಯ ಬಗ್ಗೆ ಸಂಭ್ರಮದಿಂದ ಹೇಳಿಕೊಳ್ಳುವ 'ಕರಕಿಯ ಕುಡಿಯಂಗ ಹಬ್ಬಲಿ ತವರಮನೆ'. ತಂಪು ಹೊತ್ತಿನಲ್ಲಿ ನೆನೆಯುವ ತವರಿನಲ್ಲಿಯೇ ಹೆಣ್ಣು ಕೊಡುವ ಹೆಣ್ಣಾಗಿ ಅನುಭವಿಸಿದ, ಹೆಣ್ಣು ಹುಟ್ಟಿತೆಂದು ತೆಗಳಿಕೆಯಿಂದಲೇ ಜಗವ ನೋಡುವ ಹೆಣ್ಣುಗಳು ತವರು ಮನೆಯ ಬಗ್ಗೆ ವ್ಯವಸ್ಥೆಯ ಯಥಾಸ್ಥಿತಿವಾದವನ್ನು ಮುಂದುವರಿಸಿಕೊಂಡು ಹೋಗುವ ಮಂಗಳಗೀತೆಯನ್ನು ದನಿವರಿಯದೆ ಹಾಡುವ ಹೆಣ್ಣಿನ ಬುದ್ಧಿಗೆ ಭಾವಕ್ಕೆ ಮೋಹಮಮಕಾರದ ಲೇಪವಿದೆ. ಹೀಗಾಗಿಯೇ ಇಲ್ಲಿಯ ಎಲ್ಲ ಲೇಖಕಿಯರ ತಂದೆ, ಅಜ್ಜ, ಅಣ್ಣತಮ್ಮಂದಿರು ಅಪ್ಪಿತಪ್ಪಿಯು ಯಯಾತಿಯಂತೆ ಕಾಣಿಸಿಕೊಳ್ಳುವುದಿಲ್ಲ. ಕುಟುಂಬ ಮೂಲದಲ್ಲಿ ಯಜಮಾನ ಸಂಸ್ಕೃತಿಯ ಕ್ರೌರ್ಯ, ದಬ್ಬಾಳಿಕೆಗಳು ಬಿಚ್ಚಿಕೊಳ್ಳುವ ಸತ್ಯವನ್ನು ಈ ಲೇಖಕಿಯರು ಮರೆತಂತೆ ಕಾಣುವರು. ಮೂವತ್ತು ವರ್ಷಗಳ ಹಿಂದೆ ಅನ್ಯ ಜಾತಿಯ ಹುಡುಗನನ್ನು ಮದುವೆಯಾಗುವ ಮಗಳನ್ನು ಪ್ರೀತಿಯಿಂದ ನೋಡುವ ತಾಳ್ಮೆ ಕರ್ಮ. ಬ್ರಾಹ್ಮಣ ಲೋಕದಲ್ಲಿತ್ತು ಎನ್ನುವುದನ್ನೇ ನಂಬಲಾಗುತ್ತಿಲ್ಲ. ಅಥವಾ ಬ್ರಾಹ್ಮಣ ಹುಡುಗಿಯರು ಅನ್ಯಜಾತಿಯ ಗಂಡುಗಳನ್ನು ಅದರಲ್ಲಿಯು ಅಧಿಕಾರಸ್ಥ ಗಂಡುಗಳನ್ನು ಮದುವೆಯಾಗುವುದನ್ನು ಮೌನವಾಗಿಯೇ ಸ್ವೀಕರಿಸುವುದರ ಹಿಂದೆ ವ್ಯವಹಾರಿಕತೆ ಕೆಲಸ ಮಾಡಿದೆ ಎನ್ನಬಹುದು. ಆದರೆ ಬ್ರಾಹ್ಮಣ ಹುಡುಗ ಅನ್ಯಜಾತಿಯ ಹುಡುಗಿಯನ್ನು ಮದುವೆಯಾಗುವ ಸಂದರ್ಭದಲ್ಲಿ ಈ ಉಧಾರತೆ ಉಳಿದಿಲ್ಲ. ಬ್ರಾಹ್ಮಣ ಗಂಡಸಿನಲ್ಲಿ, ಕುಟುಂಬದಲ್ಲಿ ಅದು ಇರಬಹುದು. ಆದರೆ ಶೂದ್ರ ಕುಟುಂಬದಲ್ಲಿ ಅದು ತನ್ನೆಲ್ಲ ಕರಾಮತ್ತನ್ನು ತೋರಿಸಿದೆ.

ಶಶಿಕಲಾ ವೀರಯ್ಯಸ್ವಾಮಿ ಮಾತ್ರ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಹೆಣ್ಣು ಅನುಭವಿಸುವ ಕುಟುಂಬನೆಲೆಯ ಯಾತನೆಗಳನ್ನು ಬಿಚ್ಚಿಟ್ಟಿರುವರು. ಇಂತಹ ಬಿಚ್ಚು ಮನಸ್ಸಿನ ಹೇಳಿಕೆಗಳನ್ನು ಅರಗಿಸಿಕೊಳ್ಳುವ ತಾಕತ್ತು ವ್ಯಕ್ತಿ, ಸಮಾಜದಲ್ಲಿ ಮನೆಮಾಡಿ ಕೊಂಡಿದೆ. ಅದು ಅಕ್ಷರಸ್ಥ ಲೋಕವಿರಬಹುದು ಅನಕ್ಷರಸ್ಥ ಲೋಕವಿರಬಹುದು. ಶೋಷಣೆಯೆಂಬುದು ಸಾಮಾಜಿಕ ಮೌಲ್ಯವಾಗಿದೆ. ಬದುಕಿನಲ್ಲಿ ಹೆಣ್ಣಿನ ಆಯ್ಕೆ ಎಂಬುದು ಸರಿಯಾಗಿ ಆಗದೆ ಇದ್ದಾಗ ಕಳೆದುಕೊಳ್ಳುವುದೆಲ್ಲ ಹೆಣ್ಣೆ ಹೊರತು ಗಂಡಸಾದವನಲ್ಲ. ಗಂಡಸು ತಾನು ಕಟ್ಟಿದ ಕುಟುಂಬದೊಳಗೆ ನಿರಂತರವಾಗಿ ಸುರಕ್ಷಿತವಾಗಿಯೇ ಉಳಿಯುತ್ತಾನೆ. ಬಹುಪತ್ನಿತ್ವದ ಸುಖಭೋಗಗಳನ್ನು ಗಂಡಸಾದವನು ಸಾಮಾಜಿಕ ಗೌರವಾದರಗಳೊಂದಿಗೆ ತನ್ನ ರಕ್ಷಣೆಯನ್ನು ಕಾಯ್ದುಕೊಂಡೆ ಅನುಭವಿಸುತ್ತಾನೆ. ಆದರೆ ಅದೇ ಹೆಣ್ಣಾದವಳು ಆರ್ಥಿಕ ಭದ್ರತೆ, ಬೌದ್ಧಿಕ, ಮಾನಸಿಕ ಪ್ರಬಲತೆಯನ್ನೆಲ್ಲ ಇಟ್ಟುಕೊಂಡು ಗಂಡಸಿನ ಸಹಚರ್ಯಕ್ಕಾಗಿ ನಿರಂತರ ಹಂಬಲಿಸಬೇಕಾಗುತ್ತದೆ. ಸಾಂತ್ವನ ನೀಡುವ ಗಂಡುಗಳು, ಒಂಟಿತನ ನೀಗುವ ವಯಸ್ಸಿನಂಥವರು ಇಂತಹ ಹೆಣ್ಣುಗಳಿಗೆ

ಬಾಳುಕೊಡುವ ದೊರೆಗಳಾಗುತ್ತಾರೆ ವಿನಹ ಹಂಚಿಕೊಳ್ಳುವ ಉದಾರಿಗಳಾಗುವುದಿಲ್ಲ. ಒಂಟಿತನ, ಅನಾಥತೆಯಿಂದ ಬದುಕಿನಲ್ಲಿ ಬಸವಳಿದ ಹೃದಯಕ್ಕೆ ಆಧುನಿಕ ಕಾಲದಲ್ಲಿ ಮದ್ದು ಸಿಕ್ಕಿಲ್ಲ. ಎತ್ತಿ ಆಡಿಸಿದ ತಂಗಿ ತಮ್ಮಂದಿರ ನೆಮ್ಮದಿಯ ಕುಟುಂಬದಲ್ಲಿ ಕಳೆದುಕೊಂಡವಳ ನೆನಪು ಉಳಿಯುವುದಿಲ್ಲ. ತ್ಯಾಗಕ್ಕಾಗಿಯೇ ಹೆಣ್ಣು ಹುಟ್ಟಿರುವುದರಿಂದ ಅದನ್ನು ಸಾಯುವವರೆಗೂ ಮಾಡುತ್ತಲೇ ಇರಬೇಕಾಗುತ್ತದೆ. ಲೋಕದ ಗಂಡರ ಕಾಟದಿಂದ ಮುಕ್ತಿಹೊಂದಲು ಕಾಣದ ಮಲ್ಲಿಕಾರ್ಜುನನ್ನು ಎಳೆದು ತರುವ ಭ್ರಮಾತ್ಮಕತೆಯು ಆಧುನಿಕ ಕಾಲದ ಆಕ್ಷರದ ಅರಿವಿನ ಮಹಿಳೆಯರಿಗೆ ದಕ್ಕದ ಸಂಗತಿ. ಗಂಡ, ಪ್ರೀತಿ, ಕುಟುಂಬ, ಮಕ್ಕಳೆಂದು ಹಲುಬುವ ಹಲವು ಮನಸ್ಸುಗಳು ಮುಕ್ತವಾಗಿ ಬಿಚ್ಚಿಕೊಳ್ಳುವುದು ಅಗಿಲ್ಲ. ಬಿಚ್ಚಿಕೊಂಡರೆ ಮಕ್ಕಳ ಭವಿಷ್ಯದ ಭಯ. ಹೀಗಾಗಿ ಸೀತೆಯಂತೆ ಲವಕುಶರ ಮೂಲಕ ಹುಟ್ಟಿಸಿದವನ ಮುಂದೆ ಕಥೆ ಹೇಳಿ ಮನ ಒಲಿಸಿಕೊಳ್ಳುವ ಹಾದಿಯ ಹುಡುಕಾಟದ ಸಂಕೀರ್ಣತೆಯಲ್ಲಿ, ಜೇಡರ ಬಲೆಯಲ್ಲಿ ಸಿಲುಕಿದ ಹುಳುವಿನ ಹಾಗೇ ಒದ್ದಾಡುತ್ತಲೇ ಮರ್ಯಾದಾಪುರುಷೋತ್ತಮರ, ಕುಟುಂಬದ ನೆಮ್ಮದಿ, ಗೌರವ, ಮಾನಪಮಾನಗಳ ಲೆಕ್ಕಚಾರದಲ್ಲಿ ತೂಗಿ ತೂಗಿ ಮಾತನಾಡುವರು.

ಉತ್ತರ ಕನ್ನಡದ ಘಟ್ಟ, ಮಲೆನಾಡಿನ ಕೂಡು ಕುಟುಂಬದಲ್ಲಿ ಬೆಳೆದ ವೈದೇಹಿ ಕುಟುಂಬ ಪರಿಸರದಿಂದಲೇ ಸಾಹಿತ್ಯಿಕ ಒತ್ತಾಸೆಯನ್ನು ಪಡೆದುಕೊಳ್ಳುತ್ತಲೇ ಇಣಚೆಯ ಹಾಗೇ ಹೆಣ್ಣಿನ ವಿವಿಧ ಮುಖಗಳನ್ನು ಇಣುಕಿ ನೋಡುವ ಬಾಲ್ಯ ಸಹಜ ಕುತೂಹಲದಿಂದ ಮೂಡಿದ ಸಂಗತಿಗಳು ಒಂದು ಕಾಲಘಟ್ಟದ ಕೌಟುಂಬಿಕ ಸ್ಪಷ್ಟ ಚಿತ್ರಣವನ್ನು ಕೊಟ್ಟಿರುವರು. ಊಳಿಗಮಾನ್ಯ ವ್ಯವಸ್ಥೆಯ ಅವಿಭಕ್ತ ಕುಟುಂಬದೊಳಗಡೆಯ ಸಂಪ್ರದಾಯ, ನಂಬಿಕೆಗಳು ಹೇಗೆ ವ್ಯಕ್ತಿತ್ವವನ್ನು ರೂಪಿಸಬಲ್ಲವು. ಆಧುನಿಕ ಓದಿಗೆ ಹೇಗೆಲವು ಕದನಕ್ಕಿಳಿಯಬಲ್ಲವು ಎಂಬುದನ್ನು ಅವರ ಸಾಹಿತ್ಯ ಮುಖೇನ ಪಾತ್ರಗಳು ತೋರಿಸಿದ್ದಕ್ಕೆ ಮೂಲ ಅವರ ಬದುಕಿನಾಳವೆನ್ನಬಹುದು. ಬಿ.ಟಿ.ಲಲಿತಾನಾಯಕರಂಥವರು ಕೆಳಜಾತಿಯಿಂದ ಬಂದವರು. ರಾಜಕೀಯ ಪ್ರವೇಶಿಸಿದ ಪ್ರಥಮ ದಲಿತ ಮಹಿಳೆ ಕೂಡಾ ಆಗಿರಬಹುದು. ತಮ್ಮ ರಾಜಕೀಯ ಬದುಕಿನಲ್ಲಿಯ ಸಂಗತಿಗಳನ್ನು ವಾಸ್ತವದ ನೆಲೆಯಲ್ಲಿ ಬಿಚ್ಚುವ ಅವಕಾಶವಿತ್ತು. ಆದರೆ ಅದು ಆಗಿಲ್ಲ. ಇವರೆಲ್ಲರೂ ಹೇಳಿಕೊಂಡಿರುವುದನ್ನು ನೋಡಿದರೆ ನಾವು ರಾಮರಾಜ್ಯದ ಸುಖಿ ಪ್ರಜೆಗಳು ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ಹಾಡು ಅಗಲೇ ಹೆಣ್ಣನ್ನು ಬೆತ್ತಲೆಗೊಳಿಸುವ, ಲೈಂಗಿಕ ಕಿರುಕುಳ ನೀಡುವ ಗಂಡಸರು ನಾಡಿನುದ್ದಕ್ಕೂ ಪಸರಿಸಿಕೊಂಡಿರುವಾಗ ಅಂತಹ ಘಟನೆಗಳಾಗಲಿ ಅಥವಾ ಹೆಣ್ಣು ಅದರಲ್ಲಿಯು ದಲಿತ ಲೋಕದ ಹೆಣ್ಣು ಹೊರಬಂದಾಗ ಈ ಸಾಮಾಜಿಕ ಅನುಕೂಲ ಸಿಂಧೂತನವನ್ನು ರಾಜಕೀಯ, ಸಾಮಾಜಿಕ, ಸಾಹಿತ್ಯಿಕ ಕ್ಷೇತ್ರದಲ್ಲಿಯ ಯಾವ ಗಂಡಸರು ಬಳಸಿಕೊಳ್ಳಲಿಲ್ಲವೆ? ಅಥವಾ ಅಂತಹವುಗಳನ್ನು ಹೇಳುವುದು ನಾಚಿಗೆಗೆಟ್ಟ ಸಂಗತಿಯಾಗಿಸಿ ಕೈಬಿಡುವ ಒತ್ತಡಗಳೇನಾದರೂ ಇರಬಹುದೆ. ಹೊರ

ಜಗತ್ತಿನಲ್ಲಿರುವ ಸೀರೆಯುಟ್ಟ ಯಾವ ಪ್ರಾಣಿಯು ಇಂದು ಸಾಮಾಜಿಕ ಅಪಮಾನ ಲೈಂಗಿಕ ಹಿಂಸೆಯಿಂದ ಅದು ದೈಹಿಕವಾಗಿ ಆಗಬೇಕೆಂದಿಲ್ಲ. ಭಾಷೆ, ಭಾವ, ಸನ್ನೆಗಳಿಂದ ಇವರಾರು ಘಾಸಿಗೊಂಡಿಲ್ಲವೆ. ಖಾಸಗಿಯಾಗಿ ಮಾತನಾಡುವಾಗ ಬಿಚ್ಚಿಕೊಳ್ಳುವ ಹಲವು ಸತ್ಯಗಳು ಅಕ್ಷರದ ಹಲ್ಲಿಗೆ ಹೆದರಿ ಭಾವಕೋಶದಲ್ಲಿ ಹಾಗೆಯೇ ಉಳಿದಿರಬಹುದೆ.

ಹೇಮಾ, ಮಾಲತಿಯರು ಎಲ್ಲರಿಗೂ ಗೊತ್ತಿರುವ ಹಾಗೇ ಒಂದು ಗಂಡಿನ ಆಶ್ರಯಕ್ಕಾಗಿ ಸಮಾಜ ಹೇಳಿದ ಹಕ್ಕಿಗಾಗಿ ಒದ್ದಾಡಿದವರೇ. ಬಾಲ್ಯವಿವಾಹಗಳು ಬಾಳ ಪಯಣದಲ್ಲಿ ಕೈಕೊಡಬಹುದಾದ, ತುಂಡರಿಸಬಹುದಾದ ಸಂಗತಿಗಳಾಗಿ ಗಂಡುಹೆಣ್ಣಿಗೆ ಕಾಣಿಸಿಕೊಳ್ಳಬೇಕಾಗಿತ್ತು. ಆದರೆ ಪ್ರೌಢ ಮನಸ್ಸಿನ, ಆರ್ಥಿಕ ಸ್ವಾತಂತ್ರ್ಯದ ಆಯ್ಕೆ ನೆಲೆಯಿಂದ ಕಟ್ಟಲ್ಪಟ್ಟ ಕುಟುಂಬದಲ್ಲಿ ಕಾಣಿಸಿಕೊಳ್ಳುವ ಬಿರುಕುಗಳನ್ನು ಹೆಣ್ಣು ಗಂಡಿನ ದೌರ್ಬಲ್ಯವೆಂದು ಹೇಳಿ ಹಗುರವಾಗುವ ಸಂಗತಿಯಾಗಬಾರದು. ಈ ವ್ಯವಸ್ಥೆ, ಕುಟುಂಬ ಸಮಾಜದಲ್ಲಿಯೇ ಹೀಗೆ ನುಸುಳುವ ಬಿರುಕುಗಳನ್ನು ಸರಿಯಾಗಿ ಗ್ರಹಿಸಿಕೊಳ್ಳುವುದಾಗಬೇಕು ಅಂದಾಗ ಈ ತರದ ವ್ಯಕ್ತಿತ್ವ, ಕುಟುಂಬ, ಬದುಕಿನ ಬಗ್ಗೆ ಸರಿತಪ್ಪು ಎಂದು ಹೇಳಲು ಸಾಧ್ಯವಾಗಬಹುದು. ಗಂಡಿನ ಆಶ್ರಯವಿಲ್ಲದೆ ಬದುಕುವ ಶಕ್ತಿ, ಬಲ, ಅನಿವಾರ್ಯತೆಗಳು ಇದ್ದಾಗಲು ನಾವು ಸಮಾಜವನ್ನು ಹಟದಿಂದ ಒಂದು ಸಂಗತಿಯ ಕಡೆ ಒಪ್ಪಿಸಲು ಹೊರಟಿರುತ್ತೇವೆ. ಅದೇನೆಂದರೆ ನನಗೆ ಗಂಡಸಿನ ಆಶ್ರಯವಿದೆ ಅದು ಸಾಂಕೇತಿಕ ಇರಬಹುದು ನಾಮಬಲವಿರಬಹುದು. ಏನಾದರೂ ಆಗಿರಬಹುದು ಮಾನಸಿಕವಾಗಿ, ಭೌತಿಕವಾಗಿ ಅನ್ಯಾಶ್ರಯವನ್ನು ಮೀರುವ ಒತ್ತಾಸೆಗಳು ಸಮಾಜದಲ್ಲಿಯೇ ಹುಟ್ಟಿಕೊಳ್ಳಬೇಕು. ಅಂದಾಗ ಮಾತ್ರ ಹೆಣ್ಣು ಆಯ್ಕೆ, ಹಕ್ಕು ಎನ್ನುವ ವಿಧಗಳಿಗೆ ಅರ್ಥ ಹೊರಡಲು ಸಾಧ್ಯವಾಗಬಹುದು.

ಕುಟುಂಬ ಮೂಲದಲ್ಲಿಯೇ ಸಾರಾ ಅಬೂಬಕ್ಕರ್ ಅವರು ಯಾವುದೇ ಸಾಮಾಜಿಕ, ಆರ್ಥಿಕ ನೆಲೆಯ ಬಿಕ್ಕಟ್ಟುಗಳನ್ನು ಎದುರಿಸಿದಂತಿಲ್ಲ. ಮತೀಯ ಮೂಲಭೂತವಾದದ ಭಯಾನಕತೆಯಿಂದ ದೂರವಿದ್ದ ಸುರಕ್ಷಿತ ಕುಟುಂಬಕ್ಕೆ, ಸಮಾಜ ಬೇಕೆಂದಿರುವ ಆಸ್ತಿ ಅಂತಸ್ತುಗಳ ಮೂಲಕ ಯಾವ ಅಪಾಯಗಳನ್ನು ಎದುರಿಸದ ಪರಿಸರದಲ್ಲಿ ಬೆಳೆದವರು. ಅದೇ ಗಂಡನ ಮನೆಗೆ ಬಂದಾಗ ಅದರ ಬಿಸಿ ತಾಗಿದೆ. ಇಸ್ಲಾಂ ಧರ್ಮದ ಹೆಸರಿನಲ್ಲಿ ಹೆಣ್ಣೊಂದು ಅನುಭವಿಸುವ ನೋವನ್ನು ತಮ್ಮ ಕೃತಿಯಲ್ಲಿ ಕಟ್ಟಿಕೊಡುವಾಗ ವಾಸ್ತವ ಮರೆಯಾಗಿಲ್ಲ. ಮೊದಲ ತಲೆಮಾರಿನ ಮುಸ್ಲಿಂ ಬರಹಗಾರ್ತಿಯಾಗಿರುವ ಸಾರಾ ಅವರಿಗೆ ಸಾಮಾಜಿಕ, ಸಾಹಿತ್ಯಿಕವಾಗಿ ದೊರೆತಿರಬಹುದಾದ ಅನುಭವಗಳ ಅನಾವರಣ ಇನ್ನು ಆಗಬೇಕಾಗಿತ್ತು.

ಸಂಧ್ಯಾರೆಡ್ಡಿಯವರ ಬಾಲ್ಯದ ಪರಿಸರ ಎಲ್ಲ ಲೇಖಕಿಯರ ಹಾಗೇ ಇದೆ. ಆದರೆ ಮದುವೆ, ಪ್ರೀತಿಯಂತ ವಿಷಯದ ಬಗ್ಗೆ ಮಾಡಿದ ವ್ಯಾಖ್ಯಾನದ ಬಗ್ಗೆ ಕುತೂಹಲ

ಹುಟ್ಟುವುದು ಸಹಜ. ಚಿತ್ರನಟಿ ರೇಖಾ ಮದುವೆ ಆಗದೆ ಮಗುಬೇಕು ಎಂದು ಮೊಟ್ಟ ಮೊದಲಿಗೆ ಹೇಳಿದಾಗ ಈ ಸಮಾಜ ತಲ್ಲಣಿಸಿದ ರೀತಿ ನಮಗಿನ್ನು ನೆನಪಿದೆ. ನಂತರ ಅದನ್ನು ಆಗುಮಾಡಿಕೊಂಡವರು ಇರುವರು ಅದು ಬೇರೆ ಮಾತು. ಅಂತಹ ನಿರ್ಭಿಡೆಯ ಮಾತುಗಳು ಕುಟುಂಬ ಮೂಲದಲ್ಲಿ ಹೇಗೆ ಅರ್ಥೈಸಲ್ಪಟ್ಟವು. ನಾವು ಹಾಕಿಕೊಂಡಿರುವ ಮರ್ಯಾದೆಯ ಪರದೆ ಹೇಗೆ ಹಾರಾಡಿರಬಹುದು ಎಂಬುದನ್ನು ಹೇಳಬೇಕಾಗಿತ್ತು ಎಂಬುದು ಸಾಮಾಜಿಕ ಅಧ್ಯಯನದ ನೆಲೆಯಿಂದ ಬಯಸುವಂತಹದ್ದೆ ವಿನಹ ಕೆಟ್ಟ ಕುತೂಹಲದಿಂದ ಅಲ್ಲ.

ಎಚ್.ಎಲ್. ಪುಷ್ಪನಂಥವರು ಅಂತರಜಾತಿ ಮದುವೆ ಆದವರು ಅದು ಬಂಡಾಯದ ಆದರ್ಶಗಳ ಹೂಮಳೆಯಲ್ಲಿ ಅಂತವರು ವಾಸ್ತವದ ಕಟುನಿತ್ಯಗಳನ್ನು ಬಿಚ್ಚಿಡುವುದರಲ್ಲಿ ತೋರಿದ ಹಿಂಜರಿಕೆಯ ಕಾರಣಗಳು, ಒತ್ತಡಗಳ ಬಗ್ಗೆ ಆಲೋಚಿಸುವಂತಾಗುವುದು. ಬಡತನ, ಅಸಹಾಯಕತೆ, ಜಾತಿ ಕಾರಣದಿಂದ ಕಳೆದುಕೊಳ್ಳುವ ಸಂಬಂಧಗಳು ಪಡೆದುಕೊಳ್ಳುವ ಹೊಸ ಲೋಕದ ದಿಗ್‌ಭ್ರಮೆಗಳು ಈ ಯಾವುದನ್ನು ನಾವು ವ್ಯಕ್ತಿಯಾಗಿ ಹೇಳಬೇಕಾದ ಜರೂರತ್ತು ಇಲ್ಲ. ಆದರೆ ಸಮಾಜ ಒಂದರ ಭಾಗವಾಗಿ ಹೇಳಿಕೊಳ್ಳುವ ತುರ್ತಿದೆ ಎಂಬುದನ್ನು ಆತ್ಮಚರಿತೆ ಬರೆಯುವವರು ಅರಿಯಬೇಕಾಗಿದೆ. ನೇಮಿಚಂದ್ರ ಈ ನೆಲೆಯಲ್ಲಿ ಸತ್ಯಕ್ಕೆ ಮುಖಾಮುಖಿಯಾಗಿರುವಳು.

ಶೈಲಜಾ ಉಡಚಣರಂಥವರು ಕೂಡಾ ಸುಖದ ಹಾಲುಹಳ್ಳದ ಹೊಳೆ ಹರಿದ ಬಗ್ಗೆನೇ ಹೇಳಿರುವರು. ಹೆಣ್ಣು ಅನ್ನುವ ಕಾರಣಕ್ಕಾಗಿ ಈ ಮೊದಲ ಬ್ರಾಹ್ಮಣೇತರ ಅಕ್ಷರಸ್ಥ, ಉದ್ಯೋಗಸ್ಥ ಮಹಿಳೆಯರು ಕುಟುಂಬ ಸಮಾಜದೊಳಗೆಲ್ಲ ಹಿಂಡಿಹಿಪ್ಪೆಯಾದವರೆ. ಆದರೆ ತಿರುಗಿ ನಿಂತು ನೋಡುವಾಗಲೆಲ್ಲ ಹಸಿರೇ ಹಸಿರಾಗಿದೆ. ಇಂದಿಗೂ ಉದ್ಯೋಗದ ನೆಲೆಯಲ್ಲಿ ಪರೋಕ್ಷ, ಅಪರೋಕ್ಷವಾಗಿ ಸಹೋದ್ಯೋಗಿ ಗಂಡಸರಿಂದ ಅನುಭವಿಸುವ ನೋವುಗಳ ಸರಮಾಲೆ ಹಾಗೇನೆ ಇದೆ. ಇಂತಹ ಸೂಕ್ಷ್ಮ ಸಂಗತಿಗಳನ್ನು ಬಿಚ್ಚಿ ಹೇಳುವುದರಿಂದ ಎಳೆಯ ತಲೆಮಾರಿನ ಹೆಣ್ಣಿಗೆ ಮಾನಸಿಕ ಸ್ಥೈರ್ಯ ಸಿಗಬಹುದು. ಆ ಕಾರಣಕ್ಕಾಗಿ ನಾವು ವ್ಯಕ್ತಿಗಳಾಗದೆ ಸಾಮಾಜಿಕ ಭಾಗವಾಗಬೇಕಾಗಿದೆ.

ಕಟಕಟೆಯಲ್ಲಿ ನಿಂತು ಗರತಿಗಂಗವ್ವನ ಮುಟ್ಟಿ ಸತ್ಯ ಹೇಳಲು ಹೊರಟಿರುವ ಎಲ್ಲ ಹಿರಿಕಿರಿ ಲೇಖಕಿಯರು ಸುಖಾಂತ ಕುಟುಂಬಗಳನ್ನು ಅಕ್ಷರದ ಹಲ್ಲಿಗೆ ಹಾಕಿ ನುರಿಸುವಾಗ ಜಗತ್ತಿಗೆ ನೀಡಿದ್ದು ಹಾಲು ಜೇನಿನ ಸಮ್ಮುದ್ಧ ಹೊಳೆ. ಈ ಸಮೃದ್ಧ ಹೊಳೆಯ ಒಳಗಿರುವ ತಿಮಿಂಗಲುಗಳು ಜಗತ್ತು ಕಂಡಿರುವ ಸತ್ಯವಾಗಿರುವುದರಿಂದ ಅವುಗಳನ್ನೇಕೆ ಬಡಿದೆಬ್ಬಿಸಬೇಕೆಂಬ ಎಚ್ಚರವಿಲ್ಲಿದೆ.

ಕರ್ನಾಟಕ ಲೇಖಕಿಯರ ಸಂಘವು ಮಹಿಳಾ ಸಾಹಿತ್ಯ ಚರಿತ್ರೆಯ ಪುನಾರಚನೆ ಹಾಗೂ ಮೌಲ್ಯಮಾಪನಗಳನ್ನು ಸ್ತ್ರೀಪರ ದೃಷ್ಟಿಯಿಂದ ಮಾಡಬೇಕೆಂಬ ಯೋಜನೆಯನ್ನು ರೂಪಿಸಿದ ಮೌಲಿಕೆಯಲ್ಲಿ 'ಕಲ್ಯಾಣ ಸರಸ್ವತಿ' ಎಂಬ ಕೃತಿಯನ್ನು ಹೊರತಂದಿದೆ. ದಿವಂಗತ ಆರ್. ಕಲ್ಯಾಣಮ್ಮನವರ ಬದುಕು ಬರಹಗಳನ್ನು ಸಂಕಲಿಸಿ ಸಂಪಾದಿಸಿದವರು ಡಾ. ಬಿ.ಎನ್. ಸುಮಿತ್ರಬಾಯಿಯವರು. ಈ ಕೃತಿಯಲ್ಲಿನ 'ಕಪ್ಪಲ್ಲ-ಕಬ್ಬು' ಎಂಬ ನಾಟಕವನ್ನು ಇಲ್ಲಿ ಕೊಡಲಾಗಿದೆ. ಮಹಿಳಾ ಸಾಹಿತ್ಯದಲ್ಲಿ ಸಾಕಷ್ಟು ಆಶಾದಾಯಕವಾದ, ಮಹತ್ವಾಕಾಂಕ್ಷೆಯ ಪ್ರಯೋಗಗಳು ನಡೆದಿವೆ ಎಂಬುದರ ನಿದರ್ಶನವಾಗಿ ಈ ನಾಟಕವನ್ನು ನೋಡಬಹುದು. ವಸ್ತು, ಭಾಷೆ, ತಂತ್ರಗಳಲ್ಲಿ ಪದೇ ಪದೇ ಕೈಲಾಸಂರವರನ್ನು ಈ ನಾಟಕ ನೆನಪಿಸುತ್ತದೆ. ಆದರೆ, ಕಲ್ಯಾಣಮ್ಮನವರನ್ನು ನಾಟಕಕಾರ್ತಿ ಎಂದೇನೂ ಕನ್ನಡ ಸಾಹಿತ್ಯ ಚರಿತ್ರೆ ಗುರುತಿಸಿಲ್ಲ. ಇದರ ಹಿಂದೆ ಇರುವ ರಾಜಕಾರಣ ಅದಾವುದು? ಮಹಿಳಾ ಸಾಹಿತ್ಯ ಚರಿತ್ರೆಯನ್ನು ಪ್ರತ್ಯೇಕವಾಗಿ ಕಟ್ಟುವ ಕ್ರಮ ಅಷ್ಟೇನೂ ಸರಿಯಲ್ಲ ಎಂದು ವಾದಿಸುವವರು ಈ ರಾಜಕಾರಣವನ್ನು ಎದುರಿಸಲು ಹೇಳುವ ಪರ್ಯಾಯ ದಾರಿ ಯಾವುದು? ಇಂಥಾ ಮೂಲಭೂತ ಪ್ರಶ್ನೆಗಳನ್ನು ಎತ್ತಿಕೊಳ್ಳಲು ಈ ನಾಟಕ ಕಾರಣವಾಗಬಹುದು.

ಸಂ

## ಕಪ್ಪಲ್ಲ-ಕಬ್ಬು

**ಈ ದೃಶ್ಯದಲ್ಲಿ ಬರತಕ್ಕ ಪಾತ್ರಗಳು**

| | |
|---|---|
| ಸೀತಾರಾಮಯ್ಯನವರು | - ನ್ಯಾಯಾಧೀಶ ಪದವಿಯಿಂದ ತಾವೇ ನಿವೃತ್ತಿಹೊಂದಿದ ಜಡ್ಜಿ |
| ಅನಂತಮೂರ್ತಿ | - ಅವರ ಮಗ |
| ಕೃಷ್ಣಮೂರ್ತಿ | - ಡಾಕ್ಟರ್ (ಜಡ್ಜಿಗಳ ಆಪ್ತ ಮಿತ್ರರು) |
| ಸರೋಜ | - ಅನಂತಮೂರ್ತಿಯ ಹೆಂಡತಿ |
| ವೆಂಕಕ್ಕ | - ಸೀತಾಬಾಯಿಯ ಸ್ನೇಹಿತೆ |
| ಗುರು, ಶಾಸ್ತ್ರಿ | - ಅನಂತನ ಮಿತ್ರರು |
| ಲಿಲ್ಲೀ | - ಸರೋಜಳ ಮಿತ್ರಳು |

## ದೃಶ್ಯ ೧

(ಸುಂದರವಾದ ಆಧುನಿಕ ರೀತಿಯಲ್ಲಿ ಅಲಂಕೃತವಾದ ಕೊಠಡಿ ಮಧ್ಯದಲ್ಲಿ ದುಂಡು ಮೇಜೊಂದು-ಸುತ್ತಲೂ ಕುರ್ಚಿಗಳು ಅರ್ಧ ಚಂದ್ರಾಕಾರವಾಗಿವೆ-ಬಟ್ಟೆ ನೇತುಹಾಕುವ ನಿಲ್ದಾಣ(stand) ಮೊಳೆಪಟ್ಟಿ(ಹ್ಯಾಂಗರ್) ಇತ್ಯಾದಿ. ಕೆಲವು ಸಿನಿಮಾ ನಟಿಯರ ಹಾಗೂ ನಟರ ಚಿತ್ರಗಳು, ಮಧ್ಯದ ಕುರ್ಚಿಯಲ್ಲಿ ಅನಂತನು ಕುಳಿತಿರುವನು. ಉಡಿಗೆ-ಪೈಜಾಮ, ಒಂದು ಜುಬ್ಬ. ಪಕ್ಕದಲ್ಲಿ ಅವನ ಆಪ್ತ ಮಿತ್ರರಾದ ಗುರುದತ್ ಮತ್ತು ಸುಬ್ರಹ್ಮಣ್ಯ ಶಾಸ್ತ್ರಿ ಕುಳಿತಿರುವರು. ಗುರುದತ್ತನು ಅಧುನಿಕ ರೀತಿಯ ಉಡುಪಿನಲ್ಲೂ, ಸುಬ್ರಹ್ಮಣ್ಯನು ಪ್ರಾಚೀನ ಸಂಪ್ರದಾಯದಂತೆ ಉಡುಪು ಧರಿಸಿರುವನು. ಒಂದು ಪಂಚೆ-ಒಂದು ಷರಟು-ಕಿವಿಗೆ ಕುಡುಕು- ಗಂಟಿಕ್ಕುವ ಗೋಪಾದದಷ್ಟು ತಲೆಕೂದಲು-ಹಣೆಗೆ ವಿಭೂತಿ. ಅನಂತನು ಯೋಚನಾಮಗ್ನನಾಗಿರುವನು)

**ಗುರು :** ನ್ಯಾಯ, ಅನಂತು, ಏನೋ, ತಂದೆ ಮಾತಿಗೆ ಕಟ್ಟುಬಿದ್ದು ಮದುವೆಯಾದ ಮಾತ್ರಕ್ಕೆ ಒಪ್ಪಿಗೆ ಇಲ್ಲದ ಹೆಣ್ಣಿನೊಡನೆ ಬಾಳುವುದು ಅತಿ ಕಷ್ಟ.

**ಶಾಸ್ತ್ರಿ :** ನೋಡು, ಗುರು ಇದೆಲ್ಲ ಅನ್ಯಾಯದ ಮಾತು. ಅಲ್ಲವಯ್ಯಾ, ತಂದೆ ಎಂಬ ವಸ್ತುವು ಅಷ್ಟು ದೊಡ್ಡದೆಂದು ಬಗೆದು ಒಪ್ಪಿ ಮದುವೆಯಾದವನು ಅದೇ ತಂದೆಯ ಮಾತಿನಂತೆ ತಾನೇ ೩೩ಕೋಟಿ ದೇವತೆಗಳ ಮುಂದೆ ಅಗ್ನಿ ಸಾಕ್ಷಿಯಾಗಿ ಕೈ ಹಿಡಿದು ಮನೆಗೆ ಬಂದ ಭಾಗ್ಯಲಕ್ಷ್ಮಿಯನ್ನು ಎಡಗಾಲಿನಲ್ಲಿ ಒದೆದರೆ ಯಾವ ದೇವರು ಮೆಚ್ಚುತ್ತಾನಯ್ಯಾ? ಒಂದು ಹೆಣ್ಣಿನ ಸೆರೆ ಬಿಡಿಸುವ ಬದಲು, ಸುಡಬಾರದು-ಉರಿಯ ಬಾರದು. ಒಳಗೇ ಬೆಂದು ಹೋಗುವಂತೆ ಕುದಿಸುವ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತವೇ ಇಲ್ಲ.

**ಗುರು :** ಬಿಡಯ್ಯಾ! ನಿನ್ನ ಪ್ರಾಯಶ್ಚಿತ್ತ. ಗೊಡ್ಡು ಪುರಾಣದ ಬುರುಡೆ ಮಾತು! ಈಗಿನ ಕಾಲದಲ್ಲಿ ಯಾರಯ್ಯಾ ಕೇಳೋದು ಅದನ್ನೆಲ್ಲಾ. ಬೇಡದ ಹೆಣ್ಣಿನಲ್ಲಿ ಪ್ರೀತಿ ಹುಟ್ಟುವ ಸಂಭವವೇ ಇಲ್ಲದ ಮೇಲೆ ಏನಯ್ಯಾ ಬಾಳುವುದು. ಅಂತರ್ಯ ಪ್ರೇಮವಿದ್ದರಲ್ಲವೇನಯ್ಯಾ ಜೀವನ ರಸಮಯವಾಗಿರುವುದು.

**ಶಾಸ್ತ್ರಿ :** ಹಾಗೆಂದ ಮೇಲೆ ಮದುವೆಯೇ ಆಗಬಾರದಿತ್ತೆಂದು ಹೇಳುತ್ತೇನೆ. 'ನಾನೊಲ್ಲೆನೆಂದರೆ, ನಮ್ಮಪ್ಪ ಯಾರಿಗೆ ಮದುವೆಮಾಡ್ಯಾನು' ಎಂಬ ಗಾದೆಯೇ ಇಲ್ಲವೇ?

**ಗುರು :** ಸರಿ! ಸರಿ! ಏನೋ ತಂದೆ ತನ್ನ ಬಾಳಿಗೆ ತಕ್ಕ ಬೆಳಕು ತರುತ್ತಾನೆಂದು ಒಪ್ಪಿದ್ದಾಯಿತು.

**ಶಾಸ್ತ್ರಿ :** ಹಾಗಾದರೆ 'ಅಪ್ಪಾ' ಈ ದೇಹ ತಂದೆ ತಾಯಿಗಳದು; ಅವರಿಂದ ಬಂದು, ಅವರಿಂದ ಪೋಷಿತವಾಗಿ, ಅವರು ಕಲಿಸಿದ ವಿದ್ಯೆಯಿಂದ ಬೆಳೆಯುವುದರಿಂದ

ಸರ್ವಸ್ವಾಮ್ಯವೂ ಅವರದೆ. ಇದರ ಮೇಲೆ ನನ್ನ ಅಧಿಕಾರವೇ ಇಲ್ಲ. ಇನ್ನು ನನ್ನ ಮನಸ್ಸು ಪಂಚೇಂದ್ರಿಯಗಳ ಅಧಿಕಾರಿ ಪರಮಾತ್ಮ-ಆತನಾಜ್ಞೆ ಮೀರಲು ಸಾಧ್ಯವೇ ಇಲ್ಲ' ಎಂಬ ದೊಡ್ಡ ವೇದಾಂತದ ಮಾತಾಡಿ ತಂದೆಗೆ ನಂಬಿಕೆ ಹುಟ್ಟಿಸಿ ಈಗ ದ್ರೋಹ ಮಾಡುವುದು ಪಾಪಕರವಲ್ಲವೋ?

**ಗುರು :** ಅದು ಸರಿಯಯ್ಯಾ! ಹೇಳಿದೆನಲ್ಲಾ; ಅವನು ಹೇಗೆ ತಂದೆಗೆ ನಂಬಿಕೆ ಹುಟ್ಟಿಸಿದನೋ ಹಾಗೆಯೇ ತಂದೆಯೂ ಹುಟ್ಟಿಸಬೇಕಾಗಿತ್ತೆಂದೇ ನನ್ನ ವಾದ. ಅಲ್ಲದೆ ಆ ಮಾತೆಲ್ಲಾ ನಿನ್ನ ಉಪದೇಶ ಪ್ರಭಾವ.

**ಶಾಸ್ತ್ರಿ :** ಅಲ್ಲವಯ್ಯಾ! ಈಗ ಆಗಿರುವ ಪ್ರಮಾದವಾದರೂ ಏನಯ್ಯಾ? ಹುಡುಗಿ ಕಪ್ಪೆಂದ ಮಾತ್ರಕ್ಕೆ ಕಳಪೆಯೇ? ಕಾಳಿದಾಸನು 'ಕುರೂಪತಾ ಶೀಲತಯಾ ವಿರಾಜತೇ' ಎಂದು ಹೇಳುತ್ತಾನೆ. ಏಕಯ್ಯಾ? ತೊಟ್ಟಿಲು ತೂಗುವಾಗ ಪದ ಹೇಳುವುದನ್ನಾದರೂ ಕೇಳಿಲ್ಲವೇ. ಈಗಿನ ಕಾಲದಲ್ಲಿ ಅವೆಲ್ಲ ಹಾಳಾಗಿ ಹೋಯ್ತೂನ್ನು. 'ರೂಪವಿದ್ದರೇನೆ ಗುಣವಿಲ್ಲ' ಎಂದೂ 'ಕಪ್ಪು ಹೆಂಡತಿಯೆಂದಸಡ್ಡೆ ಮಾಡಲಿ ಬೇಡ. ಜಂಬು ನೇರಳೆ ಹಣ್ಣು ಬಲುಕಪ್ಪು. ಆದರೆ ತಿಂದರಲ್ಲವೆ ತಾನು ಬಹಳ ರುಚಿ' ಎಂದು ಹಾಡಿಲ್ಲವೆ?

**ಗುರು :** ಲೋ, ಶಾಸ್ತ್ರಿ, ಯಾವ ಶತಮಾನದಲ್ಲಿ ಇದ್ದೀಯೋ ನೀನು?

(ನಗು)

**ಶಾಸ್ತ್ರಿ :** ಶತಮಾನವೇನಯ್ಯಾ, ಯಾವುದಾದರೆ ಏನು? ಪೂರ್ವಿಕರು ಸರ್ವತ್ಯಾಗಮಾಡಿ ತಪೋನಿರತರಾಗಿ ಆತ್ಮಸಾಕ್ಷಾತ್ಕಾರ ಮಾಡಿಕೊಂಡು. ತಾವು ಕಂಡ ಸತ್ಯದ ಬೆಳಕನ್ನೂ ಜಗತ್ತಿಗೆ ಮೀಸಲಾಗಿಟ್ಟು ತಮ್ಮ ದೇಹದ ರಕ್ತ, ಮಾಂಸ, ಎಲುಬುಗಳ ಗಾರೆ, ಇಟ್ಟಿಕೆಗಳಲ್ಲಿ ಕಟ್ಟಿದ ಧರ್ಮ ಮಂದಿರವು ಏನೇ ಆಗಲಿ ಉರುಳದೆಂದು ತಿಳಿ.

**ಗುರು :** ಸರಿ, ಸರಿ, ಅದಕ್ಕೇ ಕ್ರಿಶ್ಚಿಯಾನಿಟಿ ಇಂಸ್ಲಾಂ ಧರ್ಮಗಳೂ ಪ್ರಬಲವಾಗಿ ಬೆಳೆಯುತ್ತಿರುವುದು. ನಮ್ಮ ಧರ್ಮದ ಬೆಳಕು ಮಸಿ ಹಿಡಿದಿಲ್ಲವೆ?

**ಶಾಸ್ತ್ರಿ :** ಧರ್ಮದ ಬೆಳಕಿಗೆಂತಹದಯ್ಯಾ ಮಸಿ? ಪರಕೀಯರು ಹೊಟ್ಟೆ, ಬಟ್ಟೆಗಿಲ್ಲದಂತೆ ಮಾಡಿ ಗುಲಾಮಗಿರಿಯಲಿ ಹಿಡಿಯನ್ನವೆರಚಿ ಧರ್ಮ ಬೆಳೆಸಲೆತ್ನಿಸುವರು. ಮುಸನ್ಮಾನರು ಬಲಾತ್ಕಾರವಾಗಿ ಬಡಿದು, ಹೆದರಿಸಿ, ಮತ ಬೆಳೆಸಿದ್ದಾರೆ. ಹಿಂದೂ ಧರ್ಮವು, 'ನಿನ್ನ ಮತ ಎಷ್ಟೇ ಕೆಟ್ಟಿರಲಿ, ಅದನ್ನು ಬಿಟ್ಟು ಪರ ಧರ್ಮಕ್ಕೆ ಹಾರಿದರೆ ಮುಕ್ತಿಯೇ ಇಲ್ಲ'ವೆಂಬ ಅತ್ಯುನ್ನತ ಪರಮತ ಸಹಿಷ್ಣತೆಯುಳ್ಳದ್ದು. ತಿಳಿಯಿತೆ? ಧರ್ಮದ ತಿರುಳರಿಯದ ಈ ಕಾಲದ ಕುರುಡು ಪ್ರಪಂಚ ಕೂಪ ಕೂರ್ಮನ್ಯಾಯದಂತೆ ಮಾತಾಡುತ್ತದೆ. ಹಾಳು ದಾಸ್ಯದ ಪ್ರಾಬಲ್ಯ ಅಷ್ಟೇ.

**ಗುರು :** ಸರಿಯಯ್ಯಾ, ತಿಳಿದಂತಹ ನಿನ್ನಂತವರು ಸರಿಯಾಗಿ ಅದನ್ನು ತಿಳಿಯಪಡಿಸುವುದು ತಾನೇ?

**ಶಾಸ್ತ್ರಿ** : ತಿಳಿಯಪಡಿಸುತ್ತಿರುವೆನಲ್ಲಾ.

**ಗುರು** : ಏನೆಂದು?

**ಶಾಸ್ತ್ರಿ** : ಇಗೋ, ಈಗ ಮಾತು ಬಂತು. ಧರ್ಮ ಪತ್ನಿಯ ವಿಚಾರ. ಬಣ್ಣ ಕಪ್ಪೆಂದು ಈ ಹೃದಯವನ್ನೇ ಏನು, ಅವರ ಮಾತಾ ಪಿತೃಗಳು ತನ್ನ ಮಾತಾ ಪಿತೃಗಳು, ಎಲ್ಲರ ಹಾಗೂ ತಾನೂ ತನ್ನ ಮನಸ್ಸನ್ನೇ ಬೇಯಿಸುವಷ್ಟು ದುಷ್ಟಗುಣವೇನಯ್ಯಾ ಕಪ್ಪು? ಗುಣವಿಲ್ಲದೆ ಸಂಸಾರಕ್ಕೆ ಕಿಚ್ಚಿಕ್ಕಿ ವಂಶ ವಂಶವನ್ನೇ ಸುಡುವ ಕೆಂಪೇ ಅತಿ ಹೆಚ್ಚೋ? ಬಣ್ಣ ಕಪ್ಪಾದರೇನಯ್ಯ? ಹೃದಯ ಬಿಳುಪಿರಬೇಕು. ಬಣ್ಣ ಬಿಳುಪಿದ್ದು ಒಳಗೆ ಕತ್ತಲಿರುವುದೇ ದೊಡ್ಡದೆ?

**ಗುರು** : ಸರಿಯೆ; ಬಣ್ಣ ಕೆಂಪಿರುವವರ ಹೃದಯವೆಲ್ಲ ಕಪ್ಪೇ ಅನ್ನು.

**ಶಾಸ್ತ್ರಿ** : ಛೇ ! ಹೃದಯದ ವಿಷಯ ಬಣ್ಣದಿಂದಲ್ಲವೆಂದೇ ನನ್ನ ಅಭಿಪ್ರಾಯ.

**ಗುರು** : ಸರಿ; ಹೃದಯವೂ, ಬಣ್ಣವೂ, ಶುದ್ಧವಿರುವ ಹೆಣ್ಣು ತರಬಾರದಿತ್ತೆ?

**ಶಾಸ್ತ್ರಿ** : ಹುಡುಕ ಬಹುದಾಗಿದ್ದಿತು. ತರಬಹುದಾಗಿತ್ತು. ಎಲ್ಲವನ್ನೂ ತಂದೆಗೆ ವಹಿಸಿದವ ಈಗ ಎಲ್ಲಾ ಮುಗಿದಮೇಲೆ ಬಾಳಿನ ಬೆಳಕನ್ನು ಆರಿಸಿ ಕತ್ತಲಲ್ಲಿ ಕುಣಿವ ಪೈಶಾಚಿಕವೃತ್ತಿ ನನಗೇನೋ ಹಿಡಿಸದು.

**ಅನಂತ** : Shut up! Sastry!! ಹದ್ದು ಮೀರಿ ಮಾತಾಡುತ್ತಿರುವೆ, ಪೈಶಾಚವಂತೆ, ಪೈಶಾಚ. ನನ್ನ ಬೆಂದ ಹೃದಯವನ್ನರಿಯದ ಕುರುಡರು ಮಿತ್ರರಾಗುವುದಕ್ಕಿಂತ ಶತ್ರುಗಳಾಗುವುದೇ ಮೇಲು.

**ಶಾಸ್ತ್ರಿ** : ಅನಂತಾ, ನಿನ್ನ ನನ್ನ ಮೈತ್ರಿಯ ಬೆಳಕು ಅನಂತವಾಗಿ ಉರಿಯುತ್ತಿರುವ ನಿಶ್ಚಲ ದಿವ್ಯಜ್ಯೋತಿ. ಇನ್ನು ನೀನೇನೆ ಅನ್ನು, ಆ ಜ್ಯೋತಿಯನ್ನು ನಿನ್ನ ಹೃದಯದಲ್ಲಿ ನಂದಿಸಿದರೂ ನನ್ನ ಹೃದಯದಲ್ಲಿ ನಂದದು. ನಿನ್ನ ಜೀವನ ಸುಖಮಯವಾಗಲು ಬೇಕಾದ್ದನ್ನೆಲ್ಲಾ ಮಾಡಿಯೇ ತೀರುತ್ತೇನೆ. ಇದರಿಂದ ನನ್ನ ಪ್ರಾಣ, ಮಾನ, ಧನ, ಹಾನಿಯಾದರೂ ಚಿಂತೆಯಿಲ್ಲ. ಅಂತಹ ಗುಣಾಢ್ಯ ಹೆಂಡತಿ ನಿನಗೆ ಸಿಕ್ಕಿರುವುದು ನಿನ್ನ ಪೂರ್ವದ ಪುಣ್ಯ. ಇದನ್ನು ನೀನೇ ನಿನ್ನ ಜೀವನದಲ್ಲಿ ಕಾಣುವೆಯೋ, ಇಲ್ಲವೋ, ಅದನ್ನು ಗುರುದೇವನೇ ಇತ್ಯರ್ಥಪಡಿಸಿದ್ದಾನೆ. ಕತ್ತಲು ಹೆಚ್ಚಿದಷ್ಟೂ ನಕ್ಷತ್ರ, ಚಂದ್ರಮರ ಪ್ರಭೆ ಹೆಚ್ಚಾಗುವಂತೆ ನಿನ್ನಲ್ಲಿ ನಿನ್ನ ಹೆಂಡತಿಯಲ್ಲಿನ ದ್ವೇಷ ಹೆಚ್ಚಿದಷ್ಟೂ ವಿಶ್ವಾಸವೂ ಹಿಂದಿನಿಂದ ಆ ಕತ್ತಲನ್ನು ಕತ್ತರಿಸಿ ಜ್ಯೋತಿಯಾದೀತು. "ಅತ್ಯುನ್ನತಿಃ ಪತನ ಹೇತುಃ" ಎನ್ನುವುದು ಸತ್ಯ. ನಾನಿನ್ನು ಬರುತ್ತೇನೆ. ನಮಸ್ಕಾರ. ದೇವರು ನಿನಗೆ ಒಳ್ಳೆ ಬುದ್ಧಿ ಕೊಡಲಿ. ಅತಿ ಶೀಘ್ರವಾಗಿ ನಿನ್ನ ಮನೆಯ ಕತ್ತಲು ಬೆಳಗಿ ಒಳ ಹೊರಗೂ ಅನಂತವಾಗಲಿ.

(ಹೊರಡುವನು. ಗುರು, ಅನಂತ ಬಿದ್ದುಬಿದ್ದು ನಗುವರು)

**ಗುರು :** ಆಶೀರ್ವಾದಕಣಯ್ಯಾ! ಮಹಾ ದೊಡ್ಡ ಗುರುಗಳದು!!

(ನಗು)

**ಅನಂತ :** ಗೊಡ್ಡು ವೈದೀಕ ಮನೆತನದ ಮಂಗ!! (ನಕ್ಕು) ಕಾಳೀದಾಸ ಹೇಳಿದನಂತೆ "ಕುರೂಪತಾ ಶೀಲತಯಾ ವಿರಾಜತೇ" ಅಂತ. ಆಹಾಹಾ!! ಅವನು ಕಾಳಿದಾಸನಲ್ಲ ವೇನಯ್ಯಾ! ತಾನು ಕುರುಬ. ಕಪ್ಪು, ಕಾಳಿ, ಕೇಳಬೇಕೇ!!! ಸರಿಯಾದ ದಾಸ! ಸರಿಯಾದ ಯಜಮಾನಿ! ಹೆಂಗಸಿಗೆ ಗುಲಾಮನಾಗುವ ಸಂದೇಶ ಸಾರಿದ ವಿಭೂತಿ ಪುರುಷ!! ಅಲ್ಲ, ಗುರು, ನನಗಿಷ್ಟವಿಲ್ಲದ್ದನ್ನು ಹೇಗಯ್ಯಾ ಸ್ವೀಕರಿಸುವುದು?

**ಗುರು :** ಏಳೋ ಬೆಪ್ಪೆ! ಮಹಾ ದೊಡ್ಡ problem ಅಂತ solvationಗೆ ನೋಡ್ತಾ ಇದ್ದಾನೆ. ಆ ಹೆಣ್ಣು, ಅವಳ ಗುಣ ಇದ್ದರೆ ಬಿದ್ದಿರ್ಲಿ ಅತ್ತೆ ಮಾವರ ಸೇವೆ ಮಾಡ್ತಾ. ಇಲ್ಲಿದ್ರೆ ಹುಟ್ಟಿದ್ಮನೇಗೇ ರವಾನೆ. ಬಾ pictureಗೆ ಹೋಗೋಣ. ರೋಮಿಯೋ ಅಂಡ್ ಜೂಲಿಯಟ್ಟು ಬಂದಿದೆಯಂತೆ.

**ಅನಂತ :** ಬಟ್ಟೆ ಹಾಕಿ ಬರ್ತೇನಯ್ಯಾ.

**ಗುರು :** ಸರಿ, ಬಾರೋ. ಇಷ್ಟೇ ವೇಶ ಸಾಕು. ಮೆಚ್ಚಿದ್ದಾಳಲ್ಲ ಭಾರ್ಯೆ ಇನ್ಯಾರ್ಮೆಚ್ಬೇಕು ನಿನ್ನ?

**ಅನಂತ :** ಹೌದ್ಹೌದು, ಇನ್ನೇನು? ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲ.

**ಗುರು :** ಅಪ್ಪ, ಅಮ್ಮನ ಗುಲಾಮಗಿರಿ ಮಹಾತ್ಮೆ ಕಣಯ್ಯಾ, Independent thoughtsoo ಐಡಿಯಾಸ್ಸು ಇವೆಲ್ಲ ಕನಸು. ಬೆಪ್ಪೆ! lifeನ darken ಮಾಡೋ parentsಗೆ ಶರಣು ಹೊಡ್ದ Simpleton Natureಗೆ ಏನು ಹೇಳ್ಳಿ?

**ಅನಂತ :** ಗುರು, ನಮ್ಮಪ್ಪ, ಅಮ್ಮನ ವಿಷಯ ಮಾತ್ರ ಎತ್ಬೇಡ. ಎಲ್ಲ ನನ್ನ ದುರದೃಷ್ಟಕಣಯ್ಯಾ.

**ಗುರು :** ಸರಿಯಾದ ಶಿಷ್ಯಕಣಯ್ಯ ಆ ಶಾಸ್ತ್ರೀಗೆ ನೀನು. ಪ್ರಾಚೀನ ಕರ್ಮ, ದುರದೃಷ್ಟ. ಅದೇನೋ ಹೇಳ್ತಾರಲ್ಲ 'ಅನಿಷ್ಟಕ್ಕೆ ಶನೀಶ್ವರ ಗುರೀಂತ' ಕೈಯ್ಯಾರ ಮಾಡ್ಕೊಂಡು ಹಣೇಬರಹಾಂದ್ರೆ, ಯಾವ್ದೇವ್ರು ಮೆಚ್ತಾನಯ್ಯಾ?

**ಅನಂತ :** (ಉಡುಪು ಹಾಕಿಕೊಳ್ಳುತ್ತಾ) ಏನೋ ದೇವ್ರು ದಿಂಡ್ರೂಂತ ಶುರು ಮಾಡ್ದೆ. ನನ್ನಂದೆ ಶಾಸ್ತ್ರಿ ಶಿಷ್ಯಾಂತ?

**ಗುರು :** ದೇವ್ರು ಇಲ್ಲಾಂತ ನನ್ನ ವಾದ ಅಲ್ಲಯ್ಯಾ, ವ್ಯವಹಾರ ತಿಳೀದೇ ಇರುವ ನಿನ್ನಂಥಹವರನ್ನು ಕಂಡು ಮರುಗ್ಬೇಕಷ್ಟೆ.

**ಅನಂತ :** ಏನೇ ಹೇಳು, ನಮ್ಮಪ್ಪ, ಅಮ್ಮ, ಈ ಶಾಸ್ತ್ರಿ, ಇವರ್ಮಾತೆಲ್ಲ ಒಂದೊಂದ್ಸಲ ಸತ್ಯಾನ್ಸತ್ತೆ.

**ಗುರು :** ಹೀಗೆ Waveringಗಾಗಿರೋ ಬುದ್ಧೀನೆ ನಿನ್ನ ಹೀನಸ್ಥಿತಿಗೆ ಕಾರಣ. ಬಾ ಹೋಗೋಣ.

(ನಿಷ್ಕ್ರಮಣ)

* * * *

**ದೃಶ್ಯ ೨**

(ಕೊಠಡಿಯೊಂದು-ಗೋಡೆಗೆ ದೇವರ ಚಿತ್ರಗಳನ್ನು ನೇತುಹಾಕಿದ್ದಾರೆ. ಸರೋಜಳ ಅತ್ತೆ ಮಾವಂದಿರು ಹಾಗೂ ತಂದೆ ತಾಯಿಗಳ ಮತ್ತು ಕೆಳಗೆ ಅನಂತನ ಅದರ ಕೆಳಗೆ ಸರೋಜಳ ಪೋಟೋಗಳು. ಗಂಧದ ಕಡ್ಡಿ ಉರಿಯುತ್ತಿದೆ. ಒಂದು ವ್ಯಾಸಪೀಠದ ಮೇಲೆ ಧರ್ಮಗ್ರಂಥಗಳನೇಕವಿದೆ. ಹೊರಗಿನಿಂದ 'ಲಿಲ್ಲಿ' ಆಧುನಿಕ ವೇಷಧಾರಿಯಾಗಿ ರಿಬ್ಬನ್ ಎಂಡೆಡ್ ಡಬ್ಬಲ್ ಜಡೆ. ಎದೆಯ ಮೇಲೆ ೧೮ ವರ್ಷವಾದರೂ ಮಂಡಿ ಮೇಲೆ ಲಂಗ-ಕೈಲಿ ಪರ್ಸು- ಮುಖಕ್ಕೆ ಬಳಿದ ಪೌಡರ್ ಇತ್ಯಾದಿ-ಬರುತ್ತಾಳೆ.

**ಲಿಲ್ಲೀ :** ಸರೋಜ! ಸರೋಜ!! ಏನಿದು? ಬಾಗಿಲು ತೆಗೆದಿದೆ. ಇವಳು ಇಲ್ಲವೇ ಇಲ್ಲ. ಜೀವನದಲ್ಲಿ ಬೇಸರದಲ್ಲಿ ಬೇಸರವಾದರೆ ಹೀಗೆಯೇ. ಅಲ್ಲ, ಇಂತಹವರೆಲ್ಲ ಯಾಕೆ ಸುಖವಾಗಿ ಕ್ರಿಶ್ಚಿಯಾನಿಟಿಗೆ ಸೇರಬಾರದು? ಹಾಳು ಹಿಂದೂ ಧರ್ಮದಲ್ಲಿ ಒಬ್ಬನೇ ಗಂಡ. ಅವನು ಒದ್ರೂ ಸರಿ, ತುಳಿದರೂ ಸರಿ, ಡೈವೋರ್ಸ್ ಮಾಡಿ ಬೇರೆ ಮದುವೆ ಮಾಡ್ಕೊಳ್ಳೋ ಸ್ವಾತಂತ್ರ್ಯ ಬೇಡ್ವೇ ಹೆಣ್ಣಿಗೆ? Selfish brutes are the so called rishis ಎಲ್ಲ ಗಂಡಸರೇ ಬರ್ಯೋದು ಧರ್ಮಗ್ರಂಥಾನ. ಸುಡುಗಾಡ್ಧರ್ಮ. ಗಂಡ್ಸು ಆಡಿದ್ದೇ ಆಟ. ೧೨ ಮದ್ವೆ. ಮುದಿಗೂಬೆಯಾದ್ರೂ ಬೇಡ್ವಿದ್ರೆ ಹೆಂಡ್ತಿ ಬಿಡ್ಬಹುದು. (ಮಾತಾಗುತ್ತಾ ಮುಂದೆ ಸಾಗುತ್ತಾ ವ್ಯಾಸಪೀಠದ ಪುಸ್ತಕವನ್ನು ಕಾಣದೆ ಒದೆಯುವಳು. ಪುಸ್ತಕ ಕೆಳಗೆ ಬೀಳುವುದು.) ಹಾಳು ಪುಸ್ತಕ! ಇವಳ ಬಾಳನ್ನು ಹಾಳುಮಾಡಲು. ಎಲ್ಲ ಧರ್ಮಗ್ರಂಥವಂತೆ. ಧರ್ಮದ ತಿರುಳೂ ಇಲ್ಲದ ಹುಲಿವೇಷದ ಕತ್ತೆಗಳ ಹಾಗೆ. (ಅಷ್ಟು ಹೊತ್ತಿಗೆ ಸರೋಜಳು ಕುಂಕುಮದ ಭರಣಿ ಹಿಡಿದು ಒಳಕ್ಕೆ ಬರುವಳು.)

**ಸರೋಜ :** ಬಾ, ಲಿಲ್ಲೀ, ಕೂತುಕೋ.

**ಲಿಲ್ಲೀ :** ಕೂತುಕೊಳ್ಳಲು ಒಂದು chairoo ಇಲ್ಲ. ಆಗಲಿ, (ಕೆಳಗೆ ಕೂತುಕೊಳ್ಳುವಾಗ ಕರವಸ್ತ್ರದಿಂದ ಜಂಖಾನ ಕೊಡವಿ ಅದನ್ನು ಹಾಸಿ ಕುಳಿತುಕೊಳ್ಳುವಳು) Shoes ಇದ್ರೆ ಪರವಾಗಿಲ್ಲ ತಾನೇ?

**ಸರೋಜ :** ನನಗೆ ಅದು ಸರಿಬೀಳದಿದ್ದರೂ, ನಿನ್ನ ಮನಸ್ಸನ್ನು ನೋಯಿಸಲಾರೆ, ಇರಲಿ ಬಿಡು ಪರವಾಗಿಲ್ಲ.

**ಲಿಲ್ಲೀ :** ಹೋಗಲಿ, ಇನ್ನೊಬ್ಬರನ್ನು ತೃಪ್ತಿಪಡಿಸಲಾದರೂ ಗೊಡ್ಡು ಧರ್ಮಚರಣೆಯನ್ನು ತಿದ್ದುಕೊಳ್ಳುವಿ.

**ಸರೋಜ :** ತಿದ್ದುಕೊಳ್ಳಲು ನನಗೇನು ಅಧಿಕಾರ? ದೇಹದ ರಕ್ತ ಬಸಿದು ಸರ್ವತ್ಯಾಗ ಮಾಡಿ ಜಗತ್ತಿನ ಸತ್ಯದೀಪವನ್ನು ತಿಳಿದು ತಿಳಿಸಿದ ಋಷಿಗಳ ವಾಣಿಯನ್ನು ತಿದ್ದಲು ನಮಗೇನು ಅಧಿಕಾರ? ಅಥವಾ ನಾವೇನಾದರೂ ಅಷ್ಟೇ ತ್ಯಾಗಮಾಡಿ ಬೇರೆಮಾರ್ಗ ಕಂಡು ಹಿಡಿದಿದ್ದೇವೆಯೆ?

**ಲಿಲ್ಲೀ :** ಹಾಗಾದರೆ ನಿಮ್ಮ ಧರ್ಮದಲ್ಲಿ ಗಂಡಸಿಗೆ ಬೇಕಾದ ಹಾಗೆ ಕುಣಿವ ಸ್ವಾತಂತ್ರ್ಯವಿದೆಯೇ?

**ಸರೋಜ :** ಯಾರಿಗೂ ಇಲ್ಲ; ಧರ್ಮದ ಕಟ್ಟನ್ನು ಸಡಿಲಿಸಿ ನೀನೀಗ ಇಲ್ಲವೆ? ನಿನಗ್ಯಾರು ಅಡ್ಡಿ? ಹಾಗೇ, ಗಂಡಸರು ಏಕ ಪತ್ನೀವ್ರತಸ್ಥರಾಗಬೇಕೆಂದೇ ನಿಯಮ. 'ಅಪುತ್ರಸ್ಯ ಗತಿರ್ನಾಸ್ತಿ' ಎಂದು ಮಕ್ಕಳಿಲ್ಲದಿದ್ದರೆ ಮದುವೆಯಾಗುವನು. ಮದುವೆಯಾಗಲೂ ವಯಸ್ಸಿನ ಮಿತಿಯಿದೆ, ಅದು ಮೀರಿದರೆ ಸನ್ಯಾಸವೇ ಮುಂದಿನ ಆಶ್ರಮ. ಹೆಂಡತಿಯನ್ನು ದೇವಿಯೆಂದೇ ಭಾವಿಸಬೇಕು. ಹೆಂಡತಿ ಸತ್ತರೆ ಆಕೆಗೆ ದೇವರಂತೆ ಪೂಜಾದಿಗಳನ್ನು ಸಲ್ಲಿಸಬೇಕು. ಅಂತೇ ಕರ್ಮಗಳನ್ನೂ ಮಾಡಬೇಕು. ಹಿಂದೂಧರ್ಮದಲ್ಲಿ ಹೆಂಡತಿಯೇ ಮನೆಯ ಬೆಳಕು. ಅವಳೊಪ್ಪದ ದಾನ, ಧರ್ಮ, ಯಜ್ಞಗಳೊಂದಕ್ಕೂ, ಮನ್ನಣೆಯೇ ಇಲ್ಲ. ಶ್ರೀರಾಮನು ಮಾಡಿದ ಯಜ್ಞಕ್ಕೆ ಸೀತೆಯ ಬದಲು ಚಿನ್ನದ ವಿಗ್ರಹ ಇಟ್ಟುಕೊಂಡಿರಲಿಲ್ಲವೇ? ಹೆಂಡತಿ ಇಲ್ಲದೆ ಮಾಡಿದ ಯಾವ ಕಾರ್ಯಕ್ಕೂ ಆರ್ಯ ಸಂಸ್ಕೃತಿಯಲ್ಲಿ ಒಪ್ಪಿಗೆಯೇ ಇಲ್ಲವಲ್ಲ?

**ಲಿಲ್ಲೀ :** ಅದಕ್ಕೇ ನಿನ್ನ ಬಾಳು ಹೀಗಾಗಿರುವುದು.

**ಸರೋಜ :** ಏನಾಗಿದೆ? ಪತಿಯ ಪಾದಸೇವೆ ಇದೆ. ಅತ್ತೆಮಾವರ ಆಶೀರ್ವಾದ, ಹಾಗೂ ಅವರ ಸತತ ಸೇವಾಭಾಗ್ಯ; ಇದಕ್ಕಿಂತ ಮತ್ತೇನು ಬೇಕು?

**ಲಿಲ್ಲೀ :** ಅಷ್ಟೆ; ಗಂಡ ನಿನ್ನನ್ನು ಮೂಸದಿದ್ದರೂ ಸರಿ, ಹಾಗಾದರೆ ಮದುವೆಯಾದುದೇತಕ್ಕೆ?

**ಸರೋಜ :** ಅವೆಲ್ಲ ಪೂರ್ವದ ಕರ್ಮ ಫಲವಮ್ಮಾ. ಗಂಡನೊಡನೆ ಸೇರುವುದೊಂದೇ ಜೀವನದ ಸಮಸ್ಯೆಯೇ? ಹೆಂಗಸು 'ಕಾರ್ಯೇಷು ದಾಸೀ, ಕರಣೇಷು ಮಂತ್ರೀ ರೂಪೇಷು ಲಕ್ಷ್ಮೀ ಕ್ಷಮಾಯಾ ಧರಿತ್ರೀ. ಭೋಜ್ಯೇಷು ಮಾತಾ ಶಯನೇಷು ರಂಭಾ ಷಟ್ಕರ್ಮಯುಕ್ತಾ ಕುಲಧರ್ಮಪತ್ನೀ' ಎಂಬ ವೇದಾವಾಣಿಯಂತೆ ಜೀವನದ ಅನೇಕ ಸಮಸ್ಯೆಗಳು ಎದುರಿಗಿರುವಾಗ ಯಾವುದೋ ಸಣ್ಣ ವಿಚಾರವನ್ನು ಅತಿದೊಡ್ಡದೆಂದು ತಿಳಿದು ಮರುಗುವಷ್ಟು ಹೆಡ್ಡತನವಿದ್ದರೆ ಆತ್ಮಸಾಕ್ಷಾತ್ಕಾರ ಬಹಳ ದೂರವೇ ಸರಿ. ಬಾಳನ್ನು ಬಹು ಹಗುರವಾಗಿ ಕಾಣಬೇಕು. ಹಚ್ಚಿಕೊಂಡಷ್ಟೂ ಹೆಚ್ಚುತ್ತದೆ. ಲೌಕೀಕ ವ್ಯಾಪಾರ.

ಭಾರವೆಲ್ಲವನ್ನೂ ದೇವರಿಗರ್ಪಿಸಿದ ನರಜನ್ಮದ ಅತಿ ಮುಖ್ಯ ಧ್ಯೇಯವಾದ ಮುಕ್ತಿಯನ್ನು ಮಾತ್ರ ಸಾಧಿಸಬೇಕು.

ಲಿಲ್ಲೀ : ಈ ವೇದಾಂತದಲ್ಲಿ ನೀನು ತಿಳಿದಿರುವುದು ಲೌಕಿಕವೆಲ್ಲ ಬೇಡವೆಂದು ತಾನೇ?

**ಸರೋಜ :** ಲೌಕಿಕವು ಕಶ್ಮಲದಂತೆ, ಸರ್ವಜ್ಞ ಸಂಸಾರ ವಿಷಯದಲ್ಲಿ ಹೇಳುತ್ತಾನೆ : 'ಹೇಲುಮೇಗ್ಗತ್ತಿ ಬಾಲನಂತಿರಬೇಕು' ಎಂದು. ವಾಕ್ಯವು ಎಷ್ಟೇ ಕೆಟ್ಟಪದದಿಂದ ಕೂಡಿರಲಿ ಅದು ವೇದವಾಕ್ಯವೆ. ಹಾಗೆ ಪದ ಉಪಯೋಗಿಸದಿದ್ದರೆ ಪ್ರಪಂಚ ಕಣ್ಣು ತೆರೆಯಲಾರದು. ಜಗತ್ತಿಗೆ ಕುಂಭಕರ್ಣನ ನಿದ್ರೆ ಬಂದಿದೆ, ಧರ್ಮದ ವಿಷಯದಲ್ಲಿ. ನಿತ್ಯದ ಬಾಳುವೆಯನ್ನು ದೇವರಿಗರ್ಪಿಸಬೇಕು. ಯಾರು ಗಂಡ? ಯಾರು ಹೆಂಡತಿ? ಯಾರು ಮಕ್ಕಳು? ಎಲ್ಲ ಅವರವರ ಪ್ರಾಚೀನದಂತೆ ಹುಟ್ಟಿ ತಮ್ಮ ಸಂಸಾರದಂತೆ ಇದ್ದು ಹೊರಡುತ್ತಾರೆ. ರೈಲು ಪ್ರಯಾಣದ ಮಿತ್ರರಂತೆ. ನಮ್ಮದೆಂಬುದೊಂದನ್ನೂ ನಾವು ಉಳಿಸಿಕೊಳ್ಳಲಾರೆವು. ಎಂದ ಮೇಲೆ ನಮ್ಮದಾಗಿರುವುದು ಒಂದೇ; ಆತ್ಮ. ಅದರ ಸಾಕ್ಷಾತ್ಕಾರವೇ ಮುಖ್ಯ. ಜಗತ್ತಿನಲ್ಲಿ ಕರ್ತವ್ಯದ ಕರ್ಮವೊಂದೇ ಮುಖ್ಯ. ಲೌಕಿಕವು ಕರ್ತವ್ಯವು. ಅದನ್ನು ನಾವು ಮಾಡುತ್ತೇವೆಂದರಾಗಲೀ, ಮಾಡೆವೆಂದರಾಗಲೀ ಮಾಡಿಯೇ ತೀರಲೇಬೇಕು. 'ಅಹಂಕಾರವು' ಈ ವಿಷಯದಲ್ಲಿ ಬಂದು ಸುಖ-ದುಃಖ ಅನುಭವಕ್ಕೆ ಸಿಕ್ಕಿತೊಳಲುವುದಕ್ಕಿಂತ 'ಕೃಷ್ಣಾರ್ಪಣ'ವೆಂದು ಪ್ರತಿಕರ್ಮವನ್ನೂ ಮಾಡುವುದೆ ಮೇಲು. ದೈಹಿಕವಾಗಿ ಸಂಬಂಧವಿದ್ದಂತೆ ವರ್ತಿಸಲೇಬೇಕು. ಆತ್ಮನಿಗೆ ಸಂಬಂಧವೇ ಇಲ್ಲ. ಅದು ತಾನು ತಾನಾಗಿರುವ ವಸ್ತು. ಅದರ ಸಾಕ್ಷಾತ್ಕಾರವೇ ಈ ಎಲ್ಲ ಅಳಲಿಕೆ ತೊಳಲಿಕೆಯಿಂದ ಬಿಡುಗಡೆ.

ಲಿಲ್ಲೀ : ನಿನ್ನ ವೇದಾಂತ ಬಹಳ ಬೇಸರವಾಗಿದೆ. ಕಟ್ಟಿಕೊಂಡ ಗಂಡ ಬಿಟ್ಟುಬಿಟ್ಟಿದ್ದರೂ, ಬಾಳು ಬೆಂದಿದ್ದರೂ, ಈ ಸಮಾಧಾನವನ್ನು ಬಾಯಲ್ಲಿ ಹೇಳುತ್ತೀಯಲ್ಲ?

ಸರೋಜ : ನೋಡು, ನನ್ನ ಗಂಡ ಎಷ್ಟಾಗಲೀ ನನಗೆ ದೇವರು. ಲಿಲ್ಲೀ, ಆತನ ವಿಷಯ ಬೇಡ. ಹೀಗೆ ಆತ ಅಸಡ್ಡೆ ಮಾಡದಿದ್ದರೆ ನನಗೆ ಇಷ್ಟು ಆತ್ಮಜ್ಞಾನ ಸಾಧ್ಯವಾಗುತ್ತಿದ್ದಿತೇ? ನೀನೇ ಇಂಗ್ಲೀಷಿನಲ್ಲಿ ಗಾದೆ ಹೇಳುವೆ. 'Take things as they come; every thing is for good, face the music' ಅಂತ.

ಲಿಲ್ಲೀ : ಸರಿ; ಖೂನಿ ಮಾಡಿದವನನ್ನು ಲಾಯರ್ ವಾದಿಸಿ ಉಳಿಸುವುದಿಲ್ಲವೇ? ಅಂತಹ ವಾದ ನಿನ್ನದು. ಮಾತನ್ನು ಉಪಯೋಗಿಸಲೂ ಒಂದು ಜಾಣ್ಮೆಬೇಕು. ನಾನು ಬರುತ್ತೇನೆ. (ಸರೋಜಳು ಹಾಲು ಕೊಡುವಳು ಕುಡಿದು ಹೊರಡುವಳು)

**ಸರೋಜ :** (ಅವಳು ಹೋದೆಡೆಯೇ ದೃಷ್ಟಿ ಇಟ್ಟು) ಜೊತೆಗಾತಿ, ಜೊತೆಯಲ್ಲೇ ಓದಿದಳು. ತನ್ನ ಜೀವನದ ಬೆಳಕರಿಯದೇ ಸಹಪಾಠಿಯ ಸ್ನೇಹಸಂಪರ್ಕದಿಂದ ಧರ್ಮದೂರಳಾಗಿ ಬಾಳುತ್ತಿದ್ದಾಳೆ. ದೇಹ ವ್ಯಾಪಾರವೇ ಬಾಳಿನ ಗುರಿಯೇ? ಹಾಗೆ

ಸೂಳೆಯೂ ಬಾಳಳೇ? ಜಗತ್ತಿನ ಕಣ್ಣು ತೆರೆವ ಮಹಾಪುರುಷನು ಜನ್ಮವೆತ್ತಬೇಕು. ನಾರಾಯಣ!

(ಒಳಗಿನಿಂದ 'ಸರೋಜ' ಎಂಬ ಅತ್ತೆಯ ಕೂಗು, ಒಳಗೆ ಬರುವಳು)

**ಅತ್ತೆ :** ಏನಮ್ಮಾ! ತುಳಸಿ ಪೂಜೆ ಮಾಡಿಕೊಂಡು ಒಳಗೆ ಬರಲೇ ಇಲ್ಲ.

ಸರೋಜ : ಕ್ಷಮಿಸಿ, ಅಮ್ಮ! ಲಿಲ್ಲಿ ಬಂದಿದ್ದಳು. ಅವಳಿಗೆ ನನ್ನ ಜೀವನ ಬಹಳ ಭಾರವೆಂಬ ಭಾವನೆಯಿದೆ. ಅದನ್ನು ಹೊರ ಹಾಕಲು ಸ್ವಲ್ಪ ವೇದಾಂತ ವಿಚಾರ ತಿಳಿಸಿ ನಮ್ಮ ಧರ್ಮ ಸ್ವರೂಪ ತಿಳಿಸಿದೆ.

**ಅತ್ತೆ :** ಕೇಳುತ್ತಿದ್ದೆ ತಾಯಿ! ಕೇಳಿ ಆನಂದವಾಗಿಯೇ ಇಲ್ಲಿ ಬಂದೆ. ನೀನು ನನ್ನ ಸೊಸೆಯಲ್ಲಮ್ಮ, ಗುರು!! ನಮ್ಮ ಮನೆಯ ಉದ್ಧಾರಕ್ಕೆ ಬಂದ ದೇವತೆ.

(ತಬ್ಬಿಕೊಳ್ಳುವಳು)

**ಸರೋಜ :** ಅಮ್ಮಾ! ಅಷ್ಟು ದೊಡ್ಡ ಮಾತು ನನಗೆ ಸಲ್ಲದು, ನಾನು ನಿಮ್ಮ ಸೇವಕಿ-ಯಾವ ಅತ್ತೆ ಮಾವಂದಿರು ಸೊಸೆಯನ್ನು ಹೀಗೆ ಮಗಳಂತೆ ಕಾಣುತ್ತಾರೆ, ಹೇಳಿ?

**ಅತ್ತೆ :** ನಿನ್ನಂತಹ ಸೊಸೆಯಿದ್ದರೆ ಹೂಹಾಕಿ ಪೂಜೆ ಮಾಡುತ್ತಾರೆ. ನೀನು ಕಿರಿಯವಳೆಂದು ಬಾಹ್ಯವಾಗಿ ಪೂಜಿಸುವುದಿಲ್ಲಮ್ಮ. ಹೃದಯದಲ್ಲಿ ಆರಾಧ್ಯ ದೇವತೆಯಂತೆ ಪೂಜಿಸುತ್ತಿದ್ದೇನೆ.

**ಸರೋಜ :** ಅದು ನಿಮ್ಮ ಭಾವನೆ, ಅದಕ್ಕೆ ಅಡ್ಡಿ ಬರಲು ನಾನ್ಯಾರು? ನನಗೆ ನಿಮ್ಮ ಸತತ ಸೇವೆ ನೀಡಿರಿ. ಸಮಾಜದ ಸಕಲ ವ್ಯಕ್ತಿಗಳಿಗೂ ಸೇವೆ ಮಾಡಲು ನನಗೆ ಅನುಮತಿ ಕೊಟ್ಟಿರುವಿರಿ. ಇಷ್ಟಕ್ಕಿಂತ ನನಗೆ ಬೇರೆ ಕರ್ತವ್ಯವೇ ಇಲ್ಲ.

**ಅತ್ತೆ :** (ತಲೆ ನೇವರಿಸಿ) ನಡಿ, ತಾಯಿ, ಸ್ವಲ್ಪ ತೆಗೆದುಕೊಳ್ಳುವಿಯಂತೆ, ಹೊತ್ತಾಗಿದೆ ಬೆಳಗಿನ ಹಣ್ಣು ಹಾಲು ಉಪಹಾರಕ್ಕೆ.

(ನಿಷ್ಕ್ರಮಣ)

* * * * *

## ದೃಶ್ಯ ೩

(ಸ್ಥಳ : ನಗರ, ಸೂರ್ಯಾಸ್ತಮನಕ್ಕೆ ಮುಕ್ಕಾಲು ಘಂಟೆ ಸಮಯವಿದೆ. ಮನೆಯ ಸೀತಾರಾಮಯ್ಯನವರ ಮುಂಬಾಗಿಲು ಚಿಲಕ ಹಾಕದೆ ಸುಮ್ಮನೆ ಮುಚ್ಚಿದೆ. ಸೀತಾಬಾಯಿಯ ಗೆಳತಿ ವೆಂಕಕ್ಕ ಬಂದು ಬಾಗಿಲಲ್ಲಿ ನಿಂತು "ಸೀತಾಬಾಯಿ, ಸೀತಾಬಾಯಿ" ಎಂದು ಕೂಗುವಳು)

**ಸೀತಾಬಾಯಿ :** (ಒಳಗಿನಿಂದ ಬಂದು ಬಾಗಿಲು ತೆಗೆಯುತ್ತಾ) ಯಾರಲ್ಲಿ? ಬಂದೆ. ಬಾಗಿಲು ಹಾಕಿಲ್ಲ. ದೀಪಾ ಹಚ್ಚೊ ಹೊತ್ತ್ನಾಂತ ಸುಮ್ಮನೆ ಮುಂದೆ ಮಾಡಿಕೊಂಡು ದೇವರಿಗೆ

ದೀಪವಿಡೋಣಾಂತ ಬಂದೆ, ಬನ್ನಿ ಒಳಕ್ಕೆ. ಯಾರು? (ಬಾಗಲು ತೆಗೆದು) ವೆಂಕಕ್ಕನೇ? ನಿಮ್ಮನ್ನ ನೋಡಿ ಎಷ್ಟು ದಿವಸಗಳಾದುವು? ಯಾವಾಗ ಬಂದಿರಿ ಬನ್ನಿ.

ವೆಂಕಕ್ಕ : ಸೀತಾಬಾಯಿ, ಒಳಗೆ ಬರಲು ಈಗ ಸಮಯವಿಲ್ಲ. ರಾತ್ರಿ ಒಂಬತ್ತು ಘಂಟೆ ಗಾಡಿಗೆ ದಾವಣಗೆರೆಗೆ ಹೋಗಬೇಕು. ಊರಿಗೆ ಬಂದವಳು ನಿಮ್ಮನ್ನು ಕಾಣದೆ ಹಾಗೆಯೇ ಹೋಗಲು ಮನಸ್ಸು ಬರಲಿಲ್ಲ. (ಒಂದೇ ಸಮನೆ) ಸೌಖ್ಯಾವಾಗಿದೀರಾ? ನಿಮ್ಮನ್ನು ನೋಡಿ ಏಳು ವರ್ಷಕ್ಕಿಂತ ಮೇಲೆಯೇ ಇರಬಹುದು ಅಲ್ಲವೇ? ಆಗ ನಿಮಗೆ ಹದಿನಾಲ್ಕು ಹದಿನೈದು ವರ್ಷದ ಮಗ ಒಬ್ಬ ಇದ್ದನಲ್ಲ? ಅಷ್ಟೇ ತಾನೇ? ಅಮೇಲೇನಾದರೂ ಮಕ್ಕಳೇ? ಮದುವೆಯಾಗಿದೆಯೇ? ಸೊಸೆ ಮನೆಗೆ ಬಂದಿದ್ದಾಳೆಯೇ?

ಸೀತಾಬಾಯಿ : ಇದೇನೀ ಆತುರ? ಏನು? ಕುದುರೆ ಮೇಲೇ ಬಂದಿರಾ? ಇಷ್ಟು ವರ್ಷಗಳ ಮೇಲೆ ಬಂದವರು ಹೊಸಿಲು ಮೆಟ್ಟಿ ಹೋಗುವರುಂಟೇ? ಒಂದು ಘಳಿಗೆ ಕೂತುಕ್ಕೊಳ್ಳಬಾರದೆ? ಒಳಗೆ ಬಂದು ಒಂದು ಲೋಟ ಕಾಫಿಯಾದರೂ ಕುಡಿದುಕೊಂಡು ಹೋಗೀಂದ್ರೆ.

ವೆಂಕ್ಕಕ್ಕ : ಇಲ್ಲಮ್ಮ, ಕ್ಷಮಿಸಿ, ತುಂಬಾ ಹೊತ್ತಾಗುತ್ತೆ.

ಸೀತಾಬಾಯಿ : ಏನೋ, ನಿಮ್ಮ ಆತುರ ಅರ್ಥವೇ ಆಗುವುದಿಲ್ಲ. ಹೋಗಲಿ ತಾಳಿ ಸ್ವಲ್ಪ, ಕಾಫಿ ಮಾಡಲು ಹೊತ್ತಾಗುವುದಾದರೆ ನಿಂಬೆ ಹಣ್ಣಿನ ಷರಬತ್ತಾದರೂ ಮಾಡಿಕೊಡುತ್ತೇನೆ. ಮನೆಯಲ್ಲಾರೂ ಇಲ್ಲ. ಯಜಮಾನರು ಮಹಡಿ ರೂಂನಲ್ಲಿ ಕುಳಿತು ಏನೋ ಅವರ ಕಡತ ಬರೀತಾ ಇದ್ದಾರೆ. ಮಗು ಎಲ್ಲೋ ಹೋಗಿದ್ದಾನೆ. ಅವತ್ತಿದ್ದ ಹಾಗೇ ಇದೀರಲ್ಲ. ಬನ್ನಿ ಕೂತುಕೊಳ್ಳಿ.

(ಇಬ್ಬರೂ ಚಾಪೆಯ ಮೇಲೆ ಕುಳಿತುಕೊಳ್ಳುವರು)

ವೆಂಕಕ್ಕ : ಬರಬಾರದು, ಮಾತನಾಡಬಾರದು, ಎಂಬುದೇನೂ ಇಲ್ಲ ಸೀತಾಬಾಯಿ, ಮಾತಿಗೆ ಕೂತಿದ್ದರೆ ಹೊತ್ತಾಗುತ್ತದೆ. ಬಂಡಿ ಸಿಗುವುದು ಕಷ್ಟ. ರೈಲಿನ ವಿಷಯ ತಿಳಿದೇ ಇದೆಯಲ್ಲ. ಒಂದು ಘಂಟೆ ಮುಂಚೆ ಹೋದರೂನೂ ಗುಂಪು, ನೂಕು ನುಗ್ಗಲು, ಏನ್ರೀ ಕೇಳಿದ್ದೊಂದಕ್ಕೂ ಜವಾಬೇ ಇಲ್ಲ?

ಸೀತಾಬಾಯಿ : ಬಡಬಡಾಂತ ಒಂದೇ ಸಮನೆ ಪ್ರಶ್ನೆ ಸುರಿಮಳೆ ಸುರಿಸಿ ಹೊರಡಲು ಸಿದ್ಧರಾದ ನಿಮ್ಮ ಆತುರದಲ್ಲಿ ಎಲ್ಲಾ ಮರೆತೇ ಹೋಯ್ತು. ನನಗೆ ಆಗ ನೀವು ನೋಡಿದ್ದಿರಲ್ಲ, ಅವನೊಬ್ಬನೇ ಮಗು. ಅವನಿಗೆ ಮೊನ್ನೆ ಮಾಘಮಾಸದಲ್ಲಿ ಮದುವೆಯಾಯ್ತು. ಸೊಸೆ ಮನೆಗೆ ಬಂದಿದ್ದಾಳೆ. ನೀವು ಬಂದ ಘಳಿಗೆ ಅವಳೂ ಮನೇಲಿಲ್ಲ. ನಮ್ಮ ಸ್ನೇಹಿತರೊಬ್ಬರ ಮನೆಯಲ್ಲಿ ಮಗೂಗೆ ವರ್ಷದ ಹೆಚ್ಚಂತೆ. ಹಸೇ ಮೇಲೆ ಕೂರಿಸಿ ಆರತೀ ಮಾಡ್ತೇನೇಂತ ಕರೆದು ಹೋಗಿದ್ದಾರೆ. ಸ್ವಲ್ಪ ಇರಿ, ಈಗ

ಬಂದುಬಿಡ್ತಾಳೆ. ನೀವು ಸೊಸೇನ ನೋಡಿಕೊಂಡೇ ಹೋಗಬೇಕು. ನಾನೇ ಹೇಳಿದರೆ ಸರಿಯಾಗೋಲ್ಲ. ಅದರ ಜಾಣತನ, ಚಟುವಟಿಕೆ, ರೂಪು, ಗುಣ ಎಲ್ಲವನ್ನೂ. ಹತ್ತು ಬೆರಳಿಗೆ ಹತ್ತು ಕೆಲಸ. ಓದಿಸಿದ್ದಾರೆ. ಚೆನ್ನಾಗಿ ಹಾಡುತ್ತಾಳೆ. ಇಷ್ಟೂ ಇದೆಯಲ್ಲ. ಮನೆಗೆ ಯಾರೋ ಬೇರೆಯವರು ಬಂದಿದ್ದಾರೇಂತ ಮಗ ತಿಳಿದುಕೊಂಡಿದ್ದಾನೆ ನೋಡಿ. ಹುಡುಗಿ ನೋಡಿದರೆ ಸ್ವಲ್ಪ ಕಪ್ಪೂಂತ ತೋರುತ್ತೆ. ನಮ್ಮ ಹಾಗೆ ಕೂಡ ಇಲ್ಲ. ಇದ್ದರೆ ಏನ್ರಿ ವೆಂಕಕ್ಕ? ಕುರೂಪತಾ ಶೀಲತಯಾ ವಿರಾಜತೇಂತ. ನಮ್ಮ ಬೀಗಿತ್ತಿ ಒಳ್ಳೇ ಕೆಂಪು ಬಣ್ಣ. ಹತ್ತು ಮಕ್ಕಳ ತಾಯಾದರೂ ಇನ್ನೂ ಹೊಸದಾಗಿ ಪ್ರಸ್ತವಾದ ಹುಡುಗಿಯ ಹಾಗೆಯೇ ಇದ್ದಾರೆ. ಬೀಗರು ಸ್ವಲ್ಪ ಕಪ್ಪು. ಹುಡುಗಿ ರೂಪಿಗೆ ಅಮ್ಮನನ್ನೂ ಬಣ್ಣಕ್ಕೆ ಅಪ್ಪನನ್ನೂ ಹೊತ್ತಿದ್ದಾಳೆ. ಬಿಳುಪಾಗಿ ಹುಟ್ಟುವುದಕ್ಕೂ ಕಪ್ಪಾಗಿ ಹುಟ್ಟುವುದಕ್ಕೂ ನಾವೇನು ಮಾಡೋದು ಹೇಳಿ?

**ವೆಂಕಕ್ಕ :** ಕಪ್ಪಾಗಿದ್ದರೇನಾಯಿತಮ್ಮ! ನಾವೆಲ್ಲರೂ ನೆಟ್ಟಗೆ ಲಂಡನ್‌ನಿಂದ ಹಡಗಿನಲ್ಲಿ ಬಂದಿಳಿದಿದೆವೇನು? ಆದರೆ ಈ ಕಾಲದ ಹುಡುಗಿಯರು ತಿಳಿದಿರುವುದು ಹಾಗೆಂತಲೇ. ಇಲ್ಲದಿದ್ದರೆ ಈ ರೀತಿ ತಲೆಕೆಳಗಾಗಿ ನಡೆಯುತ್ತಿದ್ದರೇ. ಎಲ್ಲರೂ ಸಿನಿಮಾ ನಟಿಯರೇ. ವಿಧವಿಧವಾದ ಸೀರೆ ಕುಪ್ಪಸ, ಅಲ್ಲ, ಅಲ್ಲ, ಜಾಕೆಟ್. ಬೆಳಗಾದರೆ ಹೊಸ ಫ್ಯಾರ್ಷ ಈ ಬಟ್ಟೆ ಇದೆಯಲ್ಲ, ಅದು ಮಾಡೋ ಕೆಲಸ ಅಷ್ಟೊನೂ, ಅಬ್ಬಬ್ಬಾ ಹೇಳೋದು ಸಾಧ್ಯವೇ ಇಲ್ಲ. ಧೈರ್ಯ, ಪೌಡರ್, ಸ್ನೋ, ಬೊಟ್ಟು, ಜಡೆ, ಹಾವಭಾವ, ಥಳುಕು, ಸೊಗಸು, ಇವೆಲ್ಲಾ ಏನು ಮಾಡೀತು ಹೇಳಿ. ಮುಖದಲ್ಲಿ ಕಳೆ ಕಾಂತೀನ್ನೋದು ಏನಾದರೂ ಇದೆಯೇ? ನೋಡಿದರೆ ಹೆಂಗಸೂಂತ ತಿಳಿಯೋ ಹಾಗಿದೆಯೇ? ಈ ಬಹಿರ್ವೇಷದಿಂದ ಸೌಂದರ್ಯವುಂಟಾಗುತ್ತೇನು? ಹುಟ್ಟುವಾಗಲೇ ಅಂದವಾಗಿ ಹುಟ್ಟಬೇಕು. ಕೈಕಾಲು, ಮೂಗು, ಕಣ್ಣು ನೇರವಾಗಿರಬೇಕು. ಮುಖದಲ್ಲಿ ಒಳ್ಳೇ ಕಳೆಯಿರಬೇಕು. ಗಾಂಭೀರ್ಯವಿರಬೇಕು. ಒಳ್ಳೇ ಗುಣವಿರಬೇಕು. ನಡತೆಯಿರಬೇಕು. ಕಪ್ಪಗಿದ್ದರೇನು? ಬೆಳ್ಳಗಿದ್ದರೇನು; ರೂಪವೇಕೆ ಬೇಕು? ಅರೆಕೊಂಡು ಕುಡಿಯೋಕೇ ಇದೆಲ್ಲ ಹೇಳಿದರೆ ಕರ್ನಾಟಕ, ಹಳೇ ಗೊಡ್ಡು ಅನ್ನುವರು.

**ಸೀತಾಬಾಯಿ :** ಇಲ್ಲ ವೆಂಕಮ್ಮ ಕರ್ನಾಟಕವಾಗಿದ್ದರೆ ಅದರಿಂದ ಪ್ರಪಂಚ ಮುಳುಗಿ ಹೋಗುತ್ತೇನು? ನಮ್ಮನೇವರೂ ಜಡ್ಜಿ ಉದ್ಯೋಗ ತಾನೇ ಮಾಡ್ತಿದ್ದರು. ನಿಮಗೆ ತಿಳಿಯದೇ? ಆ ಮೇಲೆ ಏನೋ ಉದ್ದೇಶ ಮಾಡಿಕೊಂಡು ನನಗದನ್ನೆಲ್ಲಾ ಹೇಳೋಕಾದರೂ ಬರತ್ತೇ? ಕೆಲಸಕ್ಕೆ ರಾಜೀನಾಮೆ ಕೊಟ್ಟರು. ಈಗ ಸದಾ ಪುಸ್ತಕ, ಇಲ್ಲದಿದ್ದರೆ ಬರಹ, ಅದೂ ಇಲ್ಲದಿದ್ದರೆ ಮಾತು. ಅವರಿಗೆ ತಕ್ಕಂತೆ ಈ ಬೀದಿಯಲ್ಲಿ ಒಬ್ಬ ಡಾಕ್ಟರಿದ್ದಾರೆ. ಆದರೆ ಸುಮ್ಮ ಸುಮ್ಮನೆ ಹೇಳಬಾರದು, ನೋಡಿ-ಅವರು ಎಷ್ಟು ಒಳ್ಳೆಯವರೂಂತೀರಿ, ಡಾಕ್ಟರ್ -ಕೃಷ್ಣಮೂರ್ತೀಂತ ಆತನ ಹೆಸರು. ಇಬ್ಬರೂ ಮಾತನಾಡೋಕೆ ಕೂತುಬಿಟ್ಟರೆ

ಅವರಿಗೆ ಈ ಲೋಕದ ಜ್ಞಾನವೇ ಇರೋದಿಲ್ಲ. ಅಂಥಾ ಸ್ವಾರಸ್ಯ ಮಾತನಾಡೋಕೆ ಡಾಕ್ಟರು, ಅವರಿಲ್ಲದಿದ್ದರ ಮಗ. ಮಗ ದೊಡ್ಡ ಪಾಸು ಮಾಡಿದಾನೆಂದೆನಲ್ಲ. ಯಾಕೆ ಹೇಳೋಕೆ ಬಂದೇಂದ್ರೆ ತಂದೆಗೂ ಮಗನಿಗೂ ಈ ಕಾಲದ ನಡವಳಿಕೆಗಳೊಂದೂ ಸರಿಬೀಳೋದಿಲ್ಲ. ನೋಡಿ ನಮ್ಮ ಮನೆಯಲ್ಲಿ ಇವತ್ತಿಗೂ ಹೆಸರಿಟ್ಟು, ಅರಿಸಿನ ಪುಡಿ, ಕೆಂಪು ಕುಂಕುಮ, ಹಣೆಗೆ, ಜಡೇ ತುದಿಗೆ ಬಾಳೆ ನಾರಿಟ್ಟೇ ಹಾಕಿ ಕೊಳ್ಳೋದು. ಸೀರೆಯಂತೂ ಅಂಥಾದ್ದು ಇಂಥಾದ್ದು ಕೊಳ್ಳೋಬಾಬೇ ಇಲ್ಲ. ಈ ರವಿಕೆ ನಾನೇ ಹೊಲಿದೆ ನೋಡಿ. ಚೆನ್ನಾಗಿಲ್ಲವೇ? ಮರೆಯಾಗಿರೋದೆಲ್ಲಾ ಒಂದು ಅಲ್ಲವೇ? ನಾವಿಷ್ಟು ಕರ್ನಾಟಕದವರಾಗಿದೇವಲ್ಲ, ನಮ್ಮ ಕುಟುಂಬಕ್ಕೆ ತಕ್ಕಂಥಾ ಸೊಸೆ ಬರಬೇಕಲ್ಲ ಅಂತ ರಾತ್ರೀ ಹಗಲೂ ಕೊರಗುತ್ತಾ ಇದ್ದೆ ನೋಡಿ. ಹೇಳಿ ಮಾಡಿದ್ದರೂ ಕೂಡ ಅಂಥಾದ್ದು ದೊರೆಯಲಾರದು. ಅಷ್ಟು ಅಚ್ಚು ಮೆಚ್ಚಾಗಿದೆ ಆ ಹುಡುಗಿ. ಅವಳಾಯಿತು. ಅವನಾಯಿತು. ನಮಗೇಕೆ ಆ ಚಿಂತೇಂತ ಇದ್ರೆ, (ಕಣ್ಣೀರೊರಸಿ ಕೊಳ್ಳುತ್ತಾ) ಮಗನಿಗೆ....

(ಅನಂತಮೂರ್ತಿಯ ಪ್ರವೇಶ)

**ಅನಂತ** : ಅಮ್ಮಾ

**ಸೀತಾಬಾಯಿ** : ವೆಂಕಕ್ಕ-ಮಗು ತಾನೇ ಬಂದ ನೀವು ನೋಡಬೇಕು ಅಂದಿರಲ್ಲ.

**ವೆಂಕಕ್ಕ** : ಇವನೇ ಮಗನೇ? ಸಣ್ಣ ಮಗುವಾಗಿದ್ದಾಗ ನೋಡಿದ್ದು. ಈಗ ದೊಡ್ಡವನಾಗಿದ್ದಾನೆ. ಗುರುತು ಹಿಡಿಯೋಕೇ ಆಗೋಲ್ಲ. ಸೀತಾಬಾಯಿ, ಏನೂ ಚಿಂತಿಸಬೇಡಿ. (ನಗುತ್ತ) ಮೊದಲು ಹುಟ್ಟೋ ಮಗು ಹೆಣ್ಣಾಗಿ ಹುಟ್ಟಬೇಕು. ಬಹಳ ಹೊತ್ತಾಯಿತು, ನಾನು ಬರುತ್ತೇನೆ.

**ಸೀತಾಬಾಯಿ** : ಹಣೆಗೆ ಕುಂಕುಮವಿಟ್ಟುಕೊಂಡು ಹೋಗಿ (ಎನ್ನುತ್ತಾ ಕುಂಕುಮ ಎಲೆ ಅಡಿಕೆ ಕೊಟ್ಟು ಕಳುಹಿಸುವರು.)

(ವೆಂಕಕ್ಕ ಹೊರಟು ಹೋಗುವರು)

**ಅನಂತ** : ಯಾರಮ್ಮಾ ಅದು. ಅವರ ಆಶೀರ್ವಾದ ಅಷ್ಟೊಂದು ಕಠಿಣವಾಗಿದೆಯಲ್ಲ. ಇರಲಿ. ಅಮ್ಮಾ ರಾತ್ರಿ ಪಾಠಶಾಲೆಯಲ್ಲಿ ಈವತ್ತು ನನ್ನ ಸರದಿ. ಬೇಗ ಊಟಕ್ಕೇರ್ಪಾಡು ಮಾಡು. ಊಟ ಮಾಡಿಕೊಂಡು ಹೋದರೆ ರಾತ್ರಿ ಅಲ್ಲೇ ಮಲಗಲು ಸುಲಭವಾಗುತ್ತೆ.

**ಸೀತಾಬಾಯಿ** : ನಿನ್ನಿಷ್ಟ. ಹೀಗೆಯೇ ಎಷ್ಟು ದಿನ ಬೇಕಾದರೂ ಇರು, ತಿಳಿಯದವರಿಗಾದರೆ ಹೇಳಬಹುದು. ನಿನ್ನಂಥವರಿಗೆ...

**ಅನಂತ** : ಅಮ್ಮಾ! ಬೇಗ ಬಡಿಸುತ್ತೀಯೋ ಇಲ್ಲವೋ? ಒಪ್ಪೊತ್ತು ಉಪವಾಸವಿದ್ದ ಮಾತ್ರಕ್ಕೆ ಏನೂ ಮುಳುಗಿಹೋಗೋದಿಲ್ಲ. ಈ ದಿನ ಉಪವಾಸವಿದ್ದರೆ ಆಯಿತು.

**ಸೀತಾಬಾಯಿ** : ಬೇಡಪ್ಪಾ, ಬೇಡ. ತಿಳಿಯದೆ ಹೇಳಿಬಿಟ್ಟೆ. ಉಪವಾಸಾನೂ ಇರ್ತೀನೆನ್ನುತ್ತೀ.

ಇನ್ನೂ ಏನಾದರೂ ಹೇಳಿದರೆ ಸನ್ಯಾಸಿಯಾಗಿ ಕಾವಿಶಾಟಿ ಉಟ್ಟು ಎಲ್ಲಾದರೂ ಮಠಗಿಠ ಇದ್ದರೆ ಹುಡುಕಿಕೊಂಡು ಹೋಗ್ತೇನೆನ್ನುವೆ. ಕಾಲ ಹೀಗೇ ಇರೋಲ್ಲ. ನಿನ್ನನ್ನೇಕೆ ಅನ್ನಬೇಕು ಹೇಳು. ಎಲ್ಲಾ ನನ್ನ ಹೊಟ್ಟೇ ಪುಣ್ಯ.

**ರಾಮರಾಯ :** (ಒಳಗಿನಿಂದ) ಅನಂತಾ! ಇಲ್ಲಿ ಬಾ. ಅಲ್ಲೇನು ತರ್ಕ?

**ಅನಂತ :** ಇಗೋ ಬಂದೇಪ್ಪ. (ಹೊರಟು ಹೋಗುವವನು)

(ಸರೋಜ ಪ್ರವೇಶಿಸುವಳು)

**ಸೀತಾಬಾಯಿ :** ಒಳ್ಳೇ ವೇಳೆ, ನೀನೇ ಬಂದೆ ಬೇಗ ಊಟ ಮಾಡಿಕೊಂಡು ಅನಂತು ಎಲ್ಲಿಗೋ ಹೋಗಬೇಕಂತೇಮ್ಮ. ನೋಡಿ ಅವನಿಗೇನು ಬೇಕೋ ಮಾಡುಹೋಗು.

(ತೆರೆ ಬೀಳುವುದು)

(ಕೊಠಡಿಯಲ್ಲಿ ಸೀತಾರಾಮಯ್ಯನವರು ಕುಳಿತಿದ್ದಾರೆ)

**ಸೀತಾರಾಮಯ್ಯ :** ಅನಂತಾ, ಏನೋ ಅದು ಚರ್ಚೆ?

**ಅನಂತ :** ಏನೂ ಇಲ್ಲಾಪ್ಪ, ರಾತ್ರಿ ಪಾಠಶಾಲೆಯಲ್ಲಿ ಈವತ್ತು ನನ್ನ ಸರದಿ. ಬೇಗೆ ಹೋಗಬೇಕೂಂದುದಕ್ಕೆ ಅಮ್ಮ ಏನೋ ಹೇಳಲು....

**ಸೀತಾರಾಮ :** ಸರಿ, ಸರಿ, ಅವಳಾಡಿದ ಮಾತುಗಳಲ್ಲಿ ಒಂದೆಡರು ನನ್ನ ಕಿವಿಗೂ ಬಿದ್ದವು. ಅದೇನೆಂದು ಕೇಳೋಣವೆಂದೇ ನಿನ್ನನ್ನಿಲ್ಲಿಗೆ ಕರೆದೆ. ನೀನು ಹೇಳುವುದೆಲ್ಲಾ ಸರಿಯೇ. ಆದರೆ ಮೊದಲಿನ ಹಾಗೆಯೇಂತ ತಿಳಿದುಕೊಂಡು ಜನಸೇವೆ ಮಾಡ್ತಾ ನೀನಿದ್ದರೆ ಒಂದು ಹೆಣ್ಣನ್ನು ಮದುವೆಯಾಗಿ ಅದನ್ನು ಮನೆಗೆ ಕರೆತರಬೇಕೇಕೆ? ಆ ಹುಡುಗಿಯ ಸಹನೆಯನ್ನು ಕಂಡು ನನಗೆ ಆಶ್ಚರ್ಯವೆನಿಸುತ್ತೆ. ಎಷ್ಟೊಂದು ಮರ್ಯಾದೆ! ಎಷ್ಟು ವಿನಯ!! ಗಾಂಭೀರ್ಯ!! ಆ ಹುಡುಗಿಯ ಧ್ವನಿ ಹೇಗಿದೆಯೆಂಬುದು ಕೂಡ ನಾನಿದುವರೆಗೂ ಕೇಳಿಲ್ಲ. ನಾನಿರುವಾಗ ಅವಳೇನಾದರೂ ಮಾತನಾಡಿದರಷ್ಟೇ? ಯಾರು ಮಾಡಿದ ಪುಣ್ಯ ವಿಶೇಷವೋ ಇಂಥಾ ಗುಣವತಿಯಾದ ಹುಡುಗಿ ನಮಗೆ ದೊರೆತಿದ್ದಾಳೆಂದು ನಾನು ಆನಂದ ಸಾಗರದಲ್ಲಿ ಮುಳುಗಿದ್ದೇನೆ. ನೀನಾದರೆ ಮದುವೆಯಾಗಿಯೂ ಬ್ರಹ್ಮಚಾರಿ ಜೀವನ ನಡೆಸಬೇಕೆನ್ನುವೆ. ನಿನ್ನನ್ನು ಕೇಳದೆ ಏನೂ ಮಾಡಿ ಬಿಡಲಿಲ್ಲವಲ್ಲ? ಏಕೆ ಹೀಗಿದೀ ಎಂಬುದಾದರೂ ನನಗೊಬ್ಬನಿಗಾದರೂ ತಿಳಿಯಬೇಡವೇ?

**ಅನಂತ :** (ವಿನಯದಿಂದ) ಅಪ್ಪಾ! ನೀವು ಪ್ರಸ್ತಾಪ ಮಾಡುವ ಮೊದಲೇ ಈ ವಿಷಯವನ್ನು ನಾನೇ ನಿಮಗೆ ತಿಳಿಸಬೇಕಾದದ್ದು ನನ್ನ ಕರ್ತವ್ಯ. ಹಾಗೆ ಏಕೆ ಹೇಳದಿದ್ದೆನೆಂಬುದನ್ನು ನನ್ನ ಬಾಯಿಂದ ಕೇಳಿದ ಮೇಲೆ ನಿಮಗೇ ತಿಳಿಯುವುದು. ಕಪ್ಪೊಂದ್ರೇ ಯಾವಾಗಲೂ ನನಗೊಂದು ಬಗೆ ಜಿಗುಪ್ಸೆ. ಅಪ್ಪಾ! ಕಾರಣವಿಲ್ಲದೇ ಜಿಗುಪ್ಸೆ. ಭ್ರಮೆ, ಮನಸ್ಸಿಗೆ ಬೇಸರ. ಕಾರಣವಿಲ್ಲದೆ ಈ ಮನೋಭ್ರಾಂತಿಯನ್ನೇ ದೊಡ್ಡದಾಗಿ ತಿಳಿದು "ಈ ಹೆಣ್ಣು ನನಗೆ

ಬೇಡ"ವೆಂದು ಹೇಳಲು ನನಗೆ ಇಷ್ಟವಿಲ್ಲ. ನನ್ನ ಬುದ್ಧಿ ಬಲದಿಂದ ಮನೋಶಕ್ತಿಯಿಂದ ಆ ಭ್ರಮೆಯನ್ನು ಹೋಗಲಾಡಿಸಬಹುದೆಂಬ ಭಾವನೆಯಿಂದ ನಿಮಗೆ ಕೂಡ ತಿಳಿಸದೆ ಸುಮ್ಮನಿದ್ದೆ. ಈಗ ತಿಳಿಯಿತು. ಮನಸ್ಸನ್ನು ಜೈಸುವುದು ಅಷ್ಟು ಸುಲಭವಲ್ಲವೆಂಬುದು. ಈ ಜಿಗುಪ್ಸೆ ಇನ್ನೂ ನನ್ನನ್ನು ಬಿಟ್ಟು ಅಗಲಲಿಲ್ಲ. ಜಿಗುಪ್ಸೆಯಿದ್ದುಕೊಂಡಿರುವಾಗ ಅವಳೊಡನೆ ಹೇಗೆ ವ್ಯವಹರಿಸುವುದು? ಮನಸ್ಸಿಗೊಗ್ಗದ ಕೆಲಸದಿಂದ ಸುಖವುಂಟಾಗುವುದೇ? ಧರ್ಮ ಸಂಕಟಕ್ಕೆ ಸಿಕ್ಕಿ ನಾನು ದಾರಿ ಕಾಣದೆ ಇದ್ದೇನೆ. ಇದೇ ನನ್ನ ಸ್ಥಿತಿ.

ಸೀತಾರಾಮಯ್ಯ : "ಅನಂತಾ! ಏನಿದು! ಬಾವಿ ತೋಡ ಹೋದರೆ ಭೂತ ಬಂದಂತಿದೆ ನಿನ್ನ ಮಾತು! ಬಣ್ಣವನ್ನು ನೋಡಿ ಏಕೆ ಹೀಗೆ ಅಂಜುವೆ? ಬಣ್ಣವೆಂಬುದೇನು? ಅದೊಂದು ವಸ್ತುವೇ? ಅದಕ್ಕೆಂದೇ ಪ್ರತ್ಯೇಕವಾದೊಂದು ರೂಪವಿದೆಯೇ? ನಾವು ಮೇಲೆ ಹಾರಿದ ಮಾತ್ರಕ್ಕೆ ಕಾಮನ ಬಿಲ್ಲನ್ನು ಹಿಡಿಯ ಬೇಡವೇ? ವಿಶಾಲವಾದಾಕಾಶದಲ್ಲಿ ನೀರಿನ ಕಣಗಳೂ ಬೆಳಕಿನ ಅಣುಗಳೂ ಸಂಗಮವಾಗಿ ಆ ಗೂಡಿನಿಂದುತ್ಪನ್ನವಾಗುವ ಆ ಬಣ್ಣದ ತೋರಿ ಪ್ರಕಾಶದಲ್ಲೇ ಅಂತ್ಯವಾಗುವ ಆ ಜ್ಯೋತಿಯು ಸಮುದ್ರದಲ್ಲೇ ಹುಟ್ಟಿ ಸಮುದ್ರದಲ್ಲೇ ಲಯವಾಗುವ ಅಲೆಗಳಂಥದ್ದು ತಾನೇ ಅದೂ. ಅದಿರಲಿ ರೂಪವಿದ್ದರೇನು? ಗುಣವಿಲ್ಲಾಂತ ಹೇಳ್ತಾರಲ್ಲಾ ಹಾಗೆ ಬಣ್ಣಕ್ಕೂ ಗುಣಕ್ಕೂ ಯಾವ ಸಂಬಂಧ? ಒಂದು ವಸ್ತುವಿನ ಬಣ್ಣದಿಂದಲೇ ಗುಣವನ್ನು ನಿರ್ಧರಿಸುವುದು ನ್ಯಾಯವೇ? ಬಣ್ಣವಲ್ಲದ ಮಾತ್ರಕ್ಕೆ ಪದಾರ್ಥಗಳಿಗೇನು ಕಡಿಮೆ? ತೂಕವೇ? ರುಚಿಯೇ? ವಾಸನೆಯೆ? ಮಲ್ಲಿಗೆ ಹೂ ಕತ್ತಲಿನಲ್ಲಿಯೂ ಸುವಾಸನೆ ಬೀರುತ್ತದೆ. ಸಕ್ಕರೆ ಸಿಹಿಯಾಗಿರುತ್ತೆ. ಕಣ್ಣಿಗೆ ಕಾಣದಿರುವುದು ಅವುಗಳ ಬಣ್ಣ ಮಾತ್ರವಷ್ಟೇ? ಬೆಳಕಿಲ್ಲದಿದ್ದಾಗ ಪದಾರ್ಥಗಳಿಗೆ ಬಣ್ಣವೆಲ್ಲಿಯದು? ಕತ್ತಲಲ್ಲಿ ಕಣ್ಣಿದ್ದೂ ಏನು ಪ್ರಯೋಜನ? ಬೆಳಕಿಲ್ಲದಿರುವಾಗ ಎಲ್ಲರೂ ಕುರುಡರೇ! ಮನಸೂ ಕಣ್ಣೂ ಪ್ರಕಾಶವೂ ಪದಾರ್ಥವೂ ಕಲೆತರೆ ತಾನೇ ಬಣ್ಣವೆಂಬ ಒಂದು ನೆನಪುಂಟಾಗುತ್ತೆ. ಅದು ನೆನಪೇ! ಅದನ್ನು ಕನಸೆಂದರೂ ಏನೂ ತಪ್ಪಲ್ಲ. ಎಚ್ಚರದಲ್ಲಿ ಬೆಳಕಿನಲ್ಲಿ ಕಾಣುವ ಈ ಕನಸಿನಲ್ಲಿ ಕಪ್ಪೇನು? ಬಿಳುಪೇನು? ಸರೋಜಳ ಕಪ್ಪುಬಣ್ಣ ಅವಳ ರೂಪವನ್ನು ಕೆಡಿಸಿ ಅವಳ ಗುಣವನ್ನು ಕೆಡಿಸಿದೆಯೇನು?

ಅನಂತ : ಅಪ್ಪಾ! ಹೀಗೆ ಮಾತನಾಡಿದ್ದನ್ನು ಕೇಳಿ ಎಷ್ಟು ದಿನಗಳಾದವು?

ಸೀತಾರಾಮಯ್ಯ : ಮಗೂ! ಇವೆಲ್ಲಾ ನಿನಗೆ ತಿಳಿಯದ ಹೊಸ ವಿಷಯವಲ್ಲ. ಮನುಷ್ಯರಲ್ಲಿರುವ ಬಣ್ಣಭೇದವು ಚರ್ಮದ ಮೇಲೆ ಮಾತ್ರವೇ ಅಲ್ಲವೇ? ಸ್ವಲ್ಪ ಚರ್ಮ ಕಿತ್ತುಹೋಗಿ ರಕ್ತ ಬಂದರೆ ಒಂದೇ ಕೆಂಪುಬಣ್ಣವಲ್ಲದೆ ಮೈ ಚರ್ಮದ ಹಾಗೇನೇ ಒಳಗೂ ರಕ್ತವು ಇದೆಯೇ? ಹೊರಚರ್ಮ ಬೆಳ್ಳಗಿದ್ದರೂ ಕಪ್ಪಾಗಿದ್ದರೂ ಹಳದಿಯಾಗಿದ್ದರೂ ರಕ್ತ ಕೆಂಪಲ್ಲದೆ ಬೇರೆ ಬಣ್ಣಬೇ? ಇದು ಮನುಷ್ಯರಲ್ಲಿ ಮಾತ್ರವಲ್ಲ. ಜೀವ ಜಂತುಗಳಿಗೆಲ್ಲಾ ಒಂದೇ ಬಣ್ಣದ ರಕ್ತತಾನೇ. ಈ ದೇಹವನ್ನು ಚರ್ಮದಿಂದ ಮುಚ್ಚಿ. "ಬಿಳುಪು ಶ್ರೇಷ್ಠ

ಕಪ್ಪು ನಿಕೃಷ್ಟ, ಹಳದಿ ಕೀಳು" ಎಂದೆಲ್ಲಾ ಎಂತಹ ಮಾತುಗಳು? ಭ್ರಾಂತಿಗಳು? ನಿಷ್ಠೂರಗಳು? ಈ ವರ್ಣದ ಹೆಸರಿನಲ್ಲಿ ನಡೆಯುವ ಅನ್ಯಾಯಗಳೆಷ್ಟು?

**ಅನಂತ :** ಅಪ್ಪಾ! ಏನೆಂದಿರಿ; ನನ್ನ ಜಿಗುಪ್ಸೆಗೂ ಕೂಡ ಒಂದು ಬಗೆಯ ಮಹತ್ವವಿರುವಂತೆ ತೋರುವುದಿಲ್ಲ? ಅದೇ ಅಲ್ಲವೇ ಈ ರೀತಿ ಮಾತನಾಡುವಂತೆ ನಿಮ್ಮನ್ನು ಪ್ರೇರೇಪಿಸಿದದ್ದು?

**ಸೀತಾರಾಮಯ್ಯ :** ಅದಿರಲಿ, ಅನಂತಾ, ದೂಷಿಸುವುದನ್ನು ಬಿಟ್ಟು ನಾವು ಕಪ್ಪು ವರ್ಣವನ್ನು ಕೈಮುಗಿದು ಕರೆಯಬೇಡವೇ! ಅವತಾರಗಳಲ್ಲಿ ಭಗವಂತನು ಕಪ್ಪನ್ನು ದೂರೀಕರಿಸಿ ಜನಿಸಲಿಲ್ಲವಲ್ಲ? ಯೋಚಿಸಿದರೆ ಎಲ್ಲವೂ ತಿಳಿಯುವುದು. ಕಪ್ಪುಬಣ್ಣಕ್ಕೆ ಭಗವಂತನಿತ್ತ ಪ್ರಾಧಾನ್ಯತೆ. "ಕೃಷ್ಣ"ನಾಗಿ ಜನಿಸಿದನು. ಬಣ್ಣದಿಂದಲೇ ಆ ಹೆಸರು. "ಕೃಷ್ಣ"ನೆಂದರೇನರ್ಥ? ಕಪ್ಪಾದವನೆಂದರೇನರ್ಥ? ಇದು ನನ್ನ ಅಭಿಪ್ರಾಯವೇ? ಅಥವಾ ನವೀನ ಅಭಿಪ್ರಾಯವೇ? ಈ ವಿಷಯದಲ್ಲಿ ಅವನನ್ನರಿತವರು ಹೇಳುವುದನ್ನು ಕೇಳಿ ನೋಡು. ಅವನನ್ನು ಕಾಣಲು ಮನಸ್ಸಿನಲ್ಲೇ ಕೊರಗಿ ಹಾತೊರೆಯುತ್ತಿದ್ದ ಗೋದೆಗೆ ಶ್ರೀಕೃಷ್ಣನು "ನೀಲಿವರ್ಣ" ಅವಳ ತಂದೆಯಾದ ಪೆರಿಯಾಳ್ವಾರಿಗೆ ಪರಮಾತ್ಮನು "ನೀಲಮೇಘಶ್ಯಾಮ" ಅವನ ಬಣ್ಣಕ್ಕೆ ಇಷ್ಟು ಸಾಕ್ಷಿಗಳು ಸಾಲವೇ? ಪುರುಷರಲ್ಲಿ ಕಪ್ಪಾಗಿ ಹುಟ್ಟಿ ಅವನು ಘನತೆಗೇರಿದ. ಸ್ತ್ರೀಯರಲ್ಲಿ ಕಪ್ಪಾಗಿ ಹುಟ್ಟಿ ಈ ಜಗತ್ತಿಗೆ ಕೀರ್ತಿ ತಂದವಳಾರು; ಎಂಬ ಸಂಶಯವೇ? ಅವಳ ನಾಮಸ್ಮರಣೆ ಮಾತ್ರದಿಂದಲೇ ನನ್ನ ಮೈರೋಮಾಂಚವಾಗುತ್ತದೆ. ಅವಳ ಪಾಂಡವರ ಪ್ರೀತಿಯ ಪತ್ನಿ "ಪಾಂಚಾಲಿ", ಮಹಾಭಾರತದ ನಾಯಕಿ. "ದ್ರೌಪದಿ" "ಕೃಷ್ಣೆ" ಇವಳ ಬಣ್ಣ ಕಪ್ಪೇ. ಐವರೂ ಮೋಹಿಸಿದ್ದು ಅವಳ ಕಪ್ಪು ಬಣ್ಣಕ್ಕೆ, ಭಾರತಯುದ್ಧ ನಡೆದದ್ದು ಅವಳ ನಗುವಿನಲ್ಲಿ, ಅವಳು ರೂಪದೇವತೆ. ಪತಿವ್ರತಾ ಶಿರೋಮಣಿ, ಇಂದೂ ಪೂಜಿಸಲ್ಪಡುತ್ತಿರುವ ಶಕ್ತಿದೇವತೆ. ಅವಳನ್ನು ನಂಬಿದ ನಮ್ಮ ಜನರು ಬೆಂಕಿಯ ಮೇಲೆ ಕೂಡ ಸುಲಭವಾಗಿ ನಡೆಯುವರಲ್ಲ. ಅನಂತಾ ಕಪ್ಪು ದೈವೀಕ ಬಣ್ಣವೆಂದರೆ ಅದು ನನ್ನ ಕಲ್ಪನೆಯೆನ್ನುವೆಯಾ?

**ಅನಂತ :** ಅಪ್ಪಾ! ಈ ವಿಷಯವಾಗಿ ನೀವಿಷ್ಟು ನೊಂದ ಮನಸ್ಸಿನಿಂದ ಮಾತಾನಾಡುವಿರೆಂದು....

**ಸೀತಾರಾಮಯ್ಯ :** ಅನಂತಾ! ನನ್ನ ಮಾತಿಗೆ ಉತ್ತರ ಕೊಡು. ನಮ್ಮ ದೇಶದ ಜನಗಳ ಚರ್ಮದ ಬಣ್ಣಕ್ಕೆ ತಕ್ಕಂತಹ ಒಂದು ಧ್ವಜವನ್ನ ತಯಾರಿಸಿದರೆ ಅದರಲ್ಲಿ ಎಷ್ಟು ಭಾಗ ಕಪ್ಪಗಿರಬಹುದು? ನಮ್ಮ ದೇಶದಲ್ಲಿ ಎಷ್ಟು ಜನ ಕಪ್ಪಾಗಿರುವರು? ಅವರನ್ನೆಲ್ಲಾ ಕಂಡರೆ ನಿನಗೆ ಸರಿಬೀಳುವುದಿಲ್ಲವೇ? ಅವರ ಹಿತಕ್ಕಾಗಿ ನೀನು ದುಡಿಯುತ್ತಿಲ್ಲವೇ? ನೀನು ರಾತ್ರಿ ಪಾಠಶಾಲೆ ನಡೆಸುತ್ತಿದೀಯಲ್ಲ, ಅಲ್ಲಿಗೆ ಬರುವವರೆಲ್ಲರೂ, ಐರೋಪ್ಯರೇ? ಈ ಸ್ವದೇಶೀ ದೈವೀಕ ಕಪ್ಪುಬಣ್ಣ ನಿನ್ನ ಹೆಂಡತಿಗಿರುವುದೇ ದೊಡ್ಡ ಅಕ್ಷೇಪಣೆಯೆ? ಮಗೂ! ದೇಶಕ್ಕೊಂದು ನ್ಯಾಯ, ಮನೆಗೊಂದು ನ್ಯಾಯ ಎಲ್ಲಾದರೂ ಉಂಟೇ?

**ಅನಂತ :** ಅಪ್ಪಾ! ನೀವು ಹೇಳುವುದು ಸರಿಯಲ್ಲವೆನ್ನಲು ನನಗೆ ಶಕ್ತಿಯಿದೆಯೇ? ಹೇಳುವುದೂ ಯುಕ್ತವೇ? ನನ್ನ ವಿವೇಕಕ್ಕೂ ಅಭಿಪ್ರಾಯಕ್ಕೂ ಇರತಕ್ಕ ಜಂಜಾಟ ತೀರದವರೆಗೂ ನನಗೆ ಸುಖವೆಂಬುದೇ ಇಲ್ಲ. ಅದು ತೀರಲು ಒಂದು ಉಪಾಯ ಹೇಳಿ. ನನ್ನ ಬುದ್ಧಿಯನ್ನು ಮಂಕುಗೊಳಿಸಿದ ಈ ಭ್ರಾಂತಿ ಎಲ್ಲಿಂದ ಹೇಗೆ ಬಂತು?

**ಸೀತಾರಾಮಯ್ಯ :** ಅನಂತಾ! ಶರೀರಕ್ಕೊದಗುವ ರೋಗಗಳನ್ನು ನಿವಾರಿಸುವ ಮಾರ್ಗ ಒಂದಲ್ಲ, ಎಷ್ಟೋ ಇವೆ. ವೈದ್ಯರು ದೇಹದ ಒಳಭಾಗವನ್ನು ಅಂಗೈಯಂತೆ ನೋಡಿಬಿಡುತ್ತಾರೆ. ಇತರರಿಗೂ ತೋರಿಸುತ್ತಾರೆ. ಗಂಟಲನ್ನು ಸೀಳಿ ಅದರಲ್ಲಿರುವ ತಪ್ಪನ್ನು ತಿದ್ದಿ ಅದನ್ನು ಪುನಃ ಮುಚ್ಚಿಬಿಡುತ್ತಾರೆ. ಅದರಂತೆಯೇ ಸ್ಮರಣೆಯನ್ನು ಭೇದಿಸಿ ಮನಸ್ಸಿನಲ್ಲಿರುವ ಚಿಂತೆಗಳನ್ನೆಲ್ಲಾ ದೂರ ಮಾಡಿ ಹೃದಯ ಶಾಂತಿಯನ್ನುಂಟು ಮಾಡುವುದು ಸಾಧ್ಯವೇ? ಮನಸ್ಸಿಗುಂಟಾದ ರುಚಿ ವಾಸನೆಗಳನ್ನು ಯಾವುದನ್ನವಲಂಬಿಸಿದೆ ಯೆನ್ನುವುದು ನಿರ್ಧಾರವಾಗಿ ಹೇಳುವುದು ಸಾಧ್ಯವೇ? ಕೆಲವರು "ಸಿಹಿ" ಸೇರುವುದಿಲ್ಲ ವೆನ್ನುವರು. ಆ "ಸೇರುವುದಿಲ್ಲ"ವೆನ್ನುವುದು ಎಲ್ಲಿಂದ ಹೇಗೆ ಬಂತು? ಕಂಡುಹಿಡಿದವರಾರು? ಅವರೆಲ್ಲರಿಗೂ ಸಕ್ಕರೆ ಕಹಿಯಾಗಿರುವುದೇ? ಕೆಲವರಿಗೆ ಮಲ್ಲಿಗೆ ಹೂ ವಾಸನೆ ಕಂಡರೆ ತಲೆನೋವು ಬರುತ್ತೆ. ಅವರಿಗೆ ಮಲ್ಲಿಗೆ ಹೂ ಸುವಾಸನೆಯಿಲ್ಲದೆ ದುರ್ವಾಸನೆಯಾಗಿರು ತ್ತದೆಯೇ? ಕಪ್ಪು ಬಣ್ಣವನ್ನು ಕಂಡರೆ ನಿನಗೇನಾಗುತ್ತೆ? ನೀನು ಮಗುವಾಗಿರುವಾಗ ನಿಮ್ಮಮ್ಮ ನಿನ್ನ, "ಕತ್ತಲಲ್ಲಿ ಹೋಗಬೇಡ. ಕತ್ತಲಲ್ಲಿ ಹೋಗಬೇಡ" ಎಂದು ಹೇಳುತ್ತಲೇ ಇದ್ದಳು. ನಮ್ಮ ಮನೆಯಲ್ಲೊಂದು ಕರೀ ಬೆಕ್ಕಿತ್ತು. ನೀನು ಅಳದೆ ಮಲಗಬೇಕಾಗಿದ್ದರೆ, "ಕರೀಬೆಕ್ಕು ಬಂದು ಅನಂತನ್ನ ಹಿಡಿದುಕೋ" ಎಂದು ಹೆದರಿಸುವಳು. ನಿದ್ರೆ ಮಾಡುತ್ತಿದ್ದೆಯೋ ಇಲ್ಲವೋ, ಬೇಗ ಅಳು ನಿಲ್ಲುತ್ತಿತ್ತು. ಆ ಕರೀಭೂತ ಇನ್ನೂ ನಿನ್ನನ್ನು ಬಿಟ್ಟಿಲ್ಲವೇ?

**ಅನಂತ :** ಅಪ್ಪಾ! ಇಂದಿನ ನಿಮ್ಮ ಸಂಭಾಷಣೆಯಲ್ಲಿ ಅಡಕವಾಗಿರುವ ನೂತನ ಶಕ್ತಿಯು ನನ್ನನ್ನು ಪರವಶನನ್ನಾಗಿ ಮಾಡಿದೆ. ಆದರೆ ನನ್ನ ಭ್ರಮೆಯು ಈಗಲೇ ನೀಗಿತೆಂದು ಹೇಳಲಾಗುವುದಿಲ್ಲ. ನನ್ನ ಮನಸ್ಸು ಪರಿಷ್ಕಾರ ಹೊಂದುವವರೆಗೆ...

**ಸೀತಾರಾಮಯ್ಯ :** ನಿನ್ನಿಷ್ಟದಂತಿರು, ಇದರ ವಿಷಯದ ಸತ್ಯಾಂಶವು ನಿನಗೇ ವಿಶದವಾಗಲಿ. ಸ್ವತಃ ಅರಿಯುವುದರಷ್ಟು ಸತ್ಯ ಬೋಧನೆಯು ಬೇರಾವುದೂ ಇಲ್ಲ. ಸ್ವತಃ ತಿಳಿಯುವಂತಹ ಸುಖಾನಂದ ಮತ್ತಾವುದೂ ಇಲ್ಲ. ಅನಂತಾ! ಹೊತ್ತಾಯಿತು. ಏಕೆ ಹೀಗೆ ಭ್ರಮೆ ಹಿಡಿದವನಂತೆ ನಿಲ್ಲುವೆ. ಸುಮ್ಮನೆ ಚಿಂತಿಸಬೇಡ. ಹೋಗಿ ನಿನ್ನ ಕೆಲಸವನ್ನು ನೋಡು. ಹೋಗುತ್ತಾ ಹೋಗುತ್ತಾ ನೋಡಿ ಕೊಳ್ಳೋಣ. (ಎಂದು ಹೊರಡುವನು. ಅನಂತನು ಯೋಚನಾ ಮಗ್ನನಾಗಿ ಕಲ್ಲಿನಂತೆ ನಿಂತಿರುವನು. ತಾಯಿ ಪ್ರವೇಶ)

**ಸೀತಾಬಾಯಿ :** (ತಲೆ ನೇವರಿಸುತ್ತಾ) ಮಗೂ ಊಟಮಾಡುವುದಿಲ್ಲವೇ?

**ಅನಂತ :** (ಎಚ್ಚೆತ್ತು) ಅಮ್ಮಾ! ಬಹಳ ಹೊತ್ತಾಯಿತು. ಊಟಕ್ಕೆ ಕುಳಿತರೆ ಇನ್ನಿಷ್ಟು ಹೊತ್ತಾಗುತ್ತೆ. ಸಂಬಳವಿಲ್ಲದೆ ಕೆಲಸ ಮಾಡುತ್ತೇನೆಂದು ಇಷ್ಟಬಂದಾಗ ಹೋದರೆ ಆಗುತ್ತೇನಮ್ಮಾ? ನಡೆದುಕೊಂಡು ಹೋದರೆ ಹೊತ್ತಿಗೆ ಸರಿಯಾಗಿ ಹೋಗುವುದಕ್ಕಾಗು ವುದಿಲ್ಲ. ಸೈಕಲ್ಲಿನಲ್ಲಿ ಹೋಗುತ್ತೇನೆ. ಒಂದು ವೇಳೆ ರಾತ್ರಿ ನಾನು ಮನೆಗೆ ಬರದಿದ್ದರೆ ನೀನು ಮಲಗದೆ ಕೂತಿರಬೇಡ.

**ಸೀತಾಬಾಯಿ :** (ಗಾಭರಿಯಿಂದ) ಅನಂತು ಏನಂದೆ? ಉಪವಾಸಾನೇ ಹೋಗ್ತೀಯಾ? ಯಾಕಪ್ಪಾ, ಕಲಸಿ ಬಟ್ಟಲಲ್ಲಿ ತರುತ್ತೇನೆ, ಸ್ವಲ್ಪ ಇರು. ರಾತ್ರಿ ಹೊತ್ತು ಉಪವಾಸ ಮಲಗಬಾರದು. ಅದೂ ಅಪ್ಪ, ಅಮ್ಮ ಇರೋರು.

**ಅನಂತ :** ಕರ್ತವ್ಯಲೋಪಕ್ಕೆಡೆಗೊಡಬಾರದಾದ್ದರಿಂದ ದಯವಿಟ್ಟು ಕ್ಷಮಿಸಮ್ಮಾ! ಅಲ್ಲೇ ಹೋಟಲಿನಲ್ಲಿ ಸ್ವಲ್ಪ ತಿಂಡಿ ತಿನ್ನುತ್ತೇನೆ. ಚಿಂತಿಸಬೇಡಿ. (ಎಂದು ಹೊರಡುವನು)

**ಸೀತಾಬಾಯಿ :** (ಅವನು ಹೋದೆಡೆಯೇ ನೋಡುತ್ತಾ) ದೇವರು ನಿನಗೆ ಒಳ್ಳೆ ಬುದ್ಧಿ ಕೊಟ್ಟು ಕಾಪಾಡಲಿ, ತಾಯೀ! ಆ ಚರಕ ತಾರಮ್ಮ ಬಿಡುವಾಗಿದ್ದೇನೆ. ಏನೋ ಮನಸ್ಸಿಗೆ ಶಾಂತಿದೊರೆಯಲು ಮಹಾನುಭಾವ ಸಾಧಕಯಂತ್ರ ಒದಗಿಸಿದ್ದಾನೆ.

(ಸರೋಜ ಒಳಗಿನಿಂದ 'ಬಂದೆ ಇದೋ ತಂದೆ' ಎಂದು ಹೇಳುತ್ತಾ ಚರಕಾ ಹುಂಜಿಗಳೊಡನೆ ಬರುವಳು ಅದನ್ನು ಅತ್ತೆಯ ಮುಂದಿಡುವಳು.)

**ಸೀತಾಬಾಯಿ :** (ಮುಖವನ್ನು ನೋಡಿ) ಏಕಮ್ಮಾ! ಬಹಳ ಗಾಭರಿಗೊಂಡಂತಿದೆ?

**ಸರೋಜ :** ಏನೂ ಇಲ್ಲಮ್ಮಾ! ಪುರಾಣದಲ್ಲಿ ಬೃಂದೆಯ ಕಥೆಯಿಲ್ಲವೆ? ಅದನ್ನು ಮಕ್ಕಳಿಗೆ ತಿಳಿಯುವಂತೆ ಸಣ್ಣ ಕಥೆಯಾಗಿ ಅನುವಾದಿಸುತ್ತಿದ್ದೆ. ಆ ಬೃಂದೆಗೆ ಅಪಶಕುನವಾಗುವ ಭಾಗ ಬರುವ ಹೊತ್ತಿಗೆ ಲೇಖಣಿ ತಗುಲಿ ಆ ಸೊಡಿಲು ನನ್ನ ಸೀರೆಯ ಮೇಲೆ ಬಿದ್ದು ದೀಪವಾರಿತು. ಭಗವಂತನ ಇಚ್ಛೆ ಏನಿದೆಯೋ

**ಸೀತಾರಾಮಯ್ಯ :** ಹೌದೇ! ಕೃಷ್ಣ ಕಷ್ಣಾ!! ನಡೀ ತಾಯಿ ಪುನಃ ಪೂಜೆ ಮಾಡಿಬಿಡೋಣ. ದೇವರು ಎಲ್ಲರನ್ನೂ ಸುಖವಾಗಿರಿಸಲಿ. ಅಯ್ಯೋ! ಭಗವಂತಾ! ಎಂತಹ ಅಪಶಕುನ! (ಎಂದು ಒಳಕ್ಕೆ ಹೋಗುವರು)

(ಸ್ವಲ್ಪ ಹೊತ್ತಿನಲ್ಲಿ ಸೀತಾರಾಮಯ್ಯನು ಗಾಭರಿಯಿಂದ ಓಡಿ ಒಂದು ಮಂಚ ಸರಿಪಡಿಸುವನು. ನಾಲ್ಕು ಜನ ಅನಂತನನ್ನು ತಂದು ಮಲಗಿಸುವರು. ಡಾಕ್ಟರ್ ಕೃಷ್ಣ ಮೂರ್ತಿ ಹಿಂದಿನಿಂದ ಬಂದು ಮೈಕೈ ಕಟ್ಟುಗಳನ್ನು ಪರೀಕ್ಷಿಸಿ ಹೊದ್ದಿಸಿ, ಮಲಗಿಸಿ ಮುಂದೆ ಬರುವನು. ಎಲ್ಲರೂ ಮೌನ. ಸೀತಾಬಾಯಿ ಪ್ರವೇಶ ಕೃಷ್ಣಮೂರ್ತಿಗಳು ಆಕೆ

ಬರುತ್ತಿದ್ದಂತೆಯೇ ಮುಂದೆ ಬಂದು)

**ಕೃಷ್ಣಮೂರ್ತಿ** : ಕೂಗಬೇಡಿ, ಗಾಭರಿ ಪಡಬೇಡಿ ; ಅನಂತನ ಹೆಂಡತಿಗೂ ತಿಳಿಸಬೇಡಿ; ಆಕೆ ಎಲ್ಲಿದ್ದಾರೆ.

**ಸೀತಾಬಾಯಿ** : ಏಕೆ? ಏನಾಯ್ತು?

**ಕೃಷ್ಣಮೂರ್ತಿ** : ಗಾಭರಿ ಏಕೆ? ಆಕೆ ಎಲ್ಲಿದ್ದಾರೆ.

**ಸೀತಾಬಾಯಿ** : ಒಳಗೆ ಧ್ಯಾನದಲ್ಲಿದ್ದಾಳೆ.

**ಕೃಷ್ಣಮೂರ್ತಿ** : ಸಂತೋಷ, ಅವಳ ಆ ಪಾತಿವ್ರತ್ಯ, ದೈವಭಕ್ತಿಯೇ ಇಂದು ಅನಂತನನ್ನು ಉಳಿಸಿತು.

**ಸೀತಾಬಾಯಿ** : ಏನು ಸಮಾಚಾರ ಡಾಕ್ಟರೆ (ಎಂದು ಕೂಗುವಳು. ವೈದ್ಯರು 'ಉಷ್' ಎಂದು ಸುಮ್ಮನಿರಹೇಳಿ)

**ಕೃಷ್ಣಮೂರ್ತಿ** : ಯಾವುದೋ ಒಂದು ಮೋಟಾರು ಬಂಡಿಗೂ ಅನಂತನ ಸೈಕಲ್ಲಿಗೂ ಡಿಕ್ಕಿಯಾಗಿ ಅನಂತನಿಗೆ ವಿಪರೀತ ಗಾಯವಾಯ್ತು. ಅಲ್ಲೇ ಹೋಗುತ್ತಿದ್ದ ನಾನು ಸರ್ವೋಪಚಾರಗಳನ್ನೂ ಮಾಡಿ ಕರೆತಂದೆ. ಆತನಿಗಿನ್ನೂ ಪ್ರಜ್ಞೆ ಬಂದಿಲ್ಲ. ನೀವಾರೂ ಎಳ್ಳಷ್ಟೂ ಗದ್ದಲ ಮಾಡಕೂಡದು. ಮಾಡಿದರೆ ಹೃದಯಸ್ತಂಭನದಿಂದ ಅನಂತನೇ ಈ ಲೋಕವನ್ನು ಬೀಡಬೇಕಾದೀತು. ಮೋಟಾರಿನವನದೇನೂ ತಪ್ಪಿಲ್ಲ. ಇವನೇ ಏನೋಚ್ಚಾನದಲ್ಲಿ

....(ಎನ್ನುತ್ತಿದ್ದಂತೆಯೇ ಸೀತಾಬಾಯಿ ಮೂರ್ಛಿತಳಾಗುವಳು. ವೈದ್ಯರು ನೀರು ತರಹೇಳಿ. ಸೀತಾರಾಮಯ್ಯನೊಡನೆ ಉಪಚರಿಸಹತ್ತುವರು.)

-ತೆರೆ-

## ದೃಶ್ಯ ೫

**ಸ್ಥಳ** : (ಸೀತಾರಾಮಯ್ಯನವರ ಮನೆಯ ಕೊಠಡಿಯಲ್ಲಿ ಮಂಚದ ಮೇಲೆ ಅನಂತ ಮಲಗಿದ್ದಾನೆ. ಡಾಕ್ಟರೂ ಸೀತಾರಾಮಯ್ಯನವರೂ ಬರುವರು. ಡಾಕ್ಟರು ಮಂಚದಬಳಿ ಬಂದುನಿಂತು ಅಲ್ಲಿರುವ ಸೀತಾಬಾಯಿಯನ್ನು ನೋಡಿ)

**ಡಾಕ್ಟರ್** : ಅಮ್ಮಾ! ಸ್ವಲ್ಪ ಸರಿದು ನಿಲ್ಲೀಮ್ಮಾ ಗಾಳಿ ಸಲೀಸಾಗಿ ಒಳಗೆ ಬರಲಿ. ದಾರೀಬಿಡಿ. ಸ್ವಾಮೀ! ಇದೊಂದು ಘಾಯತಾನೇ? ಆದರೂ ಬಹಳ ರಕ್ತ ಹೋಗಿದೆ. ತಲೆಗೆ ಸ್ವಲ್ಪ ಏಟು ತಗುಲಿದೆ. ಇದೋ ನೋಡಿ. ಎಷ್ಟು ಆಳಬಿದ್ದಿದೆ. ಇದರಿಂದಲೇ ಮೂರ್ಛೆ, ಮೊದಲು ಘಾಯವನ್ನು ಕಟ್ಟುತ್ತೇನೆ. ರಕ್ತಸ್ರಾವದಿಂದಾದ ದುರ್ಬಲತೆಗೆ.....(ಎಂದು ಹೇಳುತ್ತಾ ಘಾಯಕ್ಕೆ ಬಟ್ಟೆ ಕಟ್ಟುವನು.)

**ಸೀತಾಬಾಯಿ :** (ಕಣ್ಣೀರನ್ನು ಸೆರಗಿನಿಂದ ಒರೆಸಿಕೊಳ್ಳುತ್ತಾ ಗಾಭರಿಯಿಂದ) ಡಾಕ್ಟರ್ , ಏನು ಮಾಡಲಿ ಹೇಳಿ ಮಗು! ಊಟಕೂಡ ಮಾಡದೆ ಹಾಗೇ ಹೋದವನು ಈ ಸ್ಥಿತಿಯಲ್ಲಿ ಮನೆಗೆ ಬಂದಿದ್ದಾನೆ. ಪ್ರಾಣ ಭಯವಿಲ್ಲ ತಾನೇ?

**ಸೀತಾರಾಮಯ್ಯ :** ಒಳಗೆ ಹೋಗು. ಈಗ ಸುಮ್ಮನೆ ಅವರನ್ನು ತೊಂದರೆ ಮಾಡಬೇಡ.

**ಡಾಕ್ಟರ್ :** ಹೆತ್ತ ತಾಯಿಯಲ್ಲವೇ? ಸಂಕಟಪಡುವುದು ಸಹಜತಾನೇ! ಘಾಯವನ್ನು ಕಟ್ಟಿದ್ದೇನೆ. ಇನ್ನು ರಕ್ತ ಬರುವುದಿಲ್ಲ. (ಸ್ವಲ್ಪ ಹೊತ್ತು ಯೋಚಿಸಿ) ಚಿಕಿತ್ಸೆ ನೆನಪಿಗೆ ಬರುತ್ತಿದೆ. ಇವನ ಸ್ಥಿತಿಗೆ ಅದು ಕೈ ಗಂಡ ಚಿಕಿತ್ಸೆ ನೋಡಿ. ನಿಮ್ಮಲ್ಲಿ ಯಾರ ರಕ್ತವಾದರೂ ಇವನ ಮೈ ರಕ್ತಕ್ಕೆ ಹೊಂದಿಕೊಂಡರೆ ಅದನ್ನು ತೆಗೆದು ಕೊಳವೆಯಮೂಲಕ ಇವನ ದೇಹದೊಳಕ್ಕೆ ತುಂಬುವುದು. ಯಾರ ರಕ್ತ ಸರಿಯಾಗಿದೆಯೆಂಬುದನ್ನು ಮೊದಲು ಪರೀಕ್ಷಿಸಬೇಕು. ನಿಮ್ಮ ಸಲಹೆ ಏನು?

**ಸೀತಾರಾಮಯ್ಯ :** ಕೃಷ್ಣಮೂರ್ತಿ! ನನ್ನನ್ನೇನು ಕೇಳುತ್ತೀ! ನಿನ್ನ ಶಾಸ್ತ್ರದ ಅಧಿಕಾರಿ ನೀನು. ಏನು ಮಾಡಬೇಕೋ ಅದನ್ನು ಮಾಡು.

**ಡಾಕ್ಟರ್ :** ಪರೀಕ್ಷೆ ಮಾಡಲು ಸ್ವಲ್ಪ ರಕ್ತವಾದರೆ ಸಾಕು, ಇಲ್ಲಿ ಬನ್ನಿ, ನಿಮ್ಮ ಬೆರಳು ತೋರಿಸಿ, ಈ ಸೂಜಿಯಿಂದ ಚುಚ್ಚಿ ಸ್ವಲ್ಪ ರಕ್ತ ತೆಗೆದು ಕೊಳ್ಳುತ್ತೇನೆ. (ಸೀತಾರಾಮಯ್ಯನವರ ಬೆರಳ ರಕ್ತ ತೆಗೆದುಕ್ಕೊಂಡು ಪರೀಕ್ಷಕ ಉಪಕರಣದ ಮೇಲಿಟ್ಟು, ಸೀತಾಬಾಯಿಯ ಕಡೆ ತಿರುಗಿ) ಅಮ್ಮಾ; ನೀವಿಲ್ಲಿ ಬನ್ನಿ, ನಿಮ್ಮಬೆರಳನ್ನೂ ತೋರಿಸಿ (ಸೂಜಿಯಿಂದ ರಕ್ತ ತೆಗೆದುಕೊಳ್ಳುವನು.)

**ಸೀತಾಬಾಯಿ :** (ಕೈಯನ್ನು ಗಟ್ಟಿಯಾಗಿ ಹಿಡಿದುಕೊಂಡು) ಅಬ್ಬಬ್ಬಾ!

**ಸರೋಜ :** (ಸ್ವಗತ) ಈಶ್ವರಾ! ನಿನ್ನ ಶೋಧನೆಯೇ ಇಷ್ಟೂನೂ? ಕೈಗೆ ಬಂದದ್ದು ಕಣ್ಣಿಗೂ ಕಾಣಿಸದಿರಲಿ ಎಂಬುದೇ ನಿನ್ನ ಇಷ್ಟವೇ? ನನ್ನ ವಸ್ತುವೆಂಬ ಭಾವನೆಯಿಂದಲಾದರೂ, ಈ ಜೀವವನ್ನು ಕಾಪಾಡಿಕೊಂಡಿರುವೆನಲ್ಲ! ಅದಕ್ಕೂ ಆಪತ್ತೇ? ಡಾಕ್ಟರು ರಕ್ತ ಬೇಕೆಂದರಲ್ಲ! ಅಯ್ಯೋ! ನನ್ನ ಜೀವವನ್ನೇ ಕರೆದು ಅವರ ದೇಹದಲ್ಲೆಲ್ಲಾ ಹರಿಸಬಾರದೇ? ಅದಕ್ಕೆ ವೈದ್ಯಶಾಸ್ತ್ರದಲ್ಲಿ ಏನೂ ಮಾರ್ಗವಿಲ್ಲವೇ? ಈಶ್ವರಾ! ನನಗೆ ಒಂದು ವರಕೊಡು. ಮೂವರ ರಕ್ತದಲ್ಲಿ ನನ್ನ ರಕ್ತವೇ ಅವರ ರಕ್ತದೊಡನೆ ಹೊಂದಿಕೊಳ್ಳಲಿ. ನಾನಾಗ ಏನು ಮಾಡುವೆನೆಂಬುದನ್ನು ನೋಡುತ್ತಿರು. ನನ್ನ ಮನಸ್ಸನ್ನು ಅದರಲ್ಲಂಟಿಸಿ ನನ್ನ ಪ್ರೇಮವನ್ನು ಅದರಲ್ಲಿ ತುಂಬಿ ನನ್ನ ಜೀವವನ್ನು ಅದರೊಡನೆ ಕಳಿಸಿಬಿಡುತ್ತೇನೆ. ನಾನು ಅವರ ಜೀವದೊಡನೆ ಬೆರೆತು ಬಿಟ್ಟರೆ.....

**ಡಾಕ್ಟರ್ :** ನೋವಾಗುತ್ತೇನಮ್ಮಾ? ಅಷ್ಟೇ, ಹೋಗಿ. (ಸರೋಜಳನ್ನು ನೋಡಿ) ಬಾಮ್ಮಾ, ಇಲ್ಲಿ. ಮೊದಲು ಬೆರಳು ಸಿದ್ಧವಾಗಿದೆ. (ಚುಚ್ಚಿದನಂತರ) ಸಾಕಮ್ಮಾ,

ಹೋಗು. (ಡಾಕ್ಟರ್ ಪೆಟ್ಟಿಗೆಯಲ್ಲಿ ಯಾವುದೋ ಸಾಮಾನನ್ನು ಹುಡುಕುವನು) ಬೆಂಕಿ ಪೆಟ್ಟಿಗೆಯನ್ನು ಮನೆಯಲ್ಲೇ ಮರೆತು ಬಂದೆ. ಏನು ಮಾಡುವುದೀಗ? ಅಗತ್ಯ ಬೇಕಲ್ಲ. (ಸರೋಜ ಕೂಡಲೇ ಒಳಗೆ ಹೋಗುವಳು. ಅದನ್ನು ನೋಡಿ) ಒಳಗೆ ಹೋಗುತ್ತೀಯಾ ತಾಯಿ. ಬೆಂಕಿ ಪೆಟ್ಟಿಗೆ ತರಲು ತಾನೇ ಸರಿ.

(ಸರೋಜ ಬಂದು ಬೆಂಕಿ ಪೆಟ್ಟಿಗೆಯನ್ನು ಡಾಕ್ಟರ ಕೈಗೆ ಕೊಡುವಳು. ಅವರು ದೀಪ ಹಚ್ಚಿ ಸೂಜಿಯೊಂದನ್ನು ಕಾಯಿಸುವರು)

**ಡಾಕ್ಟರ್ :** ಸ್ವಾಮೀ! ಅದು ಕಾಯುತ್ತಿರಲಿ. ಇಲ್ಲಿ ಹತ್ತಿರ ಬಂದು ನೋಡಿ. ಮೂವರ ರಕ್ತದಲ್ಲಿ ನಿಮ್ಮ ಸೊಸೆಯ ರಕ್ತವೇ ಅನಂತನ ರಕ್ತಕ್ಕೆ ಹೊಂದಿಕೊಳ್ಳುತ್ತೆ. ಅದು ಬೆರೆತರೂ ಅವನ ರಕ್ತ ಕೆಡಲಿಲ್ಲ. ಇನ್ನು ತಡಮಾಡಿದರೆ ಒಳ್ಳೆಯದಲ್ಲ. (ಸರೋಜಳ ಕಡೆ ತಿರುಗಿ)

**ಡಾಕ್ಟರ್ :** ಏನಮ್ಮಾ! ನಿಮ್ಮ ರಕ್ತ ತೆಗೆದುಕೊಳ್ಳಲು ಒಪ್ಪಿಗೆಯೇ?

**ಸರೋಜ :** ನನ್ನ ತನು ಮನ ಆತ್ಮವೆಲ್ಲಾ ಅರ್ಪಿತವಾದ ಮೇಲೆ ರಕ್ತವನ್ನು ಕೊಡಲು ಹಿಂಜರಿದೇನೇ? (ಎಂದು ಮುಂದೆ ಬರುವಳು)

**ಡಾಕ್ಟರ್ :** (ಸಲಕರಣೆಗಳೊಡನೆ ಒಳಗೆ ಹೋಗುತ್ತಾ) ಹಾಗಾದರೆ ಸ್ವಲ್ಪ ಹೀಗೆ ಬನ್ನಿ.

(ಸರೋಜಳು ಆನಂದದಿಂದ ಒಳಗೆ ಹೋಗುವಳು. ಅತ್ತೆ ಮಾವಂದಿರು ಸಂತೋಷದಿಂದ ಉಬ್ಬಿ, ಅತ್ತಕಡೆಯೇ ನೋಡುತ್ತಿರುವರು. ಅನಂತನು ಬಿಡಲಾರದೇ ಕಣ್ಣುಬಿಟ್ಟು ಕತ್ತೆತ್ತಿ ಬಾಗಿಲುಕಡೆ ಆಶ್ಚರ್ಯ ಶೋಕಗಳಿಂದ ನೋಡುತ್ತಿರುವನು.)

**ಡಾಕ್ಟರ್ :** (ಒಳಗಿನಿಂದ) "ಏಕಮ್ಮಾ! ಹೆದರಿಕೆಯಾಗುತ್ತೆಯೇ? ಏನೂ ಇಲ್ಲ. ಸ್ವಲ್ಪ ಹೊತ್ತು ಕಣ್ಣು ಮುಚ್ಚಿ ಹಾಗೆಯೇ ಅಲ್ಲಾಡದೆ ಇರೀಮ್ಮ, ಅಮ್ಮಾ! ಸಾಕಮ್ಮಾ, ನಿಧಾನವಾಗಿ ಏಳಿ, ನೀವಿಲ್ಲಿದ್ದರೆ ನಿಂತೇ ಇರುತ್ತೀರಿ, ಅದರಿಂದ ನಿಮಗೆ ಸುಸ್ತಾಗಬಹುದು. ಒಳಗೆ ಹೋಗಿ ವಿಶ್ರಮಿಸಿಕೊಳ್ಳಿ. ಆಮೇಲೆ ಬರುವಿರಂತೆ. (ಡಾಕ್ಟರ್ ಹೊರಗೆ ಬಂದು) ಸ್ವಾಮಿ! ನೀವು ಹತ್ತಿರ ಬಂದು ಇವನ ಕೈ ಹಿಡಿದುಕೊಳ್ಳಿ. (ಇಂಜಕ್ಷನ್ ಮಾಡುತ್ತಲೂ ಅನಂತನು ಮಗ್ಗುಲಾಗುವನು. ಸ್ವಲ್ಪ ನಿಧಾನವಾಗಿ, "ಅಪ್ಪಾ! ಅಪ್ಪಾ!" ಅನ್ನುವನು.)

**ಸೀತಾರಾಮಯ್ಯ :** ಅನಂತಾ! (ಉತ್ತರವಿಲ್ಲ) ಮಗೂ! (ದುಃಖದಿಂದ) ಅನಂತಾ! ಏನು ಮಾಡಿಕೊಂಡೆ ನೋಡಿದೆಯಾ? ಮನೋಭ್ರಾಂತಿ ನೀಗಲು ಮದ್ದೇ ಇದು? ಡಾಕ್ಟರ್ ಕೃಷ್ಣಮೂರ್ತಿ ಇಲ್ಲದಿದ್ದರೆ ನನ್ನಗತಿ? ನನ್ನ ಗತಿ ಮಾತ್ರವೇ....

**ಡಾಕ್ಟರ್ :** ಸ್ವಾಮಿ! ಕಾಪಾಡಿದ್ದು ಆ ಪರಮಾತ್ಮನಾದ ಶ್ರೀಕೃಷ್ಣ. ಆತನ ಹೆಸರು ಗೊಂಡಿರುವುದಕ್ಕೇ ನನಗಿಷ್ಟು ಮಹತ್ವ. (ನಗುತ್ತಾ)

**ಸೀತಾರಾಮಯ್ಯ :** ಕೃಷ್ಣಮೂರ್ತಿ ನಿನಗಾ ಹೆಸರು ಸಲ್ಲದೇ? ನಿನಗೇನು ಕಮ್ಮಿ ಹೇಳು?

**ಡಾಕ್ಟರ್ :** ಅದಕ್ಕೇನಂತೆ ನಿಮ್ಮ ದಯೆ ಇರುವವರೆಗೂ ನನಗ್ಯಾತರಲ್ಲಿ ಕಡಿಮೆ ಹೇಳಿ? ಹೊತ್ತಾಯಿತು. ಈ ದಿನ ತುರ್ತಾಗಿ ಒಂದು ಕೇಸಿದೆ. ಇನ್ನು ನಾನು ಹೋಗಿ ಬರುತ್ತೇನೆ. ಇನ್ನು ಅನಂತನ ವಿಷಯವಾಗಿ ಚಿಂತಿಸಬೇಡಿ. ಪ್ರಜ್ಞೆ ಬಂದಿದೆ. ಅಶಕ್ತಿಯಿಂದ ಮಲಗಿದ್ದಾನಷ್ಟೇ. ಅಮ್ಮಾ! ಇನ್ನೇನೂ ಭಯವಿಲ್ಲ. ಇನ್ನು ಸ್ವಲ್ಪ ಹೊತ್ತಿಗೆ ಎಲ್ಲಾ ಸರಿಹೋಗುತ್ತೆ. ನಾನು ಬರುತ್ತೇನೆ. (ಎಂದು ಹೇಳಿ ಸಾಮಾನುಗಳನ್ನೆಲ್ಲಾ ಕೈ ಪೆಟ್ಟಿಗೆಯಲ್ಲಿಟ್ಟುಕೊಂಡು ಹೊರಡುತ್ತಾರೆ.)

**ಸೀತಾರಾಮಯ್ಯ :** ಕೃಷ್ಣಮೂರ್ತಿ! ನಿನಗಿಲ್ಲದ ಚಿಂತೆ ನನಗಿಲ್ಲ. ನಾನೂ ನಿನ್ನ ಸಂಗಡ ಬರುತ್ತೇನೆ. ಇಷ್ಟು ಸಾಮಾನುಗಳನ್ನೂ ನೀನೊಬ್ಬನೇ ಹೇಗೆ ತೆಗೆದುಕೊಂಡು ಹೋಗುವೆ? ಆ ಪೆಟ್ಟಿಗೆಯನ್ನಿಲ್ಲಿಕೊಡು. (ಸೀತಾಬಾಯಿಯ ಕಡೆ ತಿರುಗಿ) ಇದನ್ನು ತೆಗೆದು ಕೊಂಡು ಹೋಗಿ ಕೊಟ್ಟುಬಿಟ್ಟು ಇದೋ ಬಂದೆ. ಸ್ವಲ್ಪ ಎಚ್ಚರಿಕೆಯಿಂದ ನೋಡಿಕೋ. ಆಂ. (ಡಾಕ್ಟರೂ ಸೀತಾರಾಮಯ್ಯನವರೂ ಹೋಗುವರು.)

(ಅವರು ಹೊರಟು ಹೋದನಂತರ ಸೀತಾಬಾಯಿಯು ಬಂದು ಮಗನು ಮಲಗಿರುವ ಮಂಚದ ಸಮೀಪದಲ್ಲಿ ಕುಳಿತು ಅವನ ಮುಖವನ್ನೇ ನೋಡುತ್ತಿರುವಳು. ಮಲಗಿದ್ದ ಅನಂತನು ಮೆಲ್ಲಗೆ ಕಣ್ಣುಬಿಟ್ಟು ಸುತ್ತ ಮುತ್ತಲೂ ನೋಡುತ್ತಾ "ಅಮ್ಮಾ! ಅಮ್ಮಾ!!" ಎಂದು ಕೂಗುವನು)

**ಸೀತಾಬಾಯಿ :** (ಅವನಕಡೆ ತಿರುಗಿ) ಮಗೂ! ಏನಪ್ಪಾ! ಏನು ಬೇಕು?

**ಅನಂತ :** ಅಮ್ಮಾ! ಸರೋಜಾ ಎಲ್ಲಿ? ಬಹಳ ಬಾಯಾರಿಕೆಯಾಗುತ್ತೆ. ಅವಳ ಕೈಲಿ ಸ್ವಲ್ಪ ಹಾಲುಕೊಟ್ಟು ಕಳುಹಿಸುತ್ತೀಯಾ?

**ಸೀತಾಬಾಯಿ :** (ಆಶ್ಚರ್ಯದಿಂದ) ಅನಂತಾ! ನಿಜವಾಗಿಯೂ ನೀನೇ ಮಾತಾಡುತ್ತಿದ್ದೀಯಾ? ಮಗೂ! ಹೇಗಾದರೂ ನೀನು ಬದುಕಿದರೆ ಸಾಕೆಂದಿದ್ದೆ! ನೀನು ಬದುಕಿ ಎದ್ದು "ಸರೋಜಳನ್ನು ಕಳುಹಿಸು" ಎಂದು ಹೇಳುವುದನ್ನು ಕೇಳಲು ನಾನೆಷ್ಟು ಪುಣ್ಯಮಾಡಿದ್ದೆನಪ್ಪಾ! ಹೆತ್ತ ಹೊಟ್ಟೆಗೆ ಹಾಲು ಹುಯ್ದೆ. ಏನಾಶ್ಚರ್ಯಕಣೋ ಮಗೂ!!

**ಅನಂತ :** ಅಮ್ಮಾ! ಎಲ್ಲಾ ನಿಮ್ಮ ಆಶೀರ್ವಾದ. ಬೇಗ ಅವಳನ್ನು ಕಳುಹಿಸು. ಬಾಯಾರುತ್ತಿದೆ.

**ಸೀತಾಬಾಯಿ :** ಇಷ್ಟರಮಟ್ಟಿಗೆ ದೇವರು ನಿನಗೆ ಅವಳಲ್ಲಿ ಪ್ರೇಮ ಬರುವಂತೆ ಮಾಡಿದನಲ್ಲಾ, ಅಷ್ಟೇ ಸಾಕು.

(ಎಂದು ಹೇಳುತ್ತಾ ಒಳಗೆ ಹೋಗುವಳು)

-ತೆರೆ-

## ದೃಶ್ಯ ೬

(ಅಡಿಗೆ ಮನೆ, ಸರೋಜ ಹಾಲು ಕಾಯಿಸುತ್ತಿರುವಳು)

**ಸೀತಾಬಾಯಿ :** (ಪ್ರವೇಶಿಸಿ) ಸರೋಜ! ಅಲ್ಲೇನು ಮಾಡ್ತಿದೀಯಾ ತಾಯೀ? ಹಾಲು ಕಾಯಿಸ್ತಿದ್ದೀಯಾ? ಅಯ್ಯೋ! ನನ್ನ ಮುದ್ದೂ! ನಿನ್ನ ಸಹನೆಯೇ ನಿನಗೆ ಸುಖ ಕೊಟ್ಟಿತು ತಾಯೀ! ಅವನೂ ಬದುಕಿ ಅವನ ಮನಸ್ಸೂ ತಿರುಗಿತಲ್ಲ.

**ಸರೋಜ :** (ಆತುರದಿಂದ) ಅತ್ತೇ! ಏನಂದಿರಿ?

**ಸೀತಾಬಾಯಿ :** ಅವನಿಗೆ ಬಹಳ ಸುಸ್ತಾಗಿದೆಯಂತೆ, ಹಾಲುಕಾಸಿ ತೆಗೆದುಕೊಂಡು ನಿನ್ನನ್ನೇ ಬರ ಹೇಳಿದ. ಬೇಗ ಹೋಗು.

**ಸರೋಜ :** (ಆನಂದದಿಂದ) ಏನಂದಿರಿ! ನನ್ನ ನನ್ನ ಬರ ಹೇಳಿದರೇ?

**ಸೀತಾಬಾಯಿ :** ನಿನ್ನನ್ನೇ ಕಳುಹಿಸೆಂದು ಅನಂತು ಹೇಳಿದ. ಜಾಗ್ರತೆ ಹೋಗು ತಾಯಿ.

(ಸರೋಜಳು ಆನಂದದಿಂದ ನಮಸ್ಕರಿಸುವಳು)

**ಸೀತಾ :** ಸಾವಿರ ವರ್ಷಸುಮಂಗಲೆಯಾಗಿ ಬಾಳಿ ನನ್ನ ದೀಪವನ್ನು ಬೆಳಗಮ್ಮಾ (ಎಂದು ಕಣ್ಣೀರೊರಸಿ ಕೊಳ್ಳುವಳು.)

**ಸರೋಜ :** ನಿಮ್ಮ ಮಡಲಲ್ಲಿ ಬೆಳೆದಮಗುವಿಂದು ನಿಮ್ಮ ಆಶೀರ್ವಾದದಿಂದ ಜೀವನದ ಬೆಳಕು ಕಂಡಿತು.

**ಸೀತಾಬಾಯಿ :** (ಸರೋಜಳನ್ನು ಆಲಂಗಿಸಿಕೊಂಡು) ಸರೋಜ, ನೀನು ಸುಂದರಿ ಮಾತ್ರ ಅಂದುಕೊಂಡಿದ್ದೆ. ಜಾಣೆ ಅಂದುಕೊಂಡಿದ್ದೆ. ಈ ರೀತಿ ಗೌರವ, ವಿಧೇಯತೆ, ವಿನಯ ಯಾರಿಗಿದೆಯಮ್ಮಾ, ತಾಯಿ! ಮನೆ ಬೆಳಗಲು ಬಂದ ಮಹಾಲಕ್ಷ್ಮೀ!! ಮನೆಯ ಜ್ಯೋತಿ!! ಮಹರಾಯಗಿತ್ತಿಯಾಗಿ ನೂರಾರು ವರ್ಷ ಮಾಂಗಲ್ಯ ಕಟ್ಟಿಕೊಂಡು ಸುಖವಾಗಿ ಬಾಳುತಾಯಿ! ನನಗಿರುವವನು ಒಬ್ಬನೇ ಒಬ್ಬ ಮಗ. ನಿನ್ನಿಂದಲೇ ನನ್ನ ಕುಲ ಬೆಳಗಬೇಕು ತಾಯಿ.

**ಅನಂತ :** (ಒಳಗಿನಿಂದ) ಸರೋಜ, ಸರೋಜ. (ಯಾತನೆಗೊಂಡ ಧ್ವನಿಯಲ್ಲಿ)

ಸೀತಾಬಾಯಿ : ಅನಂತು ಕೂಗುತ್ತಿರುವುದು ಕೇಳಿಸಿತೇ? ನಾನು ಹೇಳಿದ್ದು ನಿಜ ತಾನೇ. ಬೇಗ ಹೋಗು ತಾಯಿ.

**ಸರೋಜ :** ಭಕ್ತರನ್ನು ಸಂಕಟದೊರೆಯಲ್ಲಿ ಉಜ್ಜಿ ಪುಟಕ್ಕಿಟ್ಟು ಅಪ್ಪಟ ಚಿನ್ನವೆನಿಸಿದ ನಿನ್ನ ಅಪಾರ ಮಹಿಮೆಯು ಇಂದು ತಿಳಿಯಿತು.

## ದೃಶ್ಯ ೭

(ಅನಂತನು ಮಲಗಿರುವ ಕೊಠಡಿ)

**ಅನಂತ :** (ಕಾಲು ಹೆಜ್ಜೆಯ ಶಬ್ದ ಕೇಳಿಯೂ ಸರೋಜಳು ಬಾರದಿರುವುದು ಕಂಡು) ಸರೋಜ, ಏಕೆ ಅಲ್ಲೇ ನಿಂತಿರುವೆ. ಬಾ ಒಳಗೆ, (ಸರೋಜ ಒಳಗಡೆ ಬರುವಳು) (ಬಿಕ್ಕಿಬಿಕ್ಕಿ ಅಳುತ್ತಾ ತೊದಲಿ ಮೆಲ್ಲನೆ) ಸರೋಜಾ! ನಿನ್ನನ್ನು... ಕಪ್ಪೆಂದು... ತಿಳಿದು... ನಿರಾಕರಿಸಿದೆ.... ಕಷ್ಟ ಪಡಿಸಿದೆ... ನೀನು "ಕಪ್ಪಲ್ಲ-ಕಬ್ಬು" ನನ್ನದು ಮಹಾಪರಾಧವಾಯ್ತು. ದೇವರು ಯಾವ ನರಕ ಸೃಷ್ಟಿಸಿರುವನೋ ನನಗೆ, ಶಾಸ್ತ್ರಿಯಂತಹ ಆಪ್ತರ ಮಾತು, ಹೆತ್ತ ತಂದೆ ತಾಯಿಗಳ ಮಾತು ನನಗೆ ವಿಷವಾಯಿತು... ಅಯ್ಯೋ! ಹಾಳು ಮನಸ್ಸೇ!! ಕತ್ತಲೆಂದು ಭ್ರಮಿಸಿ ಅಂಜುವೆ. ಬೆಳಕೆಂದು ತಿಳಿದು ನಲಿವೆ. ಕತ್ತಲು ಬೆಳಕುಗಳ ಬಾಹ್ಯಾಡಂಬರದಲ್ಲಿ ತೊಳಲುವೆ. ಕತ್ತಲು ಬೆಳಕುಗಳಿಂದ ದೂರಾದ ಜ್ಯೋತಿಗಳ ಜ್ಯೋತಿಯಾಗಿ ಬೆಳಗುವ ಆತ್ಮಜ್ಯೋತಿಯು ವಿಶ್ವದಲ್ಲಿ ಪ್ರೇಮಮೂರ್ತಿಯಾಗಿ ಬೆಳಗುತ್ತಿರಲಿ. ಅದನ್ನೂ ಕಾಣದೆ ಕುರುಡಾಳುವೆ. ವಿಷದೃಷ್ಟಿಯಿಂದ ಏಕೆ ವಿಶ್ವವನ್ನು ಕಂಡು ದೈವ ಸೃಷ್ಟಿಯನ್ನು ದ್ವೇಷಿಸುವೆ? ಅಮೃತತತ್ವವನ್ನು ಸವಿದು ಆನಂದದಲ್ಲಿ ಬೆರೆಯ ಬಾರದೆ? ಹಾ! (ಆಯಾಸದಿಂದ ಹೊರಳುವನು.)

**ಸರೋಜ :** (ಹತ್ತಿರ ಬಂದು ತಲೆ ನೇವರಿಸುತ್ತಾ ಕಣ್ಣೀರು ಒರೆಸಿಕೊಂಡು) ಸ್ವಲ್ಪ ಸುಧಾರಿಸಿಕೊಳ್ಳಿ. ಒಂದೇ ಸಮನೆ ಮಾತಾಡಿ ಆಯಾಸಗೊಳ್ಳಬೇಡಿರಿ. ಮನಸ್ಸಿನ ಉದ್ವೇಗವನ್ನು ತಡೆದುಕೊಳ್ಳಿ. ಇದರಲ್ಲಿ ನಿಮ್ಮ ಅಪರಾಧವೇನಿದೆ? ಅಥವಾ ನನ್ನದಾದರೂ ಏನು? ದೈವಲೀಲೆಗೆ ದೈವನಿಯಮಕ್ಕೆ ಒಳಗಾಗಿಯೇ ವಿಶ್ವವು ನಡೆಯಬೇಕು. ನೀವೆಂದಂತೆಯೆ ಪಾಪ, ಪುಣ್ಯಭೀತಿಯೂ ಸಹ ಮನಸ್ಸಿನ ಪರಿಣಾಮವೇ. ಲೋಕದಲ್ಲಿ ಎಲ್ಲ ಕರ್ತವ್ಯವನ್ನು ಆತ್ಮನಿಗಾಗಿ ಮಾಡಬೇಕು. ಆತ್ಮನಿಗೇ ಅರ್ಪಿಸಬೇಕು. ನಮ್ಮಗಾಗಿ ಏನುತಾನೆ ಮಾಡಬಲ್ಲೆವು. ಚೈತನ್ಯದ ಚೈತನ್ಯವಾಗಿ ಆಡಿಸುವ ಪರಮಾತ್ಮನದೇ ಎಲ್ಲವಾಗಿರುವಾಗ ನಾವು ನೀವು ಎಲ್ಲರೂ ಪಾತ್ರಧಾರಿಗಳಷ್ಟೇ! ಸೂತ್ರಧಾರನಾತನು....

**ಅನಂತ :** ಸರೋಜಾ! ನಿಜವಾಗಿಯೂ ನೀನು ನನ್ನ ಗುರು, ನನ್ನ ಆರಾಧ್ಯ ದೇವತೆ. ಇಗೋ ನಿನಗೆ ಸಾಷ್ಟಾಂಗ ನಮಸ್ಕಾರ. (ಏಳ ಹೋಗುವನು ಸರೋಜ 'ಬೇಡಿಬೇಡಿ' ಎಂದು ತಡೆದಳು. ಮರೆಯಲ್ಲೇ ನಿಂತು ನೋಡುತ್ತಿದ್ದ ಮಾತಪಿತೃಗಳೂ ಶಾಸ್ತ್ರಿಯೂ ಆನಂದದಿಂದ ಮುಂದೆ ಬರುವರು. ಸರೋಜ ನಾಚಿಕೆಯಿಂದ ದೂರಸರಿವಳು)

**ತಂದೆ :** ಅನಂತಾ! ಮನದ ಕತ್ತಲ ಹರಿಸಿದ ದೇವಿ ಈಕೆ. ನೀನೂ ನಾನೂ ವಯಸ್ಸಿನಲ್ಲಿ ದೊಡ್ಡವರಿರಬಹುದು. ಆದರೂ ಜ್ಞಾನದಲ್ಲಿ ಎಲ್ಲರಿಗೂ ಮಿಗಿಲಾದವಳು ಈಕೆಯೇ ನಮಗಿನ್ನು ಮಾರ್ಗ ದರ್ಶಕಳಾಗಲಿ.

**ಸೀತಾಬಾಯಿ :** (ಸೊಸೆಯನ್ನು ತಬ್ಬಿಕೊಂಡು) ಅನಂತೂ, ನನ್ನ ಮನೆ ದೇವತೆಯು ಸಹಿಸಿದ ಕಷ್ಟಗಳನ್ನು ನೆನೆಸಿಕೊಂಡರೆ ರೋಮಾಂಚವಾಗುತ್ತದೆ. ಆದರೆ ಆ ಕಹಿಯನ್ನು ಮರೆವೆನು. ಇನ್ನು ಈಕೆಯ ಜ್ಯೋತಿ ಪಥದಲ್ಲೇ ನಾವೆಲ್ಲ ನಡೆಯಬೇಕು ಮಗೂ.

**ಶಾಸ್ತ್ರಿ :** ಸ್ತ್ರೀಯು ಜಗದ ಆಧಾರ ದೇವತೆ. ಆಕೆಯ ಮನವೇ ಜಗದ ಆಗುಹೋಗುಗಳ ಕಾರಣ. ಆಕೆಯಿಂದಲೇ ಜಗತ್ತಿಗೆ ಕಲ್ಯಾಣ, ಜಗದ ಲಯ. ಅನಂತಾ! ಈ ತತ್ವಗಳನ್ನು ಗುರುಕೃಪೆಯಿಂದ ಅನುಭವಕ್ಕೆ ತಂದುಕೊಂಡು ನನ್ನ ಅತ್ತಿಗೆಗೆ ತಿಳಿಸಿದೆ. ಗುರು ದೇವನ ಅಜ್ಞೆಯಂತೆ ಸಹನೆಯ ಬೋಧನೆ ಮಾಡಿದೆ. ಆದರೇನು? "ಜಗತ್ತು ಬೋಧನೆಯಂತೆ ನಡೆದೀತೇ" ಎಂಬ ಶಂಕೆ ಇತ್ತು. ಹಾಗೆ ನಡೆಯಲು ಆದರ್ಶ ವ್ಯಕ್ತಿಗಳಿಂದ ಮಾತ್ರ ಸಾಧ್ಯ. ನನ್ನ ಅತ್ತಿಗೆಯ ಸಹನಶೀಲಗಳು ಜಗತ್ತಿಗೆ ಮಾದರಿಯಾಗಲಿ. ಸ್ತ್ರಿಯು ಜಗತ್ತನ್ನು ತಿದ್ದಿ ಆನಂದಾಮೃತದಲ್ಲಿ ಲೀನಮಾಡಲಿ.

**ಜೈ ಗುರುದೇವ!!**

**-ತೆರೆ-**

**ಮಂಗಳ**

ಅಭಿವ್ಯಕ್ತಿ-ಇಂದು

(ನಮ್ಮ ಉದಯೋನ್ಮುಖಿ ಲೇಖಕಿಯರ ಅಭಿವ್ಯಕ್ತಿಯ ಮಾದರಿಯೊಂದನ್ನು ನಮ್ಮ ಸಂಶೋಧನಾ ವಿದ್ಯಾರ್ಥಿನಿಯ ಕವಿತೆಯಲ್ಲಿ ನೋಡಬಹುದಾಗಿದೆ.)

## ರಂಗೋಲೆ

**ಸುಜಾತ ಅಕ್ಕಿ**

ನಿಮ್ಮ ಮನೆಯ ಅಂಗಳದ ಹುಡುಗಿ ನಾನು
ಪ್ರತಿನಿತ್ಯ ಬರುವೆ ಬ್ರಾಹ್ಮಿ ಮುಹೂರ್ತದ
ಮುಂಜಾವಿನ ಕೆಂಪಡರಿದ ತಂಪಿನ
ನೇಸರನ ಜತೆಯಾಗಿ ನಿಮ್ಮಂಗಳದ ವನಿತೆಯಾಗಿ

ಗಿಡವಾಗಿ, ಮರವಾಗಿ, ಹೂವಾಗಿ, ಕಾಯಾಗಿ, ಹಣ್ಣಾಗಿ
ಪಕ್ಷಿಯಾಗಿ, ಪ್ರಾಣಿಯಾಗಿ, ಬಾನಾಡಿಯಾಗಿ
ಕೈಮುಗಿವ ಮುಗ್ಧ ಬಾಲೆಯಾಗಿ, ಹೆಡೆ ಬಿಚ್ಚಿದ ನಾಗಿನಿಯಾಗಿ
ಒಮೊಮ್ಮೆ ಭಾವನೆಗಳೇ ಇಲ್ಲದ ಗೆರೆಗಳಾಗಿ

ಬರುವೆ ನಾನು ಆಗಾಗ ಸ್ಫೂರ್ತಿ ತುಂಬಿದ
ಗರಿಬಿಚ್ಚಿದ ನವಿಲಾಗಿ ಪುಕ್ಕ ಬಿಚ್ಚಿದ ಗಿಳಿಯಾಗಿ
ಪುಚ್ಚ ತೆರೆದ ಗುಬ್ಬಿಯಾಗಿ, ದೇವರೂ ಆಗಿ ಆಸೆಗಳೇ ಇಲ್ಲದ
ದವನದ ಎಲೆಗಳಾಗಿ, ಅಸ್ತಿತ್ವವಿಲ್ಲದ ಚುಕ್ಕೆಯಾಗಿ

ಪುನರಪಿ ಮರಣ ಪುನರಪಿ ಜನನವಾಗಿ
ನಿತ್ಯ ಮರಣ, ನಿತ್ಯ ನವೀನ ಜನಿತಳಾಗಿ
ಬರುವೆ ನಾನು ಮತ್ತೆ ಮತ್ತೆ ನಿಮ್ಮಂಗಳದ
ಹುಡುಗಿಯಾಗಿ ರಂಗೋಲೆಯಾಗಿ

## ಈ ಸಂಚಿಕೆಯಲ್ಲಿ

**ಡಾ. ಬಿ.ಎಂ. ಪುಟ್ಟಯ್ಯ**
ಅಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ,ಹಂಪಿ
ವಿದ್ಯಾರಣ್ಯ ೫೮೩ ೨೭೬

**ವೈ.ಎಸ್. ಜ್ಯೋತಿ ಶಶಿಕುಮಾರ್**
C/o ಶರಧಿ, ೧೧೫/೧೦, ೧೫ನೇ ಕ್ರಾಸ್
ವೈಯ್ಯಾಲಿಕಾವಲ್
ಬೆಂಗಳೂರು ೫೬೦ ೦೦೩

**ಎಸ್.ಕೆ. ನಾಗರತ್ನರಾವ್**
ಶರಧಿ, ೧೧೫/೧೦, ೧೫ನೇ ಕ್ರಾಸ್
ವೈಯ್ಯಾಲಿಕಾವಲ್
ಬೆಂಗಳೂರು ೫೬೦ ೦೦೩

**ಚಂದ್ರಮತಿ ಸೋಂದ**
ನಂ. ೫೫೧/ಎಸ್ 'ಚಿಂತನ'
೨೪ನೇ ತಿರುವು, ೨ನೇ ಹಂತ
ಹೆಬ್ಬಾಳು
ಮೈಸೂರು ೫೭೦ ೦೧೭

**ವನಮಾಲ ಕಟ್ಟೇಗೌಡರ**
ಮಾತೃ ಕುಟೀರ
ಪುತ್ತೂರು ಆಸ್ಪತ್ರೆ ಹಿಂಭಾಗ
ಗಾಂಧೀ ಕಾಲೋನಿ
ಹೊಸಪೇಟೆ ೫೮೩ ೨೦೩

**ಕೆ.ಎಂ. ವಿಜಯಲಕ್ಷ್ಮಿ**
ನಂ.೫೯, ೭ನೇ ಮೇನ್,
೫ನೇ ಬ್ಲಾಕ್, ಜಯನಗರ
ಬೆಂಗಳೂರು ೫೬೦ ೦೪೧

**ಶ್ರೀ ಗೋವಿಂದರಾಜು**
C/o ಶಿಕ್ಷಣ ವಿಭಾಗ
ಸಾರ್ವಜನಿಕ ಮತ್ತು ಆರ್ಥಿಕ ಬದಲಾವಣೆ
ಅಧ್ಯಯನ ಸಂಸ್ಥೆ
ಬೆಂಗಳೂರು ೫೬೦ ೦೭೨

**ಡಾ. ಉಷಾ ರಾಮಕುಮಾರ್**
ಶಿಕ್ಷಣ ವಿಭಾಗ
ಸಾರ್ವಜನಿಕ ಮತ್ತು ಆರ್ಥಿಕ ಬದಲಾವಣೆ
ಅಧ್ಯಯನ ಸಂಸ್ಥೆ
ಬೆಂಗಳೂರು ೫೬೦ ೦೭೨

**ಡಾ. ಮಲ್ಲಿಕಾಘಂಟಿ**
ಪ್ರವಾಚಕರು
ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರ
ಗುಲಬರ್ಗಾ ವಿಶ್ವವಿದ್ಯಾಲಯ
ಸಂಡೂರು

**ಡಾ. ಸುಮಿತ್ರಾಬಾಯಿ**
ನಂ.೭೩/೧೫, ೫ನೇ ಕ್ರಾಸ್
೩ನೇ ಮೇನ್, ಹನುಮಂತನಗರ
ಬೆಂಗಳೂರು ೫೬೦ ೦೧೯

**ಡಾ. ವಿಜಯಾ**
ನಂ.೮, ೨೫ನೇ ಮುಖ್ಯರಸ್ತೆ
ಮುನೇಶ್ವರ ಬ್ಲಾಕ್
ಗಿರಿನಗರ
ಬೆಂಗಳೂರು ೫೬೦ ೦೮೫

**ಬಿ. ಜಯಶ್ರೀ**
ನಂ.೮, ೨೫ನೇ ಮುಖ್ಯರಸ್ತೆ
ಮುನೇಶ್ವರ ಬ್ಲಾಕ್
ಗಿರಿನಗರ
ಬೆಂಗಳೂರು ೫೬೦ ೦೮೫

**ಡಾ. ಎಂ. ಉಷಾ**
ಅಧ್ಯಾಪಕರು
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸುಜಾತ ಅಕ್ಕಿ**
ಸಂಶೋಧನಾ ವಿದ್ಯಾರ್ಥಿನಿ
ಜಾನಪದ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಮಹಿಳೆಯ ಅಸ್ಮಿತೆ, ಅಸ್ತಿತ್ವಗಳನ್ನು ಗುರುತಿಸುವ, ಅವಳ ಬದುಕನ್ನು ಸುಗಮವಾಗಿಸುವ ದಿಸೆಯಲ್ಲಿ ಚಿಂತನೆ ನಡೆಸುವ ಮಾಧ್ಯಮಗಳಿಗಾಗಿ ಹುಡುಕಾಟ ನಡೆಸಬೇಕಿದೆ. ಏಕೆಂದರೆ ಈವರೆಗೂ ಈ ಪುರುಷಪ್ರಧಾನ ಸಮಾಜಕ್ಕೆ ಮಹಿಳೆಯನ್ನು ದುಡಿಸಿಕೊಳ್ಳುವುದು ಹೇಗೆ ಎಂಬುದೇ ಚಿಂತೆಯಾಗಿದೆಯೇ ಹೊರತು ಅವಳ ಅಗತ್ಯಗಳನ್ನು ಗಮನಿಸಬೇಕೆಂದು ಅನಿಸಿದ್ದಿಲ್ಲ. ಇಂದಿನ ಜಾಗ್ರತ ಮಹಿಳೆ ತನ್ನ ವರ್ತಮಾನ, ಭವಿಷ್ಯಗಳನ್ನು ತಿದ್ದಿ ರೂಪಿಸುವ ಸಾಮರ್ಥ್ಯವನ್ನು ಕ್ರಮೇಣ ಪಡೆಯುತ್ತಿದ್ದಾಳೆ. ಈ ಹಂತದಲ್ಲಿ ಗಂಭೀರವಾದ ಚಿಂತನೆ, ಚರ್ಚೆ, ಸಲಹೆ, ಸೂಚನೆಗಳನ್ನು ಕೊಡುತ್ತಾ ಅವಳ ಪ್ರಯತ್ನಕ್ಕೆ ನೆರವಾಗುವ ಪತ್ರಿಕೆಗಳ ಅಗತ್ಯವನ್ನು ಪೂರೈಸುವ ಪ್ರಯತ್ನವಾಗಿ ಈ ಮಹಿಳಾ ಅಧ್ಯಯನ ಪತ್ರಿಕೆ ಕೆಲಸ ಮಾಡುತ್ತಿದೆ. ಇಲ್ಲಿನ ಚಿಂತನೆ, ಚರ್ಚೆಗಳು ತಾತ್ತ್ವಿಕ ನೆಲೆಯ ಶೋಧಗಳಲ್ಲಿರುವ ವಿದ್ವಾಂಸರೂ ಕ್ರಿಯಾಕ್ಷೇತ್ರಗಳಲ್ಲಿರುವ ಕಾರ್ಯಕರ್ತರೂ ಪರಸ್ಪರ ಸಂವಾದ ನಡೆಸಲು ನೆರವಾಗುವಂತಿರಲಿ ಎಂಬ ಆಶಯದವಾಗಿವೆ.